೨೩



ಜುಲೈ - ಸೆಪ್ಟೆಂಬರ್ ೨೦೦೨

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿ ತ್ರೈಮಾಸಿಕ

ಸಂಪಾದಕರು

ಡಾ. ಮಲ್ಲಿಕಾ ಘಂಟಿ

## ದಯವಿಟ್ಟು ಗಮನಿಸಿ

☆ ಅಕಾಡೆಮಿಯ ಎಲ್ಲ ಪ್ರಕಟಣೆಗಳಿಗೆ ಮುಖ ಬೆಲೆಯ ಶೇ. ೨೦ ರಷ್ಟು ರಿಯಾಯಿತಿ ನೀಡಲಾಗುವುದು.

☆ ಒಂದು ಸಾವಿರ ರೂಪಾಯಿಗಳಿಗೆ ಮೇಲ್ಪಟ್ಟು ಪುಸ್ತಕಗಳನ್ನು ಖರೀದಿಸಿದರೆ ಶೇ. ೩೩ರಷ್ಟು ರಿಯಾಯಿತಿಯಿದೆ.

☆ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ಪ್ರಕಟಿಸುತ್ತಿರುವ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ಕ್ಕೆ ಚಂದಾದಾರರಾಗಿರಿ.

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ

ಜುಲೈ – ಸೆಪ್ಟಂಬರ್ ೨೦೦೭

ಸಂಪಾದಕರು

ಡಾ. ಮಲ್ಲಿಕಾ ಘಂಟಿ



ಕರ್ನಾಟಕ ಸಾಹಿತ್ಯ ಅಕಾಡೆಮಿ

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು–೫೬೦ ೦೦೨

✆ ೦೮೦–೨೨೨೧ ೧೭೩೦ / ೨೨೧೧೦೬೮೦

**ANIKETHANA : A Literary Journal (Quarterly)**

**Edited by** : **Dr. Mallika Ghanti**

**Published by** : **V. N. Mallikarjunaswamy,** Registrar, Karnataka Sahithya Academy, Kannada Bhavana, J.C. Road, Bengalooru-02.

Pages : V + 163

Registration No. 45646/88

ಸಂಪುಟ : ೧೯

ಸಂಚಿಕೆ : ೧

ಪ್ರತಿಗಳು : ೧೫೦೦

ಪುಟಗಳು : V + ೧೬೩

**ಪ್ರಕಾಶಕರು :**

**ವಿ. ಎನ್. ಮಲ್ಲಿಕಾರ್ಜುನಸ್ವಾಮಿ**

ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ,

ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು– ೫೬೦ ೦೦೨

ಬಿಡಿ ಪ್ರತಿ : ರೂ. ೩೦/–

ವಾರ್ಷಿಕ ಚಂದಾ : ರೂ. ೧೦೦/–

ಆಜೀವ ಚಂದಾ : ರೂ. ೩೦೦/–

ಮುಖಪುಟ ಕಲೆ : ಕೃಷ್ಣ ಎಂ ರಾಯಚೂರು

ಕೃಪೆ : ಕರ್ನಾಟಕ ಲಲಿತಕಲಾ ಅಕಾಡೆಮಿ

ಮುದ್ರಕರು : ಭಾಗ್ಯಂ ಬೈಂಡಿಂಗ್ ವರ್ಕ್ಸ್
ನಂ. ೨೫/೧, ೧ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ
ನ್ಯೂ ಟಿಂಬರ್ ಯಾರ್ಡ್ ಲೇಔಟ್
ಮೈಸೂರು ರಸ್ತೆ ಬೆಂಗಳೂರು – ೫೬೦ ೦೨೬
ದೂರವಾಣಿ : ೨೬೭೫೮೨೮೦, ಫ್ಯಾಕ್ಸ್ : ೨೬೭೫೯೦೮೮

# ಸಂಪಾದಕೀಯ

ನಿಗದಿತ ವೇಳೆಯಲ್ಲಿ ಸಂಚಿಕೆಯನ್ನು ಸಿದ್ಧಗೊಳಿಸಲು ಸಾಧ್ಯವಾಗದಿದ್ದಕ್ಕೆ ವಿನಯದಿಂದ ಓದುಗರಲ್ಲಿ ಕ್ಷಮೆಕೋರುವೆ. ಕೊಳ್ಳುಬಾಕ ಸಂಸ್ಕೃತಿಯನ್ನು ಹೆತ್ತ ಅಮೇರಿಕಾ ವಿಶ್ವದ ಮೂಗು ಹಿಡಿದು ಉಸಿರುಗಟ್ಟಿದ ಹೊತ್ತಿನಲ್ಲಿಯೂ ಭಾರತದ ಆರ್ಥಿಕತೆ ದಮ್ಮು ಹತ್ತದೆ, ಸರಾಗವಾಗಿ ಉಸಿರೆಳೆದುಕೊಳ್ಳುವ ತಾಕತ್ತು ಉಳಿಸಿಕೊಂಡಿರುವುದರಲ್ಲಿ ಈ ನೆಲದ ತಾಳಿಕೆಯ ಗುಣವಿದೆ. ಭೌತಿಕ ಸುಖದ ಬೆನ್ನುಹತ್ತಿದ ಅಮೇರಿಕದಂತಹ ದೇಶಗಳು ದಿಗಿಲು ಹುಟ್ಟಿಸಿವೆ. ಜಾಗತೀಕರಣದ ಹೊಡೆತಕ್ಕೆ ತತ್ತರಿಸಿದ ಸಣ್ಣ-ಪುಟ್ಟ ದೇಶಗಳು ಇಂದೇನಾದರೂ ಉಳಿದುಕೊಂಡಿವೆಯೆಂದರೆ ಅವುಗಳ ಸಾಂಸ್ಕೃತಿಕ ಮತ್ತು ದೇಶೀ ಆರ್ಥಿಕ ನೀತಿಯಿಂದ ಎನ್ನುವುದನ್ನು ಗಮನಿಸಬೇಕಾಗಿದೆ. ಹಿಡಿ ಒಡಲನ್ನು ಹಿಡಿತದಲ್ಲಿಟ್ಟುಕೊಳ್ಳದ ಮನುಷ್ಯನ ಅವಿವೇಕನವಿಂದು ಹಲವಾರು ಆಪತ್ತುಗಳನ್ನು ಮೈಮೇಲೆ ಎಳೆದುಕೊಂಡಿದೆ. ತತ್ವರಹಿತವಾದ ಮನುಷ್ಯನ ಬದುಕಿನ ಚುಕ್ಕಾಣಿ ದುರಾಸೆಯ ಬಿರುಗಾಳಿಗೆ ಸಿಕ್ಕು ತತ್ತರಿಸುತ್ತಿದೆ. ದೇಶದಲ್ಲಿ ಪ್ರಜಾಪ್ರಭುತ್ವದ ಆಶಯಗಳಿಗೆ ವಿರುದ್ಧವಾದ ಹಿತಾಸಕ್ತಿಗಳು ಕ್ಷಣಕಾಲ ವಿಜೃಂಭಿಸಿದಾಗ ಸಾಮಾನ್ಯನನ್ನು ಒಳಗೊಂಡ ಹಾಗೇ ಪ್ರಜ್ಞಾವಂತರಲ್ಲಿ ದಿಗಿಲು ಹುಟ್ಟಿತ್ತು. ಈ ದಿಗಿಲಿಗೆ ಪರಿಹಾರವೆನ್ನುವಂತೆ ಮತದಾರ ಪ್ರಭು ವಿವೇಕಯುತವಾದ ನಿರ್ಣಯವನ್ನು ಸರಿಯಾದ ಸಮಯದಲ್ಲಿ ಮೌನವಾಗಿ ತೆಗೆದುಕೊಂಡು ಪ್ರಜಾಪ್ರಭುತ್ವದ ಕಣ್ಣಿಗೆ ಕನಸುಗಳನ್ನು ತುಂಬಿರುವನು. ಸಾಮಾಜಿಕ ತಲ್ಲಣ ಆತಂಕಗಳನ್ನು ನೋಡುತ್ತ ಕವಿ, ಕಲಾವಿದ, ಸಾಹಿತಿ, ಪ್ರಜ್ಞಾವಂತ ಸುಮ್ಮನೆ ಕುಳಿತುಕೊಳ್ಳುವುದು ಚರಿತ್ರೆಗೆ ಬರೆಯುವ ದ್ರೋಹ. ಸುತ್ತಲೂ ಅಸಹಾಯಕತೆ ಆವರಿಸಿದಾಗ ಸೃಜನಶೀಲ ಶಕ್ತಿ ಕ್ಷಣ ಹೊತ್ತು ಕ್ರಿಯಾಶೀಲತೆಯನ್ನು ಮರೆಯಬಹುದು. ಹರಿಯುವುದೆ ನೀರಿನ ಗುಣವಾದಂತೆ ಅಭಿಪ್ರಾಯವನ್ನು, ಅನಿಸಿಕೆಯನ್ನು ವ್ಯಕ್ತಪಡಿಸುವುದೆ ಜೀವಂತಿಕೆಯ ಲಕ್ಷಣವಾಗಿರುವಾಗ ಅದು ತನ್ನಷ್ಟಕ್ಕೆ ತಾನೇ ಮೂಡಿ ಜಗತ್ತಿನುದ್ದಕ್ಕೂ ಚಾಚಿಕೊಂಡಿರುತ್ತದೆ.

ಹತಾಶೆಗೆ ಶರಣಾಗಿರುವ ಮನುಷ್ಯನ ಸಾಮಾಜಿಕ ಪ್ರಜ್ಞೆಗೆ ಮತ್ತೆ ಚೈತನ್ಯ ತುಂಬಿ ಎದ್ದು ನಿಲ್ಲಿಸುವ, ಊರುಗೋಲು ನೀಡುವುದಕ್ಕಾದರೂ ಬರಿದಾದ ಮನಸ್ಸು, ಬುದ್ಧಿಯನ್ನು ಶ್ರದ್ಧೆಯಿಂದ ತುಂಬಿಕೊಳ್ಳುವ ಅಗತ್ಯವಿದೆ. ಜೀವ, ಭಾವಕೋಶಗಳೆಲ್ಲ ಖಾಲಿ ಖಾಲಿಯಾದ ಈ ಹೊತ್ತಿಗೆ ಅಕ್ಕ ಪಕ್ಕ ಕೈಚಾಚಿ ಆಸರೆಗಳನ್ನು ತಟ್ಟಿಕೊಳ್ಳುವ ಅಗತ್ಯವಿದೆ. ಸಾಹಿತ್ಯ, ಕಲೆಗಳ ಕಾಲ ಮುಗಿಯಿತು. ಅವುಗಳಿಂದ ಇವತ್ತಿನ ಭೀಕರ

ವಾಸ್ತವಕ್ಕೆ ಕನ್ನಡಿ ಹಿಡಿಯುವುದಾದೀತೇ ಎಂಬ ಅನುಮಾನಗಳಿದ್ದರೆ ತಪ್ಪಲ್ಲ. ನಮ್ಮೊಳಗಿನ, ನಮ್ಮ ಸುತ್ತಮುತ್ತಲಿನ ಕತ್ತಲೆಯನ್ನು ಕರಗಿಸಲು ಪುಟ್ಟ ಹಣತೆಯೊಂದರ ಅಗತ್ಯವಿದೆ. ಈ ಹಣತೆ ಮಣ್ಣಿನದಾದರೇನು ಹೊನ್ನಿನದಾದರೇನು ಬೆಳಕು ನೀಡಿದರೆ ಸಾಕಲ್ಲವೆ? ಹಣತೆಗಳಂತಿರುವ ಅನ್ಯ ಭಾಷೆಯ ಭಾವಕೋಶಗಳನ್ನು ಪರಿಚಯಿಸಿಕೊಳ್ಳುವುದೊಂದು ಜವಾಬ್ದಾರಿಯೂ ಹೌದು. ಇಂತಹ ಅರ್ಥಪೂರ್ಣ ಜವಾಬ್ದಾರಿಯಂಗವಾಗಿ ಈ ಸಂಚಿಕೆಯಲ್ಲಿ ಅನ್ಯ ಭಾಷೆಯ ಪ್ರಸಿದ್ಧ ಲೇಖಕರ ಕಥೆ, ಕವನ, ನಾಟಕಗಳ ಅನುವಾದಗಳು ಮತ್ತು ಕನ್ನಡದ ಕಂಪು ಹೊತ್ತುಕೊಂಡು ನಿಮ್ಮ ಕೈಗೆ ಬರುತ್ತಿರುವ ಈ ಸಂಚಿಕೆಗೆ ನಿಮ್ಮ ಪ್ರೀತಿಯನ್ನು ಗೆಲ್ಲುವುದೆಂಬ ವಿಶ್ವಾಸವಿದೆ.

ತಮಿಳ್ ಸೆಲ್ವಿಯವರು ತಮಿಳು ಮೂಲದ 'ರಬ್ಬರ್‌ಮಾಮಾ' ಕಥೆ ಕಣ್ಮರೆಯಾಗುತ್ತಿರುವ ಮಾನವೀಯತೆ, ಅಂತಃಕರಣದ ಬಗ್ಗೆ ಗಂಭೀರವಾಗಿ ಆಲೋಚಿಸುವಂತೆ ಮಾಡುತ್ತದೆ. ಬಲಿಷ್ಠತೆಗೆ ಮಾತ್ರ ಬದುಕುವ ಹಕ್ಕು ಎನ್ನುವ ಅಮಾನವೀಯ ಮತ್ತು ಅತಾರ್ಕಿಕತೆಯನ್ನು ಕೇವಲ ಇಂದು ನೋಡುತ್ತಿಲ್ಲ. ಇದು ಎಲ್ಲ ಕಾಲದಲ್ಲಿಯೂ ಇದೆ. ಈ ದೌರ್ಬಲ್ಯಗಳನ್ನು ಮೆಟ್ಟುವ ಮನುಷ್ಯನೊಳಗಿನ ಅಹಿಂಸೆ, ಮಾನವೀಯತೆ, ಜೀವಪ್ರೀತಿ–ಗುಣಗಳೆಲ್ಲ ಹುರಿಗೊಂಡು ಹೊರಬಂದರೆ ಎಂತಹ ಪ್ರಸಂಗವನ್ನಾದರೂ ಎದುರಿಸಲು ಸಾಧ್ಯವೆಂಬುದನ್ನು ಚರಿತ್ರೆಯಲ್ಲಿ ಹಲವು ಬಾರಿ ನಾವು ಕಂಡಿದ್ದೇವೆ. ಟಾಲ್‌ಸ್ಟಾಯ್‌ನಂತಹ ಪ್ರಸಿದ್ಧ ರಶಿಯನ್ ಲೇಖಕನ 'ಇಬ್ಬರು ವೃದ್ಧರು' ಕಥೆಯನ್ನು ಡಾ. ಬಸವರಾಜ ಡೋಣೂರವರು ಅನುವಾದಿಸಿ ಕನ್ನಡದ ಓದುಗರಿಗೆ ಉಪಕಾರ ಮಾಡಿರುವರು. ಸಾಮಾಜಿಕ ಕ್ಲೇಶಕ್ಕೆ ತತ್ತರಿಸಿದ ಮನುಷ್ಯ ಜೀವಕ್ಕೆ ಈ ಕಥೆಯೊಂದು ಬದುಕುವ ಉತ್ಸಾಹ ತುಂಬುವುದು. ರಸ್ಕಿನ್ ಬಾಂಡ್‌ರ ಇಂಗ್ಲೀಷ ಮೂಲದ ಕಥೆಯನ್ನು ಆಶಾ ರಬ್ಬರವರು 'ಕಣ್ಣುಗಳಿಲ್ಲ ಇಲ್ಲಿ' ಅನುವಾದಿಸಿರುವರು. ಈ ಕಥೆ ಓದುಗನಲ್ಲಿ ತೀವ್ರವಾದ ಕುತೂಹಲ, ಅನುಕಂಪವನ್ನು ಮೂಡಿಸಿ ಕಲ್ಪನೆಗೆ ನಿಲುಕದ ಮುಕ್ತಾಯದ ಮೂಲಕ ಆಶ್ಚರ್ಯ ಮೂಡಿಸುತ್ತದೆ. ಆರ್. ಕೆ. ನಾರಾಯಣರ 'ಭಕ್ಷೀಸು' ಕಥೆಯನ್ನು ವೀರಭದ್ರ ಕೌದಿಯವರು ಅನುವಾದಿಸಿರುವರು. ವಾಸ್ತವಕ್ಕೆ ಮುಖಾಮುಖಿಯಾಗಿರುವ ಕಥೆ ಅನಕ್ಷರಸ್ಥ, ಮುಗ್ಧ, ಪ್ರಾಮಾಣಿಕ ಜೀವಗಳು ಹೇಗೆ ನಾಗರಿಕತೆ ರೂಪಿಸಿಕೊಂಡಿರುವ ವ್ಯವಹಾರಿಕತೆಯ ಮಾಧ್ಯಮಗಳ ಪರಿಚಯವಿಲ್ಲದೆ ಆಘಾತಕ್ಕೆ ಒಳಗಾಗಿ ಭಯಗ್ರಸ್ಥಗೊಂಡು ದಿನಕಳೆಯುತ್ತ ತಮ್ಮೊಳಗಿನ ಸೃಜನಶೀಲ ಸಾಮರ್ಥ್ಯ, ಶಕ್ತಿಯನ್ನು ಕೊಂದುಕೊಳ್ಳುತ್ತವೆ ಎಂಬುದನ್ನು ಮಾರ್ಮಿಕವಾಗಿ ಬಿಂಬಿಸಿರುವರು. ಮೀರಾಸಾಬಹಳ್ಳಿ ಶಿವಣ್ಣ ಅನುವಾದಿಸಿರುವ 'ಶ್ವಾನಾಯಣ' ಕಥೆ ಅಧಿಕಾರ ಎನ್ನುವ ಶಕ್ತಿ ಕೇಂದ್ರದ ಸುತ್ತು ಹಾಕುವ ಹೊಗಳುಭಟ್ಟರು ಹೇಗೆ ಸ್ವಾಭಿಮಾನ, ಆತ್ಮಗೌರವವನ್ನು ಮಾರಿಕೊಂಡಿರುತ್ತಾರೆ ಎಂಬುದನ್ನು ವ್ಯಂಗ್ಯ ವಿಡಂಬನಾತ್ಮಕವಾಗಿ ಚಿತ್ರಿಸುವುದರ ಮೂಲಕ ಮನುಷ್ಯನ ಆತ್ಮಗೌರವಕ್ಕೆ ಘನತೆ ತಂದುಕೊಳ್ಳುವ ಹಂಬಲ ಮೂಡಿಸುವರು.

ಕಾಲದ ಕನ್ನಡಕ ಹಾಕಿ ಬಗೆದಷ್ಟು ಬೆಳಕಿನ ಸೆಳಕು ಸಿಗುವ ದಾಸ, ಶ್ರೇಷ್ಠರ ಬದುಕಿನ ಕುರಿತು ಮತ್ತೆ ಮತ್ತೆ ಚಿಂತನೆ ನಡೆಸಬೇಕಾಗಿದೆ. ಬಸವರಾಜ ನಾಯ್ಕರವರು 'ಕನಕದಾಸರು' ಕುರಿತು ಹಲವು ಹತ್ತು ಹೊಸ ವಿಷಯಗಳನ್ನು ಓದುಗರ ಗಮನಕ್ಕೆ ತಂದಿರುವರು. ಬೇಂದ್ರೆ ಕಾವ್ಯ ಒಂದು ಕಬ್ಬಿನ ಜಲ್ಲಿ. ಜಗಿದಷ್ಟು ರಸ ಜಿನುಗುವುದು. 'ಬೇಂದ್ರೆ ಕಾವ್ಯದಲ್ಲಿ ದೇಸಿ ವಸ್ತು ಮತ್ತು ವಿನ್ಯಾಸದ ಸ್ವರೂಪ'ದ ಕುರಿತು ಬಿದರಹಳ್ಳಿ ನರಸಿಂಹಯ್ಯರ ವಿದ್ವತ್‌ಪೂರ್ಣವಾದ ಲೇಖನದ ಜೊತೆಗೆ ಕನ್ನಡದ ಮತ್ತು ಅನ್ಯಭಾಷೆಯ ಕವನಗಳು ಕಾವ್ಯಪ್ರೇಮಿಗಳನ್ನು ನಿರಾಶೆಗೊಳಿಸುವುದಿಲ್ಲ.

ಈ ಸಂಚಿಕೆಯನ್ನು ರೂಪಿಸಲು ಅವಕಾಶ ನೀಡಿದ ಹಿಂದಿನ ಮತ್ತು ಇಂದಿನ ಅಧ್ಯಕ್ಷರಿಗೆ, ರಿಜಿಸ್ಟಾರ್ ಮತ್ತು ಎಲ್ಲ ಸದಸ್ಯರುಗಳಿಗೆ, ಸಂಚಿಕೆಯ ಶಕ್ತಿಯೇ ಆಗಿರುವ ಎಲ್ಲ ಲೇಖಕರಿಗೆ ಕೃತಜ್ಞತೆಗಳು.

**ಮಲ್ಲಿಕಾ ಘಂಟಿ**

# ಪರಿವಿಡಿ


I ಸಂಪಾದಕೀಯ

೧) ವಿಲ್ಫ್ರೆಡ್ ಓವನ್‌ನ ಮೂರು ಕವನಗಳು ೦೧
ಅನು : ವಿ. ಶಾಂತಕುಮಾರಿ

೨) ಬಾ.ಹ. ರಮಾಕುಮಾರಿ ಅವರ ಮೂರು ಕವನಗಳು ೦೫

೩) ಒಂದಾನೊಂದು ದಿನ ೦೮
ಹರಿನಾಥ ಬಾಬು

೪) ಕಮಲಾಕರ ಕಡಮೆ ಅವರ ಮೂರು ಕವನಗಳು ೧೦

೫) ಹೋಟೆಲ್ ಜಾರ್ಜ್‌ನಲ್ಲಿ ಐವರು ೧೫
ಇಂಗ್ಲಿಷ್ ಮೂಲ : ಸ್ಟೂಅರ್ಟ್ ರೆಡಿ: ಅನು : ಶ್ರೀನಿವಾಸ ವಿ.ಸುತ್ರಾವೆ

೬) ರಬ್ಬರ್ ಮಾಮ ೩೩
ತಮಿಳು ಮೂಲ : ಚಾರ್ವಾಕನ್ : ಅನು : ತಮಿಳ್ ಸೆಲ್ವಿ

೭) ಇಬ್ಬರು ವೃದ್ಧರು ೪೬
ರಶ್ಯನ್ ಮೂಲ : ಟಾಲ್‌ಸ್ಟಾಯ್ : ಅನು : ಬಸವರಾಜ ಡೋಣೂರ

೮) ಒಂದೂವರೆ ಇಂಚು ಮೇಲೆ ೭೨
ಮೂಲ : ನಿರ್ಮಲ್ ವರ್ಮಾ : ಅನು : ಡಿ.ಎನ್. ಶ್ರೀನಾಥ

೯)ಕನಕದಾಸರು ೮೩
ಬಸವರಾಜ ನಾಯ್ಕರ

೧೦) ಬೇಂದ್ರೆ ಕಾವ್ಯದಲ್ಲಿ ದೇಸಿ ವಸ್ತು ಮತ್ತು ವಿನ್ಯಾಸದ ಸ್ವರೂಪ ೯೯
ಬಿದರಹಳ್ಳಿ ನರಸಿಂಹಮೂರ್ತಿ

೧೧) ಕಣ್ಣುಗಳಿಲ್ಲ ಇಲ್ಲಿ ೧೧೦
ಇಂಗ್ಲಿಷ್ ಮೂಲ : ರಸ್ಕಿನ್ ಬಾಂಡ್ : ಅನು : ಆಶಾ ರಬ್ಬ

೧೨) ಶ್ವಾನಾಯಣ ೧೧೪
ಮೂಲ : ವಿಶ್ವನಾಥ ರೆಡ್ಡಿ : ಅನು : ಮೀರಾಸಾಬಿಹಳ್ಳಿ ಶಿವಣ್ಣ

೧೩) ಭಕ್ಷೀಸು ೧೨೨
ಮೂಲ : ಆರ್.ಕೆ.ನಾರಾಯಣ : ಅನು : ವೀರಭದ್ರ ಕೌದಿ

೧೪) ಹೀಗೊಂದು ದಿನ ೧೩೨
ಬಿ.ಪ್ರಭಾಕರ ವರ್ಣ

೧೫) ಮೃದ್ವಂಗಿ ಮತ್ತು ಮುತ್ತು ೧೩೫
ಇಂಗ್ಲಿಷ್ ಮೂಲ : ಸೊರೊಯಾನ್: ಅನು : ಶ್ರೀನಿವಾಸ ವಿ.ಸುತ್ರಾವೆ

೧೬) ತುಳು ಕಾದಂಬರಿ–ಕಬರ್ಗತ್ತಲೆ ೧೫೯
ಮುರಳಿಧರ ಉಪಾಧ್ಯ ಹಿರಿಯಡ್ಕ

## 'ವಿಲಕ್ಷಣ ಭೇಟಿ"

ವಿಲ್ಫ್ರೆಡ್ ಓವನ್ ಕನ್ನಡಕ್ಕೆ : ಎಲ್.ವಿ.ಶಾಂತಕುಮಾರಿ

ಹೊರಕ್ಕೆ ಪಾರಾದಂತೆನಿಸಿತು, ನಾನು ರಣರಂಗದಿಂದ
ನೆಟ್ಟಗೆ ಅಗಾಧ ಮಬ್ಬಿನ ಸುರಂಗ ಒಂದರೊಳಕ್ಕೆ, ಬಹುಕಾಲದಿಂದ
ತೋಡಿದ್ದು, ದೈತ್ಯೆ ಯುದ್ಧಗಳು, ಗಟ್ಟಿಶಿಲೆಗಳಲ್ಲಿ ಕೊರೆದಿದ್ದ ಕುಳಿಗಳಲ್ಲಿ,
ಈಗಲೂ ಕಾಲಿಗಡ್ಡಸಿಕ್ಕುತ್ತ ನಿದ್ರಿಸುತ್ತಿದ್ದವರು ನರಳಿದರಲ್ಲಿ,
ಎಚ್ಚರಿಸಲಾಗದಂತಹ ಅತಿಗಾಢ ಚಿಂತೆಯಲಿ ಅಥವಾ ಸಾವಿನಲ್ಲಿ.
ನಾನಿವರ ತಿವಿದಾಗ, ಆಗ ಪುಟಿದೆದ್ದನೊಬ್ಬ ಮತ್ತು ದಿಟ್ಟಿಸಿದ
ಕರುಣಾಜನಕ ನೆನಪು ತುಂಬಿದ್ದ ನೆಟ್ಟ ಕಣ್ಣುಗಳಿಂದ,
ದು:ಖಪೂರಿತ ಕೈಗಳೆತ್ತುತ್ತ , ಆಶೀರ್ವದಿಸಲೆಂಬಂತೆ.
ಅವನ ಮುಗುಳ್ನಗೆಯಿಂದ ಆ ಸಭಾಂಗಣವ ನಾನರಿತೆ.
ಅವನ ನಿರ್ಜೀವ ಮುಗುಳ್ನಗೆಯಿಂದ, ನಾವು ನರಕದಲ್ಲಿದ್ದೇವೆಂದು ನಾನರಿತೆ.
ಗೆರೆಗೆರೆ ಗೊಂಡಿತ್ತು ಅವನ ಮುಖ ಸಾವಿರಯಾತನೆಗಳಿಂದ
ಆದರೂ ರಕ್ತ ಹರಿದಿರಲಿಲ್ಲ ಅಲ್ಲಿಗೆ ಮೇಲಿದ್ದ ನೆಲದಿಂದ.
ಢಂ ಎನಲಿಲ್ಲ ಬಂದೂಕುಗಳು, ಮೂಡಲಿಲ್ಲ ನರಳಿಕೆ ಚಿಮಣಿ ಕೊಳವೆಗಳಿಂದ.
ನಾ ಹೇಳಿದೆ "ವಿಚಿತ್ರ ಗೆಳೆಯನೆ, ಇಲ್ಲಿ ದು:ಖಕ್ಕೆ ಯಾವ ಕಾರಣವು ಇಲ್ಲ"
ಅವನು ಉತ್ತರಿಸಿದ "ಕಳೆದು ಹೋದ ವರ್ಷಗಳ ಹೊರತು ಮತ್ತೇನು ಇಲ್ಲ.
ಆ ನಿರಾಸೆಯೊಂದನುಳಿದು, ಇಂದು ನಿನ್ನದಾಗಿರುವ ಭರವಸೆಗಳೆಲ್ಲ
ನನ್ನ ಜೀವನವೇ ಆಗಿದ್ದವು, ಕೂಡಾ.. ನಾ ಹುಡುಕುತ್ತ ಹೊರಟೆ ಕ್ರೌರ್ಯದಲ್ಲಿ
ಅತ್ಯಂತ ರುದ್ರ ಸೌಂದರ್ಯವನು ಈ ಪೃಥ್ವಿಯಲ್ಲಿ.
ಪ್ರಶಾಂತ ಕಣ್ಣುಗಳಲ್ಲಿ ನೆಲಸಿರದ ಅಥವಾ ಹೆಣೆದ ಕೇಶರಾಶಿಯಲಿರದ ,
ಆದರೆ, ಕಾಲದ ಅವ್ಯಾಹತ ಓಟವನ್ನು ಅಣಕಿಸುವಂತಹುದು.
ದು:ಖಿಸುವುದೇನಾದರೂ ಇದ್ದಲ್ಲಿ, ಇಲ್ಲಿಗಿಂತಲೂ ಮಿಗಿಲಾಗಿ ದು:ಖಿಸುವುದು.
ಏಕೆಂದರೆ. ನನ್ನ ಹಿಗ್ಗನು ಕಂಡು ಬಹುಮಂದಿ ನಕ್ಕಿದ್ದಿರಬಹುದು.
ಆದರೂ ನನ್ನ ದು:ಖದಲ್ಲಿ ಕೆಲಭಾಗ ಇನ್ನೂ ಮಿಕ್ಕಿರುವುದು.

ಅದಿಂದು ಸಾಯಬೇಕಿದೆ; ನನ್ನ ಉದ್ದೇಶ, ನಾನಿನ್ನೂ ಹೇಳದಿರುವ ಸತ್ಯ .
ಅದೇ ಯುದ್ಧದ ದಯನೀಯತೆ; ಯುದ್ಧವೆಂದರೆ ಭಟ್ಟಿಯಿಳಿಸಿದ ಕಾರುಣ್ಯ.
ನಾವು ಮಾಡಿದ ಸುಲಿಗೆಯಿಂದ, ಜನ ತೃಪ್ತರಾಗುವರು
ಇಲ್ಲ ಅತೃಪ್ತರಾಗಿ ಕ್ರೌರ್ಯದಲಿ ಕುದಿದು ಚೆಲ್ಲಲ್ಪಡುವರು
ಆಗವರು ವ್ಯಾಘ್ರಿಣಿಯಂತೆ ಅತಿ ತೀವ್ರವಾಗುವರು
ರಾಷ್ಟ್ರಗಳು ವಿಮುಖವಾದರೂ ಪ್ರಗತಿಪಥದಿಂದ: ಸಾಲುಬಿಟ್ಟು ಬರುವುದಿಲ್ಲ ಯಾರೂ.
ನನ್ನದಾಗಿತ್ತು ಧೈರ್ಯ, ನಾಸರಿತಿದ್ದೆ ರಹಸ್ಯ.
ನನ್ನದಾಗಿತ್ತು ಜ್ಞಾನ, ನಾ ಪಡೆದಿದ್ದೆ ನೈಪುಣ್ಯ;
ಆದರೆ,
ಗೋಡೆ ಕಟ್ಟಿರದ ನಿರರ್ಥಕ ದುರ್ಗಗಳೆಡೆ
ಈ ವಿಶ್ವ ಶಿಸ್ತಾಗಿ ಹಿಮ್ಮೆಟ್ಟುತ್ತಿರುವುದನು ಅರಿಯದಾದೆ.
ಆಗ ಅವರ ರಥ ಚಕ್ರಗಳು, ರಕ್ತ ಸಿಕ್ತವಾಗಿ ಕಚ್ಚಿಕೊಂಡಾಗ
ಮೇಲೆ ಹೋಗಿ ತೊಳೆಯುವೆನು ನಾನು ಸಿಹಿನೀರ ಚಿಲುಮೆಗಳಿಂದ.
ಕಳಂಕಿತಗೊಳಿಸಲು ಆಗದಂಥ ಆಳದಲ್ಲಿರುವ ಕೇವಲ ಸತ್ಯಗಳಿಂದ.
ಹರಿಸುತಿದ್ದೆ ನನ್ನೆಲ್ಲ ಚೈತನ್ಯಧಾರೆ ಒಂದಿಷ್ಟೂ ತಡೆಯಿರದೆ.
ಆದರೆ ಗಾಯಗಳಿಂದಲ್ಲ, ಯುದ್ಧ ಕಂದಾಯದಿಂದಲ್ಲ.
ಗಾಯಗಳೇ ಇರದಿದ್ದಲ್ಲಿಯೂ, ರಕ್ತ ಹರಿದಿದೆ ಮಾನವನ ನೊಸಲಿಂದ .
ಓ ಮಿತ್ರ ನೀ ಕೊಂದಿದ್ದ ಶತ್ರುವೇ ನಾನು
ಈ ಕತ್ತಲಿನಲು ಗುರುತಿಸಿದೆ ನಿನ್ನನ್ನು ನಾನು.
ಏಕೆಂದರೆ, ಹೀಗೆಯೇ ಹುಬ್ಬುಗಂಟಿಕ್ಕಿದ್ದೆ
ನಿನ್ನೆ ನೀನು ನನ್ನನ್ನು ತಿವಿದು ಕೊಂದಾಗ
ನಾನು ತಡೆದೆ ಆದರೆ, ಜುಗುಪ್ಸೆಗೊಂಡು ತಣ್ಣಗಾಗಿದ್ದವು ನನ್ನ ಕೈಗಳಾಗ
ಮಲಗೋಣ ಬಾ, ಇನ್ನು ಈಗ.....

***

# ಮರಣ ನಿಶ್ಚಿತ ಯುವಕರಿಗೆ

ವಿಲ್ಫ್ರೆಡ್ ಓವನ್ | ಕನ್ನಡಕ್ಕೆ : ಎಲ್. ವಿ.ಶಾಂತಕುಮಾರಿ

ಹೀಗೆ ಜಾನುವಾರಗಳಂತೆ ಸಾಯುವವರಿಗೆ
–ಅದಾವ ಗಂಟೆಗಳು ಬಾರಿಸುವವು?
ಬಂದೂಕುಗಳ ಅಮಾನುಷ ರೋಷ ಮಾತ್ರ.
ಸೆಟೆಗೊಂಡ ಕೋವಿಗಳ ತ್ವರಿತ ರಟ ರಟ ಮಾತ್ರ
ಅವರ ಕ್ಷಿಪ್ರ ಪ್ರಾರ್ಥನೆಗಳ ಬಡಬಡಿಸಬಲ್ಲವು.
ಅವರಿಗಾಗಿ ಯಾವುದೆ ಕೃತ್ರಿಮಗಳಿಲ್ಲ; ಇಲ್ಲ ಪ್ರಾರ್ಥನೆಗಳು; ಇಲ್ಲ ಗಂಟೆಗಳು.
ಯಾವುದೇ ಶೋಕಗೀತದ ದನಿಯಿಲ್ಲ, ಹೊರಪಡಿಸಿ ಗಾಯಕವೃಂದ–
ಕರ್ಕಶವಾಗಿ ಗೋಳಿಡುತ್ತಿರುವ ಗುಂಡುಗಳ ಉನ್ಮತ್ತ ಗಾಯಕ ವೃಂದ,
ಮತ್ತು ಅವರಿಗಾಗಿ ಕರೆಯುತಿಹ ಕಹಳೆಗಳು– ಶೋಕತಪ್ತ ತುಕಡಿಗಳಿಂದ .
ಅವರನ್ನೆಲ್ಲ ಧಾವಂತಗೊಳಿಸಲು ಯಾವ ಮೊಂಬತ್ತಿ ಹಿಡಿಯಬಹುದು?
ಹುಡುಗರ ಕೈಗಳಲ್ಲಲ್ಲ, ಆದರವರ ಕಣ್ಣುಗಳಲ್ಲಿ
ಬೀಳ್ಕೊಡುವಿಕೆಯ ಪವಿತ್ರ ಬೆಳಕು ಥಳಥಳಿಸುವುದು
ಕನ್ಯೆಯರ ನೊಸಲಿನ ಪೇಲವತೆ ಅವರ ಶವವಸ್ತ್ರವಾಗುವುದು.
ಸಹನಶೀಲ ಮನಸಿನ ಕೋಮಲತೆ ಅವರ ಹೂವಾಗುವುದು.
ಮತ್ತು ಮಂದಗತಿಯ ಒಂದೊಂದು ಸಂಜೆಯೂ
ಕೆಳಗಿಳಿಯುವ ತೆರೆಯಾಗುವುದು.

***

# ಆಯುಧಗಳು ಮತ್ತು ಹುಡುಗ

ವಿಲ್ಫ್ರೆಡ್ ಓವನ್ ಕನ್ನಡಕ್ಕೆ : ಎಲ್.ವಿ.ಶಾಂತಕುಮಾರಿ

ಆ ಹುಡುಗನೊಮ್ಮೆ ಪರೀಕ್ಷಿಸಲಿ ಬಿಡಿ ಈ ಸನೀನಿನ ಅಲುಗನ್ನು
ಎಷ್ಟೊಂದು ತಣ್ಣಗಿದೆ ಈ ಉಕ್ಕು, ಎಷ್ಟೊಂದು ಹರಿತವಿದೆ ನೆತ್ತರಿನ ಹಸಿವಿಂದ,
ಹುಚ್ಚನ ಉರಿ ಜ್ವಾಲೆಯಂತೆ ಸಂಪೂರ್ಣ ನೀಲಿಗಟ್ಟಿ ಪೂರಾ ಹಗೆತನದಿಂದ,
ಮಾಂಸಕಾಗಿ ಹಸಿದು ಹಸಿದು ತೆಳ್ಳಗಾಗಿರುವುದನ್ನು.
ಹುಡುಗರೆದೆಯಲ್ಲಿ ಮೂತಿಯನು ಉಜ್ಜಲಾಶಿಸುವ
ಈ ಕುರುಡು, ಮೊಂಡ ಗುಂಡುಗಳು ತಲೆಗಳನು ನೇವರಿಸಲು ಅವನಿಗೆ ಕೊಡಿ,
ಅಥವಾ, ದು;ಖ ಮತ್ತು ಸಾವಿನ ಮೊನೆಯಂತೆ ಹರಿತವಿರುವ
ಅತ್ಯುತ್ತಮ ಸೀಸದ ಹಲ್ಲುಗಳುಳ್ಳ ಕಾರ್ತೂಸುಗಳ ಅವನಿಗೆ ಕೊಡಿ.
ಏಕೆಂದರೆ, ಸೇಬಿನ ಸುತ್ತ ನಗುತ್ತಿರುವಂತೆ ತೋರುವುವು ಅವನ ಹಲ್ಲುಗಳು,
ಇಣುಕುವುದಿಲ್ಲ, ಅವನ ಮೆದು ಕೈಬೆರಳುಗಳ ಹಿಂದಿನಿಂದ ಉಗ್ರನಖಗಳು',
ದೇವರು ಮೂಡಿಸುವುದಿಲ್ಲ ಅವನ ಹಿಮ್ಮಡಿಗಳಲ್ಲಿ ಬಲಿಷ್ಠ ಪಂಜಗಳ,
ಅಥವಾ ಅವನ ದಟ್ಟ ಮುಂಗುರುಳ ಗುಂಗುರುಗಳಿಂದ ಸಾರಂಗದ ಕೋಡುಗಳ.

* * *

# ದುಃಖ ಖರೀದಿಗಿದೆ

ಬಾ. ಹ. ರಮಾಕುಮಾರಿ

ಕೆಲವರಿಗೆ ಖರೀದಿ ಖಯಾಲಿ
ಕಂಡಿದ್ದೆಲ್ಲಾ ಬೇಕು, ಕೊಂಡುಕೊಳ್ಳಬೇಕು.
ಮೌನತಬ್ಬಿದ್ದಾಗ ಮಾತಿನ ಖರೀದಿ
ಬಡತನ ಹೆಚ್ಚಾದಾಗ ಹಣದ ಖರೀದಿ
ಹಣ ಹೆಚ್ಚಾದಾಗ ಶೋಕಿಗಳ ಖರೀದಿ
ಸಾವು ಬರುವ ವೇಳೆ ಬದುಕಿನ ಖರೀದಿ
ಹೀಗೆ ನಾನಾವಿಧದ ಖರೀದಿಯಲ್ಲಿ
ತೊಡಗಿರುವ ಜನರಿಗೆ,
ದುಃಖವನ್ನೂ ಬಿಕರಿಗಿಟ್ಟಿದ್ದಾರಿಲ್ಲಿ ಎಂದರೆ
ಕೊಳ್ಳುವವರೊಬ್ಬರೂ ಇಲ್ಲ.

* * *

# ಅಹಂ

ಬಾ. ಹ. ರಮಾಕುಮಾರಿ

ಕೇಳಿಸಿಕೊಳ್ಳುವ ಮೊದಲು
ಹೇಳಲಾಗದ ಏನನ್ನೂ
ಆದರೆ ಕಿವಿಗಳು ಹಿಂದಿವೆ
ಬಾಯಿ ಮುಂದಿದೆ.
ಹೆಚ್ಚು ಕೇಳಲೆಂದೇ ಎರಡು ಕವಿ
ಕಡಿಮೆ ಹೇಳಲು ಒಂದು ಬಾಯಿ
ಇದ್ದರೂ ಮನುಷ್ಯ ಕಿವಿಯನ್ನೂ
ಬಾಯಾಗಿ ಪರಿವರ್ತಿಸಿಕೊಂಡಿದ್ದಾನೆ
ಯಾರಿಗೂ ಕಿವಿಗೊಡದಂತೆ.

* * *

## ಬೆಳಕ ಮುಚ್ಚಲಾಗುವುದೇ?

ಬಾ. ಹ. ರಮಾಕುಮಾರಿ

ನಾನೂ ನೋಡುತ್ತಿದ್ದೇನೆ
ಏನೆಲ್ಲಾ ಆಟವಾಡುತ್ತಾರೆ
ಈ ಮನುಷ್ಯರು!
ಇರುವುದನ್ನು ಇಲ್ಲವೆಂದು
ಇಲ್ಲದುದ ಇರುವುದೆಂದು
ತಾವೇ ಸತ್ಯವೆಂದು ನಿತ್ಯವೆಂದು
ತಮ್ಮ ತಮ್ಮ ಇರವನ್ನೇ ಸ್ಪಷ್ಟಗೊಳಿಸುತ್ತಿರುತ್ತಾರೆ
ಕತ್ತಲೆಯೊಳಗೆ ನಿಂತು.
ಕತ್ತೆಲೆಯೆದುರು ನಿಲ್ಲುವ ದೀಪ ತಂದು
ನಿಲ್ಲಿಸಬೇಕೆಂದು ಯಾರ್ಯಾರೋ ಕಾಯುತ್ತಿದ್ದಾರೆ
ಎಲ್ಲೆಲ್ಲೋ ಹುಡುಕುತ್ತಿದ್ದಾರೆ ದೀಪಕ್ಕಾಗಿ.
ಕಡ ತರಲು ಹೋಗಿದ್ದಾರೆ ಸೂರ್ಯನಲ್ಲಿ
ಬೇಡಲು ಹೋಗಿದ್ದಾರೆ ಚಂದ್ರನಲ್ಲಿ
ಖರೀದಿಸತೊಡಗಿದ್ದಾರೆ ದೀಪ ದೀಪಗಳ ಸಂತೆಯಲ್ಲಿ
ಎದೆತೆರೆದು ನೋಡಲಾರರು
ಕಣ್ಣ ದೀಪದಲ್ಲೂ ಸತ್ಯದ ಬೆಳಕು ಹುಟ್ಟುತ್ತದೆಂದು
ಏಕೆಂದರೆ ಯಾರಿಗೂ ಸತ್ಯ ಬೇಕಾಗಿಲ್ಲ.
ಅದಕ್ಕೇ ಈಗ ಬೆಳಕ ಮುಚ್ಚಲು
ಹುಡುಕುತ್ತಿದ್ದಾರೆ ಕತ್ತಲು

* * *

# ಒಂದಾನೊಂದು ದಿನ

ಹರಿನಾಥ ಬಾಬು

ಒಂದು ಸುಡು ಬಿಸಿಲ ಮಧ್ಯಾಹ್ನ
ನನ್ನ ನೆರಳು ನಾನೇ
ನೋಡುತ್ತ ನಿಂತಿದ್ದೆ

ಅಂದು ಸಂತೆಯ ದಿನ
ಆದರೂ ಒಬ್ಬರ ಸುಳಿವಿಲ್ಲ

ನಿದ್ದೆ ಬಂದಂತಾಗಿ ಆಕಳಿಸಿದೆ
ನಾಯಿಯೊಂದು ಬಂದು
ಕಾಲೆತ್ತಿ ಉಚ್ಚೆ ಒಯ್ದು ಹೋಯಿತು
ನನ್ನ ನೆರಳು ಸ್ವಲ್ಪ
ಸರಿದಂತೆನಿಸಿತ್ತು

ನಿರ್ದಯಿ ಸೂರ್ಯ
ನನ್ನೊಳಗಿನಿಂದ
ಕೆಳಗೆ ಉದುರಿ ಬಿದ್ದಿದ್ದ
ಒಣಗಿದ ಎಲೆಗಳ ಮೇಲೆ
ಆಕ್ರಮಣಕ್ಕೆ ಪ್ರಯತ್ನಿಸುತ್ತಿದ್ದ

ಗಾಳಿ ಉಸಿರುಗಟ್ಟಿದಂತೆ
ಆಗೊಮ್ಮೆ ಈಗೊಮ್ಮೆ ಬಿಕ್ಕುತ್ತಿತ್ತು

ನನ್ನ ನೆರಳು
ದೂರ
ನನ್ನ ಬಿಟ್ಟು ಜಾರಿದಂತಿತ್ತು

ನೋಡುತ್ತಿರುವಂತೆ
ಒಬ್ಬ ಹುಡುಗ ಒಂದು ಹುಡುಗಿ
ನನ್ನತ್ತಲೇ ಬಂದು
ನನಗೆ ಒತ್ತಿಕೊಂಡು
ಕುಳಿತರು
ತುಂಬಾ ಹೊತ್ತು ಮಾತನಾಡಿದವರು
ನಡು ನಡುವೆ ಅತ್ತರು
ಎದ್ದು ಹೋಗುವಾಗ ನಕ್ಕರು

ಕದ್ದು ಕದ್ದು ನೋಡುತ್ತಿದ್ದ
ಸೂರ್ಯ
ಸೀದಾ ಬಂದವನೆ ಕೇಳಿದ
ಏನು ಮಾಡಿದೆ?
ಸಾಯಲೆಂದು ಬಂದವರು
ಬದುಕಲೆಂದು ಹಿಂದಿರುಗಿದರು!

ಏನು ಹೇಳಲಿ?
ಹಸಿರೆಲೆಯನ್ನೊಮ್ಮೆ
ಬಿದ್ದ ಒಣ ಎಲೆಯನ್ನೊಮ್ಮೆ
ಪ್ರೀತಿಯಿಂದ
ದಿಟ್ಟಿಸಿ ನೋಡಿ ನಕ್ಕೆ

ಗಾಳಿ ತೆಳ್ಳಗೆ ಬೀಸಲು ಶುರುವಿಟ್ಟಿತು
ನನ್ನ ನೆರಳು
ನಾಳಿನ ಬೆಳಗಿಗಾಗಿ ಕಾಯುತ್ತ
ನನ್ನೊಳಗೇ ಸೇರಿಬಿಟ್ಟಿತು!

* * *

## ಕರ್ಮಗಳ ಸುರಿಮಳೆ

ಒರಿಯಾ ಮೂಲ : ಜಯಂತ ಮಹಾಪಾತ್ರ ಅನು : ಕಮಲಾಕರ ಕಡಮೆ

ಒಮ್ಮೊಮ್ಮೆ ಬರುತ್ತದೆ ಮಳೆಯೊಂದು
ಆಕಾಶ ತುಂಬುತ್ತ ಸಾವಕಾಶ. ತಿರುಗುತ್ತ
ತನ್ನ ಬೂದು ಮೋಡಗಳೆಡೆಯಿಂದ ಬೆಳಕಾಗಿ ಹಬ್ಬುತ್ತ
ಗುರಿ ತಲುಪುವ ಮುನ್ನ.
ನಾನರಿತ ಮಳೆ.
ಬಾಳಿನುದ್ದಕ್ಕೂ ವ್ಯವಹರಿಸಿರುವ
ಈ ಮಳೆ ಕಿನಾರೆಯಲ್ಲೆಸೆದ ಕಡಲಕಳೆಯಂತೆ.
ನಾನು ನೋಡಲಾರದ ಆತ್ಮಸಾಕ್ಷಿಯ ಯಾವುದೋ ರೂಪದಂತೆ
ಸನ್ಯಾಸಿನಿಯ ಕಣ್ಣೊಳಗಣ ಕೆಡಕು ಸಂಕಲ್ಪದಂತೆ

ಧರೆಯ ಮೇಲಿನ ಆದಾವ ಕೊನೆಯ ಮಾನವನ
ಮುಖಕ್ಕೆ ಕೆಂಪಡರಿಸಿದೆ ತಣ್ಣಗಿನ ಮೋಡ?
ನಮ್ಮದೇ ಬೆಟ್ಟಗಳ ತುದಿ ಏರುತ್ತೇನೆ ಜಡವಾಗಿ
ಉತ್ತರಗಳ ಗೋಜಲ್ಲಿಸಿಕ್ಕಿ ನನ್ನಾತ್ಮ ಕಂಪಿಸುವಲ್ಲಿ.

ಯಾವ ಅಚಲ ಹಳೆಯ ಹವೆ ದೇವದೂತನ ರೆಕ್ಕೆಗಂಟಿದೆ?
ಪಾರಾಗುವುದೇ ಕಷ್ಟವಾಗುವಂತೆ ನನ್ನ ಮಳೆಯನ್ನೇನು ಹಿಡಿದಿರಿಸಿದೆ?

* * *

## ಪರದೇಸಿ

ಜಯಂತ ಮಹಾಪಾತ್ರ                                    ಅನು : ಕಮಲಾಕರ ಕಡಮೆ

ಊರ ದೂರ
ಗುಡ್ಡಗಳಿಗಾತು ಹಳಸು ಹಳ್ಳಿ
ಹಸಿಹಸೀ ವಿರಮಿಸುವಲ್ಲಿ ಕಾಲು ಹಾಕುತ್ತ
ಸೂರ್ಯನ ಸುಟ್ಟ ಬೀಳು.

ಶವಗಳು ನನ್ನ ರಾತ್ರಿಗಳ ಕನಲುತ್ತವೆ
ಗಾಳಿ ವರ್ತಮಾನದ ಬೂದಿಯೆರಚುತ್ತದೆ
ನನ್ನ ಚರ್ಮಗಳೆಡೆಯಲ್ಲಿ ತಂಗುವಂತೆ.

ಹಿಂದೆ ನಡೆಯುತ್ತೇನೆ
ನಶೆಯಲ್ಲಿ,
ಅಸ್ವಸ್ಥ, ಮುದಿ ಹೆತ್ತವರ ನಡುವೆ.
ನನ್ನ ಸುತ್ತ ಮಲಿನ ಪೇಟೆ,
ಕದ್ದು ತಂದ ಮಲ್ಲಿಗೆಗಳಿಂದ ಕಾಳಿ ದೇವಿಯ
ಮುಂಜಾವಿನ ಕಣ್ಣಗಳನ್ನು ಇಂದಿಗೂ ತುಂಬುವ
ಉದ್ದ ಕೂದಲಿನ ಪೂಜಾರಿ;
ಅಪ್ಪನೊಬ್ಬನ ಪ್ರತೀಕಗಳು:
ನಾನು ಮುಚ್ಚಲು ಹೆದರುವ ಬಾಗಿಲು.

ಇದೊಂದು ಪರದೇಸಿತನ.
ಪುಣ್ಯ-ಪಾಪಗಳ ನಡುವೆ
ನನಗೆ ಸಾವಿನ ಕುಟುಕಿನ ಗರಜು.
ನಾಡಿನ ಭೂತ ಹುಟ್ಟಿನತ್ತ ನನ್ನ

ಕಣ್ಣುಗಳನ್ನು ಸೆಳೆವಲ್ಲಿ.
ನಾನು ಕಂಡರಿಯದ ರಹಸ್ಯ ಸಂಬಂಧಿಯಂತಿದು.
ಪ್ರತಿ ಸಲ
ನನ್ನ ಅಸಂಗತೆಗಳನ್ನು ಅಪ್ಪನ
ಮನೆಯೊಳಗೆ ತರುವ ಕರ್ತವ್ಯ.
ಅದೇ ಇದೆ, ಅಲ್ಲಿ ಆ ಮರದ ಮೇಲೆ
ನನ್ನ ಮಗನ ಕಣ್ಣಿನಲ್ಲಿಯೂ.

* * *

## ಆ ಪ್ರೇಮದ ಕುರಿತು

ಒರಿಯಾ ಮೂಲ : ಜಯಂತ ಮಹಾಪಾತ್ರ ಅನು : ಕಮಲಾಕರ ಕಡವೆ

ಆ ಪ್ರೇಮ,
ಜತೆ ಜತೆಯಾಗಿ ಮಳೆಯಲ್ಲಿ ನಡೆದ ಆ ಮೈಲು...
ಈಗ ಅವುಗಳ ದಣಿವು ಮಾತ್ರ ಉಳಿದಿದೆ.

ನನ್ನ ಕನ್ನಡಿ ನನಗೆ ತೋರುತ್ತಿರುವ
ಆ ಪರಕೀಯ ನಾನೀಗ;
ಗಾಜಿನಾಚೆಗೆ ಸಾಗಲಾರದ
ಕ್ಷಣದ ಮೌನ
ಜೇರಾತನ ರೂಪದಲ್ಲಿ ನನ್ನನ್ನೇ ನಾನು ಕನಿಕರಿಸುತ್ತೇನೆ.

ಹಾಗೂ ಯಾರೂ ಬಂದಿಲ್ಲ ಇಲ್ಲಿ ಮರಳಿ
ನನ್ನ ಪರಿಚಯದ ಯಾರೊಬ್ಬರೂ, ಹಾಗೂ ನನ್ನ ಕಡೆಯಿಂದ
ಏನನ್ನೂ ಕಾಣುವುದಿಲ್ಲ ನಾನು. ವರ್ಷಗಳುರುಳಿವೆ
ನಿನ್ನ ಜತೆ ಕೂತು, ಮೋಡವಿರದ ಮುಗಿಲು
ಏಕಾಕಿಯಾಗಿವಿದ ನೋಡುತ್ತ.
ನಿನ್ನ ದೇಹ ಎಣೆಯಾಟಕ್ಕೆ ಅಣಿಯಾಗುವುದ ಕಾಯುತ್ತ.

ನನ್ನ ಬೆರಳುಗಳು ಪಿಯಾನೋ ಕೀಲನ್ನು ದುಃಖದಲ್ಲಿ ತಾಕುವುದ ಕೇಳಿದೆ
ಮಾತಿರದೆ ಹಂಸಗಳು ಹಾಸರಿವೆಯೊಳಗೆ ಮುಳುಗಿವೆ
ಮೈಲುಗಟ್ಟಲೆ ಹೊಳಪಾಗಿಸಿದ ನೆಲ
ಕೈಚಾಚುತ್ತದೆ
ಗಾಜುದನಿಗಳಿಗೆ
ಎಲ್ಲೆಡೆ ರೋದಿಸುತ್ತಿರುವ ಕಡಲಹಕ್ಕಿಗಳು
ಹಾಗೂಪಾರ್ಕಿನಲ್ಲಿ ತಮ್ಮ ತಣ್ಣನ ಕೊರಳುಗಳ
ಬಗ್ಗಿಸುವ ಹಂಸಗಳೊಂದಿಗೆ
ಗಾಜುಮೈಯಲ್ಲಿ ಮೆರುಗುವ ಹುಲ್ಲು.

* * *

# ಹೋಟೆಲ್ ಜಾರ್ಜ್‌ನಲ್ಲಿ ಐವರು

ಇಂಗ್ಲಿಷ್ ಮೂಲ : ಸ್ಟೂಅರ್ಟ್ ರೆಡಿ ಅನು : ಶ್ರೀನಿವಾಸ ವಿ. ಸುತ್ರಾವೆ

## ಪಾತ್ರವರ್ಗ

ಹೋಟೆಲ್ ಮಾಲಿಕ
ಕ್ಯಾಪ್ಟನ್ ಸ್ಟ್ಯಾಂಡಿಷ್
ಮೆರಿಡ್ಯೂ
ಮಿಸೆಸ್ ವೇನ್
ಗಿಲ್ಬರ್ಟ್ ವಿಯರ್
ಎಲ್ಸೀವಿಯರ್
ಪೊಲೀಸ್ ಇನ್‌ಸ್ಪೆಕ್ಟರ್

[ಕ್ರೂಸ್‌ವರ್ನನಲ್ಲಿನ ಸಸೆಕ್ಸ್‌ದ ಜಾರ್ಜ್ ಹೋಟೆಲ್]

ದೃಶ್ಯ: ಒಂದು ಸಣ್ಣ ಹಳ್ಳಿ ಹೋಟೆಲಿನ ಹಜಾರ. ಎಡಭಾಗದಲ್ಲಿ ಮುಖ್ಯ ದ್ವಾರ. ಅದರ ಪಕ್ಕದಲ್ಲಿ ಬಾರ್ ಪ್ರವೇಶ ನೀಡುವ ಇನ್ನೊಂದು ಬಾಗಿಲು. ರಂಗಸ್ಥಳದ ಇನ್ನೂ ಸ್ವಲ್ಪ ಮುಂದೆ ಮತ್ತೊಂದು ಬಾಗಿಲ ಇದೆ. ಆದರೆ ನಾಟಕ ನಡೆಯುವ ಹೊತ್ತಿನಲ್ಲಿ ಇದನ್ನು ಉಪಯೋಗಿಸಿಲ್ಲ. ಹಿಂದುಗಡೆ ಒಂದು ಕಿಟಕಿ. ಬಲಭಾಗದಲ್ಲಿರುವ ಬೆಂಕಿಗೂಡಿನಲ್ಲಿ ಬೆಂಕಿ ಉರಿಯುತ್ತಿದೆ. ಕಿಟಕಿಯ ಕೆಳಗಡೆ ಕುದುರೆ ಕೂದಲಿನ ಒಂದು ಸೋಫಾ. ಬಲಭಾಗದ ಮಧ್ಯದಲ್ಲಿ ಒಂದು ಮೀಡಿಯಂ ಸೈಜಿನ ಟೇಬಲ್ಲು. ಅಲ್ಲೇ ಹತ್ತಿರದಲ್ಲಿ ಒಂದು ಆರಾಮಕುರ್ಚಿ ಹಾಗೂ ಕೆಲವು ಸಣ್ಣ ಕುರ್ಚಿಗಳು. ಕಿಟಕಿಯ ಬಲಭಾಗದಲ್ಲಿ ಒಂದು ಪೆಂಡುಲಮ್ ಗಡಿಯಾರ, ಆದರೆ ಇದು ಇರಲೇಬೇಕು ಎಂದೇನೂ ಇಲ್ಲ! ಬೆಂಕಿಗೂಡಿನ ಬದುವಿನ ಮೇಲೆ ಒಂದು ಸಾದಾ ಗಡಿಯಾರವಾದರೂ ಆಗುತ್ತೆ. ರಾತ್ರಿ ಒಂಬತ್ತರ ಸಮಯ. ಚಳಿಗಾಲ ತೆರೆಯೆದ್ದಾಗ ಖಾಲಿ ರಂಗಸ್ಥಳ. ಮುಖ್ಯದ್ವಾರವನ್ನು ಯಾರೋ ಬಡಿಯುತ್ತಿದ್ದಾರೆ. ಬಲಭಾಗದಲ್ಲಿ ಒಳ ಕೋಣೆಯಿಂದ ಹೋಟೆಲ್ ಯಜಮಾನ ಬರುತ್ತಾನೆ. ಅವನು

ಸುಮಾರು ಅರವತ್ತು ವರ್ಷದ, ಸ್ವಲ್ಪ ಕುಳ್ಳಗಿನ, ನರೆತ ಕೂದಲಿನ ಮನುಷ್ಯ. ಕೋಟು ಹಾಕಿಕೊಂಡಿಲ್ಲ, ಆದರೆ ಏಪ್ರನ್ ಧರಿಸಿದ್ದಾನೆ. ಬಾಗಿಲಲ್ಲಿ ನಿಂತಿರುವ ಮನುಷ್ಯ ಕ್ಯಾಪ್ಟನ್ ಸ್ಟ್ಯಾಂಡಿಷ್. ಕಂದು ಬಣ್ಣಕ್ಕೆ ತಿರುಗಿದ, ಸೈನಿಕ ನೋಟದ, ಸದೃಢ ವ್ಯಕ್ತಿ. ಸುಮಾರು ನಲವತ್ತೈದು ವರ್ಷದವನು.]

**ಸ್ಟ್ಯಾಂಡಿಷ್:** [ಒಳಗೆ ಬರುತ್ತಾ] ನಮಸ್ಕಾರ.

**ಹೋಟೆಲ್ ಮಾಲಿಕ:** ನಮಸ್ಕಾರ, ಸಾರ್. ಈಗ ಹಿಮ ಸುರೀತಾ ಇಲ್ಲ ಅಂತ ಕಾಣುತ್ತೆ. ಅಲ್ವಾ?

**ಸ್ಟ್ಯಾಂಡಿಷ್:** ಇಲ್ಲ. ನಿಂತಿದೆ. [ಹ್ಯಾಟು ಮತ್ತು ಕೋಟನ್ನು ಒಂದು ಕುರ್ಚಿಯ ಮೇಲೆ ಎಸೆದು] ನನಗೆ ಇಲ್ಲಿ ವಿಸ್ಕಿ ಮತ್ತು ಸೋಡಾ ಕೊಡ್ತೀರಾ?

**ಹೋಟೆಲ್ ಮಾಲಿಕ:** ಖಂಡಿತ.

**ಸ್ಟ್ಯಾಂಡಿಷ್:** ನನ್ನ ಕಾರು ಹೊರಗಡೆ ಬಿಟ್ಟಿದೀನಿ. ಏನು ಪರವಾಗಿಲ್ಲ ತಾನೆ?

**ಹೋಟೆಲ್ ಮಾಲಿಕ:** ಪರವಾಗಿಲ್ಲ, ಸಾರ್. ನೀವು ರಾತ್ರಿ ಇಲ್ಲಿ ಉಳಕೊಳ್ಳೋದಿಲ್ಲ ಅಂದ್ರೆ ಅದು ಅಲ್ಲೇ ಇರಲಿ.

**ಸ್ಟ್ಯಾಂಡಿಷ್:** ಇಲ್ಲ, ನಾನು ಇಲ್ಲಿ ಉಳಕೊಳ್ಳೋದಿಲ್ಲ. ನಾನಿಲ್ಲಿ ಯಾರಿಗೋ ಕಾಯ್ತಾ ಇದೀನಿ. ಏನು ಒಂದರ್ಧ ಘಂಟೆ ಇರ್ತೀನಿ, ಅಷ್ಟೆ.

**ಹೋಟೆಲ್ ಮಾಲಿಕ:** ಆಯ್ತು. ನಿಮ್ಮ ಡ್ರಿಂಕ್ಸ್ ತರ್ತೇನೆ.

[ಹೋಟೆಲ್ ಮಾಲಿಕ ಅದೇ ಬಾಗಿಲಿನಿಂದ ಹೋಗುತ್ತಾನೆ. ಸ್ಟ್ಯಾಂಡಿಷ್ ಕೋಣೆಯಲ್ಲಿ ಸುಮ್ಮನೆ ಆ ಕಡೆ ಈ ಕಡೆ ಓಡಾಡುತ್ತಾನೆ. ಆನಂತರ ಸೋಫಾದ ಮೇಲೆ ಕೂರುತ್ತಾನೆ. ಹೋಟೆಲ್ ಯಜಮಾನ ಡ್ರಿಂಕ್ಸ್ ತರುತ್ತಾನೆ.]

**ಸ್ಟ್ಯಾಂಡಿಷ್:** ಈ ಜಾಗ ಇರೋದೆಲ್ಲಿ?

**ಹೋಟೆಲ್ ಮಾಲಿಕ:** ಕ್ರೂಸ್‌ವರ್ತ್, ಸಾರ್. ಇದೊಂದು ಹಳ್ಳಿ ಅಷ್ಟೆ. ಹತ್ತಿರದ ಸ್ವಲ್ಪ ದೊಡ್ಡ ಊರು ಅಂದ್ರೆ ಕಾಲ್ನಿ.

**ಸ್ಟ್ಯಾಂಡಿಷ್:** [ಸ್ವಲ್ಪ ಆಶ್ಚರ್ಯದಿಂದ] ಕಾಲ್ನೀನಾ? ಇಲ್ಲೇ ಹತ್ರಾನಾ?

**ಹೋಟೆಲ್ ಮಾಲಿಕ:** ಹೌದು, ಇಲ್ಲಿಂದ ಹತ್ತು ಮೈಲಿ. ಆದರೆ ಈ ಹಳ್ಳಿ ಮತ್ತು ಸಮುದ್ರ ತೀರದ ನಡುವೆ ಇರೋ ದೊಡ್ಡ ಊರು ಅಂದ್ರೆ ಅದೇ.

**ಸ್ಟ್ಯಾಂಡಿಷ್:** [ಆ ವಿಷಯ ಕಡೆಗಣಿಸುವ ರೀತಿಯಲ್ಲಿ] ಸರಿ.

**ಹೋಟೆಲ್ ಮಾಲಿಕ:** ನಿಮಗೇನಾದ್ರೂ ಬೇಕಾದ್ರೆ ಬೆಲ್ ಹೊಡೆದು ಕರೀರಿ. [ಹೋಗುತ್ತಾ] ಅಂದ್ಹಾಗೆ, ನಿಮ್ಮ ಸ್ನೇಹಿತರಿಗೆ ಈ ಜಾಗ ಗೊತ್ತಿದೆಯಾ? ಇದು ನೇರವಾದ ದಾರಿಯಲ್ಲಿ ಇಲ್ಲವಲ್ಲ, ಅದ್ಕೇ ಕೇಳ್ದೆ.

**ಸ್ಟ್ಯಾಂಡಿಷ್:** [ಮೆಲ್ಲಗೆ ನಗುತ್ತಾ] ಏನೋ ನಂಗೊತ್ತಿಲ್ಲ. ಅವನಿಲ್ಲಿಗೆ ಇನ್ನು ಇಪ್ಪತ್ತು ನಿಮಿಷದಲ್ಲಿ ಬರಲಿಲ್ಲ ಅಂದ್ರೆ ನಾನು ಜಾಗ ಖಾಲಿ ಮಾಡ್ತೀನಿ. [ಹೋಟೆಲ್ ಮಾಲಿಕ ಹೋಗುತ್ತಾನೆ. ಸ್ಟ್ಯಾಂಡಿಷ್ ತನ್ನ ಗ್ಲಾಸನ್ನು ಬೇಗ ಖಾಲಿ ಮಾಡುತ್ತಾನೆ,

ಆನಂತರ ಪುನಃ ಕೋಣೆಯಲ್ಲಿ ಅಡ್ಡಾಡುತ್ತಾನೆ. ಅವನು ಕಿಟಕಿಯಿಂದ ಹೊರ ನೋಡುತ್ತಿರುವಾಗ ಒಂದು ಕಾರಿನ ಶಬ್ದ ಕೇಳಿಸುತ್ತದೆ. ಮೆರಿಡ್ಯೂ ಮತ್ತು ಮಿಸೆಸ್ ವೇನ್ ಪ್ರವೇಶಿಸುತ್ತಾರೆ. ಮೆರಿಡ್ಯೂ ಸುಮಾರು ಅರವತ್ತು ವರ್ಷದವನು. ವಯಸ್ಸಿನಿಂದ ಚರ್ಮ ಸುಕ್ಕಾದ, ಸ್ವಲ್ಪ ಸಣ್ಣಗಿನ, ವ್ಯವಹಾರದ ಮನುಷ್ಯ. ಮಿಸೆಸ್ ವೇನ್ ಠಾಕು ಠೀಕಾಗಿರುವ, ಸ್ವಲ್ಪ ಮಟ್ಟಸ ಆಸಭ್ಯತೆಯ , ಚೆಲ್ಲು ಚೆಲ್ಲಾದ ಹೆಣ್ಣು. ಇದ್ದದ್ದನ್ನು ಇದ್ದ ಹಾಗೆ ಹೇಳುವ ಸ್ವಭಾವದವಳು. ಸಾಕಷ್ಟು ಶ್ರೀಮಂತೆ ಕೂಡ. ಇಬ್ಬರೂ ದಪ್ಪನೆಯ ಕೋಟುಗಳನ್ನು ಧರಿಸಿದ್ದಾರೆ. ಮೆರಿಡ್ಯೂ ಡ್ರೈವಿಂಗಿನ ಫರ್ ಗ್ಲೌಸುಗಳನ್ನು ತೆಗೆಯುತ್ತಾನೆ.]

**ಮೆರಿಡ್ಯೂ:** 'ದ ಜಾರ್ಜ್' ಇದೇನಾ?

**ಮಿಸೆಸ್ ವೇನ್:** ಅಯ್ಯೋ ದೇವರೆ! ಇದೆಂಥ ಬಿಲ ಅಂತೀನಿ! ಹೊರಗಡೆಯಿಂದೇನೋ ಸ್ವಲ್ಪ ಚೆನ್ನಾಗಿ ಕಾಣುತ್ತೆ. ಅಷ್ಟೆ.

**ಮೆರಿಡ್ಯೂ:** ನಾನು ಕಾರನ್ನ ಇನ್ನೂ ಸ್ವಲ್ಪ ಒಳಗೆ ತಂದಿಡೋದು ಉತ್ತಮ ಅಂತ ಕಾಣುತ್ತೆ. [ಹೋಗುತ್ತಾನೆ.]

**ಮಿಸೆಸ್ ವೇನ್:** ನನಗೆ ಈ ಮನುಷ್ಯ ಸಿಕ್ಕಿದ್ದೇ ತಪ್ಪಾಯ್ತು ಅನ್ನಿಸ್ತಿದೆ. ರೇಲ್ವೆ ಸ್ಟೇಷನ್ ಹತ್ರ ಲಿಫ್ಟ್ ಕೊಟ್ಟ. ನಾನು ಏನು ಹೇಳ್ತಾ ಇದ್ದೆ ಅಂದ್ರೆ ನನಗೆ ಈ ಮನುಷ್ಯ ಸಿಗದೇ ಹೋಗಿದ್ದರೆ, ನಾನು ಇಲ್ಲಿಗೆ ಬರಲಿಕ್ಕೆ ಸಾಧ್ಯಾನೇ ಇದ್ದಿಲ್ಲ. ಇಂಥ ಜಾಗದಲ್ಲಿ ಈ ಪಬ್ ಏನ್ ಮಾಡ್ತಿದೆಯೋ?

**ಸ್ಟ್ಯಾಂಡಿಷ್:** ನಾನು ನಿಮ್ಮನ್ನ ಎಲ್ಲೋ ನೋಡಿರಬೇಕಲ್ಲ!

**ಮಿಸೆಸ್ ವೇನ್:** ಓ, ಹೌದು. ನೀವು ಒಂದೆರಡು ವರ್ಷದ ಹಿಂದೆ ಕಾಲ್ನಿ ಲಾಡ್ಜ್ ನಲ್ಲಿ ನಡೆದ ಪಾರ್ಟಿಯಲ್ಲಿದ್ರಲ್ಲ.

**ಸ್ಟ್ಯಾಂಡಿಷ್:** ನಿಮಗೆ ಲಿಫ್ಟ್ ಕೊಟ್ಟ ಆ ಮನುಷ್ಯ ಯಾರು?

**ಮಿಸೆಸ್ ವೇನ್:** ಮೆರಿಡ್ಯೂ. ಒಬ್ಬ ಸಲಹಾ ವಕೀಲ (ಸಾಲಿಸಿಟರು). ನಿಮಗೆ ನೆನಪಿಲ್ಲವಾ?

**ಸ್ಟ್ಯಾಂಡಿಷ್:** ಹುಂ. ಮತ್ತೆ ಒಳ್ಳೆ ಭೇಟಿಯಾದ ಹಾಗಾಯಿತು. ಜಗತ್ತು ತುಂಬಾನೇ ಚಿಕ್ಕದಿದೆ, ಅಲ್ವಾ?

**ಮಿಸೆಸ್ ವೇನ್:** ಅಯ್ಯೋ, ಇದೆಂಥ ವಿಚಿತ್ರ ಕಾಕತಾಳೀಯವೋ ಏನೋ? ಹಾಳಾಗ, ಅದ್ಯಾವಾಗ ನಡೆದದ್ದು?

**ಸ್ಟ್ಯಾಂಡಿಷ್:** ಆ ಫಾಸ್ಟರ್ ಘಟನೇನಾ? ಮೂರು ವರ್ಷದ ಹಿಂದೆ.

**ಮಿಸೆಸ್ ವೇನ್:** ನನಗೆ ಮೆರಿಡ್ಯೂ ಸಿಕ್ಕಾಗ ಎಲ್ಲ ನೆನಪಾಯಿತು. ಅವರಿಗೆ ಅದರ ಬಗ್ಗೆ ಮಾತಾಡ್ಲಿಕ್ಕೆ ಆಸಕ್ತಿ ಇತ್ತು ಅಂತ ಏನೂ ಅಲ್ಲ.

[ಮೆರಿಡ್ಯೂ ವಾಪಸ್ಸು ಬರುತ್ತಾನೆ.]

**ಮೆರಿಡ್ಯೂ:** ಅಲ್ಲಿ ಇನ್ನೊಂದು ಕಾರಿದೆ. ಎದುರುಗಡೇನೇ. [ಸ್ಟ್ಯಾಂಡಿಷ್‌ಗೆ] ಓಹ್, ಕ್ಷಮಿಸಿ. ಅದು ನಿಮ್ಮದಿರಬೇಕಲ್ಲಾ, ಸಾರ್?

**ಮಿಸೆಸ್ ವೇನ್:** ನಿಮಗೆ ಕ್ಯಾಪ್ಟನ್ ಸ್ಟ್ಯಾಂಡಿಷ್ ಗೊತ್ತಲ್ವಾ, ಮಿಸ್ಟರ್ ಮೆರಿಡ್ಯೂ?
**ಮೆರಿಡ್ಯೂ:** ಓ, ಹೌದು, ಹೌದು!
**ಮಿಸೆಸ್ ವೇನ್:** ಆ ದುರ್ಮರಣ ವಿಚಾರಣಾಧಿಕಾರಿ [ಕಾರೊನರ್] ಸೇರಿ ಇನ್ನು ಒಬ್ಬರೋ ಇಬ್ಬರೋ ಆದ್ರೆ, ನಾವು ಮತ್ತೆ ಮೂರು ವರ್ಷದ ಹಿಂದಕ್ಕೆ ಹೋದ ಹಾಗೇನೇ.
**ಸ್ಟ್ಯಾಂಡಿಷ್** [ಇದ್ದಕ್ಕಿದ್ದ ಹಾಗೆ] ನೀವು ಇಲ್ಲಿಗೆ ಯಾಕೆ ಬಂದಿರೋದು?
ಮಿಸೆಸ್ ವೇನ್ ಮತ್ತು ಮೆರಿಡ್ಯೂ ಒಬ್ಬರ ಮುಖ ಒಬ್ಬರು ನೋಡುತ್ತಾರೆ.]
**ಮೆರಿಡ್ಯೂ:** ಏನೊ ಇದೆಲ್ಲ ಸ್ವಲ್ಪ ವಿಚಿತ್ರವಾಗಿದೆ.
**ಮಿಸೆಸ್ ವೇನ್:** ಮಿಸ್ಟರ್ ಮೆರಿಡ್ಯೂ ಮತ್ತು ನಾನು ಆ ಮರಣೋತ್ತರ ವಿಚಾರಣೆಯ (ಇನ್‌ಕ್ವೆಸ್ಟ್) ನಂತರ ಭೇಟಿಯಾಗಲಿಲ್ಲ. ಅಂದರೆ ಈಗ ಮೂರು ವರ್ಷ ಆಯ್ತು. ಈಗ ಇದು ನೋಡಿ [ಸ್ಟ್ಯಾಂಡಿಷ್ ಗೆ ಒಂದು ಟೆಲಿಗ್ರಾಂ ತೋರಿಸುತ್ತಾಳೆ.]
**ಸ್ಟ್ಯಾಂಡಿಷ್** [ಓದುತ್ತಾನೆ.] "ನನ್ನನ್ನು 'ದ ಜಾರ್ಜ್ ಕ್ರೂಸ್‌ವರ್ತ್, ಸಸೆಕ್ಸ್–ಇಲ್ಲಿ ಭೇಟಿ ಮಾಡಿ, ಸೋಮವಾರ ರಾತ್ರಿ ಒಂಬತ್ತೂ ವರೆಗೆ. ಎಲ್"
**ಮಿಸೆಸ್ ವೇನ್:** ಮೆರಿಡ್ಯೂ ಅವರಿಗೂ ಇದೇ ಥರ ಬರೆದಿರೋ ಟೆಲಿಗ್ರಾಂ ಬಂದಿದೇ ಅಂದ್ರೆ ಏನಂತೀರ?
**ಮೆರಿಡ್ಯೂ:** [ಕಸಿಪಿಸಿಗೊಂಡು] ಇದು ನನಗಿಷ್ಟವಿಲ್ಲ. ನಾನು ತುಂಬ ವ್ಯಾವಹಾರಿಕ ಮನುಷ್ಯ. ಆದರೆ ಈ ವಿಷಯದ ಬಗ್ಗೆ ಯೋಚನೆ ಮಾಡಿದಾಗ–
**ಮಿಸೆಸ್ ವೇನ್:** ಈ ಟೆಲಿಗ್ರಾಂ ಬಂದಾಗ ಮೆರಿಡ್ಯೂ ಅವರು ಲಂಡನ್‌ನಲ್ಲಿದ್ದರು, ನಾನು ವಿಂಚೆಸ್ಟರ್ ನಲ್ಲಿದ್ದೆ.
**ಸ್ಟ್ಯಾಂಡಿಷ್:** [ಟೆಲಿಗ್ರಾಮನ್ನು ವಾಪಸ್ಸು ಕೊಡುತ್ತಾ] ಆದರೆ ನೀವು ಭೇಟಿಯಾಗ್ತಾ ಇರೋ ಈ ವ್ಯಕ್ತಿ ಯಾರು?
**ಮಿಸೆಸ್ ವೇನ್:** ನನಗೆ ಬೇರೆ ಯಾವುದಾದರೂ ಪ್ರಶ್ನೆ ಕೇಳಿ. ನನಗೆ 'ಎಲ್' ಅನ್ನೋ ತುಂಬ ಜನ ಗೊತ್ತು.
**ಮೆರಿಡ್ಯೂ:** ನನಗೂ ಅಷ್ಟೆ. ನನಗೆ ಹೇವರ್ಡ್ಸ್ ಹೀತ್‌ನ ಲಾರಿಮರ್ ಅನ್ನೋ ಒಬ್ಬ ಮನುಷ್ಯನ ಜೊತೆ ಒಂದು ವ್ಯವಹಾರ ಇದೆ. ಆದರೆ ಈ 'ಎಲ್' ಅನ್ನೋನು ಲೈಲ್ ಇರಲೂಬಹುದು.
**ಮಿಸೆಸ್ ವೇನ್:** ಈಗ ನಮಗೆ ಆ ವಿಷಯ ಬೇಡ. ನಿಮ್ಮ 'ಎಲ್' ನನ್ನ 'ಎಲ್' ಅಲ್ಲ ಅಂದ್ರೆ ಅಷ್ಟೇ ಸಾಕು. [ಸ್ಟ್ಯಾಂಡಿಷ್‌ಗೆ] ನಾವು ಒಂದು ಚೂರು ಡ್ರಿಂಕ್ಸ್ ಹಾಕಬಹುದಲ್ವಾ?
**ಸ್ಟ್ಯಾಂಡಿಷ್:** ಅಗತ್ಯವಾಗಿ. ಬೆಲ್ ಮಾಡಲಾ?
**ಮಿಸೆಸ್:** ಮಾಡಿ, ಸ್ವಲ್ಪ ಉಲ್ಲಾಸಗೊಳಿಸುವಂಥದ್ದು ಏನೂ ಇಲ್ಲದೆ ನಾನು ಈ ಹಾಳುಬಿದ್ದ ಒಡ್ಡ ಗುಡಿಸಲಿನಲ್ಲಿ ಒಂದು ಅರ್ಧ ಘಂಟೆನೂ ಇರಾಕಾಗಲ್ಲ.
[ಸ್ಟ್ಯಾಂಡಿಷ್ ಬೆಲ್ ಮಾಡುತ್ತಾನೆ.]

**ಮೆರಿಡ್ಯೂ:** ಇದು ಯಾಕೊ ಬೇಜಾರು ತರಿಸೋ ಪ್ರಸಂಗ ಆಯ್ತು. ನನಗೆ ಅದರ ಜ್ಞಾಪಕ ಬೇಡವಾಗಿತ್ತು.
**ಮಿಸೆಸ್ ವೇನ್:** ನಮಗೂ ಅಷ್ಟೇ, ಸುಮ್ಮಿರಿ. ಇನ್ನರ್ಧ ಘಂಟೆಯಲ್ಲಿ ನಾವು ವಾಪಸ್ ಹೋಗೋವರಿದ್ದೀವಿ. ಹಾಗಾಗಿ ಇಲ್ಲಿ ಇರೋತನಕ ನಾವು ಸ್ನೇಹಿತರಾಗಿರೋಣ.
[ಹೋಟೆಲ್ ಮಾಲಿಕ ಬರುತ್ತಾನೆ.]
**ಹೋಟೆಲ್ ಮಾಲಿಕ:** ನಮಸ್ಕಾರ.
**ಮೆರಿಡ್ಯೂ:** ನೀವೇನು ತಗೊಳ್ತೀರಾ?
**ಮಿಸೆಸ್ ವೇನ್:** ಇರಿ, ನಾನು ಕೊಡ್ಸೋದು. ನೀವು ನನಗೆ ಲಿಫ್ಟ್ ಕೊಟ್ಟಿದೀರಲ್ಲ, ಅದಕ್ಕೆ. ನನಗೆ ಒಂದು ಡಬಲ್ 'ಬ್ಲ್ಯಾಕ್ ಅಂಡ್ ವೈಟ್' ಕೊಡಿಯಪ್ಪ, ಆಮೇಲೆ, ನಿಮಗೆ?
**ಮೆರಿಡ್ಯೂ:** ಒಂದು ಗ್ಲಾಸು ಷೆರಿ ಕುಡೀಲಿಕ್ಕೆ ಅಡ್ಡಿ ಇಲ್ಲ ಅನ್ನಿಸುತ್ತೆ.
**ಮಿಸೆಸ್ ವೇನ್:** ಕ್ಯಾಪ್ಟನ್ ಸ್ಟ್ಯಾಂಡಿಷ್, ನಿಮಗೆ?
**ಸ್ಟ್ಯಾಂಡಿಷ್:** ವಿಸ್ಕಿ, ಥ್ಯಾಂಕ್ಸ್. ಆದರೆ ನಿಜ ಹೇಳಬೇಕೂಂದ್ರೆ–
**ಮಿಸೆಸ್ ವೇನ್:** ಸುಮ್ಮಿರಿ. ಎಲ್ಲಾ ನಾನು ಆರ್ಡರ್ ಕೊಡೋದು. [ಹೋಟೆಲ್ ಯಜಮಾನ ಬಾಗಿಲತ್ತ ನಡೆಯುತ್ತಾನೆ.] ನೀವೇನಾ ಹೋಟೆಲ್ ಯಜಮಾನ್ರು?
**ಹೋಟೆಲ್ ಮಾಲಿಕ:** ಹೌದು, ಮೇಡಂ.
**ಮಿಸೆಸ್ ವೇನ್:** ಇಲ್ಲಿಂದ ಕಾಲ್ನಿ ಲಾಡ್ಜ್ ಎಷ್ಟು ದೂರ?
**ಹೋಟೆಲ್ ಮಾಲಿಕ:** ಸುಮಾರು ಹತ್ತು ಮೈಲಿ.
**ಮಿಸೆಸ್ ವೇನ್:** ಒಳ್ಳೇದು. [ಹೋಟೆಲ್ ಮಾಲಿಕ ಹೋಗುತ್ತಾನೆ.]
**ಮೆರಿಡ್ಯೂ:** ಅದನ್ನ ನೀನು ಅವನಿಗೆ ಯಾಕೆ ಕೇಳಿದ್ದು, ಮಿಸೆಸ್ ವೇನ್?
**ಮಿಸೆಸ್ ವೇನ್:** ಓ, ಏನೋ ಗೊತ್ತಿಲ್ಲ. ಕರ್ನಲ್ ಫಾಸ್ಟರ್ ಸತ್ತ ಸ್ಥಳ ಇಲ್ಲಿಂದ ಕೇವಲ ಹತ್ತು ಮೈಲಿ ದೂರದಲ್ಲಿದೆ ಅನ್ನೋದು ನನಗ್ಯಾಕೊ ವಿಚಿತ್ರ ಅನ್ನುತ್ತೆ.
**ಮೆರಿಡ್ಯೂ:** ದಯವಿಟ್ಟು ಆ ವಿಷಯ ಬೇಡಿ! ಫಾಸ್ಟರ್ ನನ್ನ ಒಳ್ಳೇ ಮತ್ತು ಹಳೇ ಸ್ನೇಹಿತನಾಗಿದ್ದ. ಮತ್ತು ಆ ದುರದೃಷ್ಟದ ಘಟನೆ –
**ಸ್ಟ್ಯಾಂಡಿಷ್:** [ಅಸಹನೆಯಿಂದ] ಅದೆಲ್ಲ ಈಗ ಮುಗಿದಿರೋ ಕಥೆ. ಈಗ್ಯಾಕೆ ಮತ್ತೆ ಅದೆಲ್ಲ ಕೆದಕೋದು? ಅಂಥ ವಿಷಯಗಳನ್ನು ಒಬ್ಬರಿಗೆ ಜ್ಞಾಪಿಸೋದೂ ಸರಿಯಲ್ಲ.
**ಮಿಸೆಸ್ ವೇನ್:** [ಮೆಲ್ಲಗೆ] ಅದರ ಬಗ್ಗೆ ಮತ್ತೆ ಏನಾದ್ರೂ ಗೊತ್ತಾಯ್ತಾ?
**ಸ್ಟ್ಯಾಂಡಿಷ್:** ಇಲ್ಲ. ವಿಚಾರಣೆಯಾದ ನಂತರ ಕೊಟ್ಟ ಬಹಿರಂಗ ತೀರ್ಪು ಬದಲಾಗಿಲ್ಲ, ಹಾಗೇ ಇದೆ. ಕನಿಷ್ಟ ಪಕ್ಷ ನಾನು ಹಾಗೆ ತಿಳಿದಿದೀನಿ. ಸರಿ, ಅದರ ನಂತರ ನಾನು ಇಂಡಿಯಾಕ್ಕೆ ಹೋದೆ.
**ಮಿಸೆಸ್ ವೇನ್:** [ನಡುಕದಿಂದ]; ಅವತ್ತಿನ ಆ ರಾತ್ರಿಯನ್ನು ನಾನು ಯಾವತ್ತೂ ಮರೆಯಲಾರೆ.

**ಮೆರಿಡ್ಯೂ:** ನಾನೂ ಅಷ್ಟೆ. ಅವತ್ತು ಸಾಯಂಕಾಲ ನಾವೆಲ್ಲ ಎಷ್ಟು ಚೆನ್ನಾಗಿ ಕಾಲ ಕಳೆದೆವು, ಅಲ್ವಾ? ಆ ಕೇಸಿನ ತೀರ್ಪು ಏನೇ ಆಗಿರಲಿ, ನಾನಂತೂ ಅದನ್ನ ಕೊಲೆ ಅಂತ ತಿಳಿದಿದೀನಿ.

**ಮಿಸೆಸ್ ವೇನ್:** ಅಯ್ಯೋ, ಏನು ಅಸಂಬದ್ಧ ಮಾತು.

**ಸ್ಟ್ಯಾಂಡಿಷ್:** ಇಲ್ಲ. ನಾನಂತೂ ಹಾಗೆ ತಿಳಿದಿಲ್ಲ. ಯಾಕಂದ್ರೆ ಫಾಸ್ಟರ್‌ನ ಹಾರ್ಟು ಯಾವಾಗಲೂ ಸ್ವಲ್ಪ ವೀಕಾಗಿತ್ತು.

**ಮಿಸೆಸ್ ವೇನ್:** [ವಾಚು ನೋಡುತ್ತಾ] ಈಗ ಒಂಬತ್ತೂ ಗಂಟೆ ಹತ್ತು ನಿಮಿಷ. ಒಂಬತ್ತೂವರೆಯಾಯ್ತು ಅಂದರೆ, ನಾನು ಒಂದು ನಿಮಿಷಾನೂ ಇಲ್ಲಿ ನಿಲ್ಲಲ್ಲ.

**ಮೆರಿಡ್ಯೂ:** ನಾವು ಇಂಥ ಬಿಸಿಲ್ಗುದುರೆಯ ಬೇಟೆಗೆ ಬಂದದ್ದೇ ತಪ್ಪು. ಆದರೆ ನನಗೊಬ್ಬ ಕಕ್ಷಿಗಾರ ಸಿಗ್ತಾನೆ ಅಂದರೆ ನಾನ್ಯಾಕೆ ಕಳಕೋಬೇಕು?

**ಮಿಸೆಸ್ ವೇನ್** [ತಕ್ಷಣವೇ] ; ಅದಿರಲಿ, ಕ್ಯಾಪ್ಟನ್ ಸ್ಟ್ಯಾಂಡಿಷ್, ಇಲ್ಲಿ ನೀವೇನು ಮಾಡ್ತಿದೀರಿ?

**ಸ್ಟ್ಯಾಂಡಿಷ್:** ಓ; ನಾನೂ ಇಲ್ಲಿಗೆ ಒಬ್ಬರನ್ನ ಭೇಟಿಯಾಗಲಿಕ್ಕೆ ಬಂದಿದೇನೆ.

**ಮೆರಿಡ್ಯೂ:** ನಮ್ಮ ಥರಾನೇ-?

**ಸ್ಟ್ಯಾಂಡಿಷ್:** ಹೌದು, 'ಎಲ್' ಅಂತ ಸೈನ್ ಮಾಡಿರೋ ಒಬ್ಬ ಮನುಷ್ಯನನ್ನ ಕಾಣ್ಲಿಕ್ಕೆ. ನನ್ನ ಟೆಲಿಗ್ರಾಂ ಕೂಡ ನಿಮ್ಮಂಥದ್ದೇ.

**ಮಿಸೆಸ್ ವೇನ್:** ನನಗ್ಯಾಕೋ ಈ ವಿಷಯ ಸರಿ ಕಾಣ್ತಾ ಇಲ್ಲ.

**ಮೆರಿಡ್ಯೂ:** ಇದ್ಯಾವದೊ ಒಂದು ಕೀಟಲೆ ಇರಬೇಕು. ಇಲ್ಲದಿದ್ರೆ ಮೂರು ಜನಕ್ಕೆ ಹ್ಯಾಗೆ ತಾನೆ ಹೀಗೆ.....

**ಸ್ಟ್ಯಾಂಡಿಷ್:** ಇದು ನಿಜಕ್ಕೂ ವಿಚಿತ್ರವಾಗಿದೆ. ನಾನು ಈ ಜಾಗಕ್ಕೆ ಹತ್ತಿರದಲ್ಲೇ ಇರೋ ಸಮುದ್ರ ತೀರದ ಕಡೆ ನಿಲ್ಲೋ ಪ್ರಸಂಗ ಬಂದಿತ್ತು. ಇಲ್ಲದೇ ಹೋಗಿದ್ರೆ ನಾನು ಈ ವಿಷಯವನ್ನು ಕಡೆಗಣಿಸ್ತಾ ಇದ್ದೆ.

**ಮಿಸೆಸ್ ವೇನ್:** ಈ ಮನುಷ್ಯ ಯಾರು ಇರಬಹುದು ಅಂತ ನೀವೇನಾದರೂ ಅಂದಾಜು ಮಾಡಿದೀರಾ?

**ಸ್ಟ್ಯಾಂಡಿಷ್:** ಇಲ್ಲ, ಈ ಥರ ರಹಸ್ಯ ರೀತಿಯಲ್ಲಿ ಸೈನ್ ಮಾಡಬಹುದಾದಂಥ ಬಹಳಷ್ಟು ಜನ ನನಗೆ ಗೊತ್ತಿದಾರೆ. ಆ ಮೇಲೆ ನನಗೂ ಕುತೂಹಲ ಇತ್ತು, ಇದು ಏನು ನೋಡೋಣ ಅಂತ. ಹಾಗಾಗಿ ಇಷ್ಟು ದೂರ ಬಂದೆ.

**ಮಿಸೆಸ್ ವೇನ್:** ಸರಿ, ಇದು ಯಾರು ಅಂತ ಗೊತ್ತಾಗಬಹುದೇನೋ? ನೋಡೋಣ. ಅಲ್ಲಿಗೇನಾಯ್ತು ಅಂದ್ರೆ, ನೀವು ಬಹುಶ; ನಿಮ್ಮ ಒಬ್ಬ ಆರ್ಮಿ ಸ್ನೇಹಿತನನ್ನ ಕಾಣಬಹುದು; ಮೆರಿಡ್ಯೂ ಅವರು ಒಬ್ಬ ಕಕ್ಷಿಗಾರನನ್ನ; ಮತ್ತು ನಾನು ನನ್ನ ಹಳೆಯ ನಲ್ಲನನ್ನ! ಹ್ಯಾಗಿದೆ ನಮ್ಮ ಅನುಕೂಲಕ್ಕೆ?

**ಮೆರಿಡ್ಯೂ** [ತಲೆ ಅಲ್ಲಾಡಿಸುತ್ತಾ]: ಅದೆಲ್ಲ ಆಗಲ್ಲ. ನನಗೆ ದೆವ್ವ, ಭೂತ ಇಂಥದ್ರಲ್ಲೆಲ್ಲ ನಂಬಿಕೆ ಇಲ್ಲ, ಆದ್ರೆ-

**ಸ್ಟ್ಯಾಂಡಿಷ್**: [ಅಪಿನಯುವಾಗಿ] ನನಗೂ ಅಷ್ಟೆ. ಆಮೇಲೆ. ನಾನು ಇದಕ್ಕೆ ಹೆದರಬೇಕಾಗೇನೂ ಇಲ್ಲ. ಇದು ಒಂದು ಕೀಟಲೆ ಆಗಿದ್ರೆ ನಮ್ಮದೊಂದು ಚೂರು ಸಮಯ ಹಾಳಾಯ್ತು ಮತ್ತು ಡ್ರಿಂಕ್ಸ್‌ಗೆ ಸ್ವಲ್ಪ ಹಣ ಖರ್ಚಾಯ್ತು ಅಂತ ಅಷ್ಟೆ. ಇಲ್ಲ ಅಂದರೆ. [ಭುಜ ಏಗುರಿಸಿ] ಈ ಮನುಷ್ಯನಿಗೆ ನಮ್ಮಿಂದ ಏನಾಗಬೇಕಾಗಿದೆ ಅಂತ ತಿಳಕೊಳ್ಳಲಿಕ್ಕೆ ನಾವು ಕಾಯ್ತಾ ಕೂತಿದ್ದೇವೆ ಅಂತ. ಅಷ್ಟೆ.

**ಮೆರಿಡ್ಯೂ**: [ಏನೋ ಯೋಚನೆ ಮಾಡುತ್ತಾ] ಆಮೇಲೆ. ನನಗೆ ಲೂಯಿಸ್ ಅನ್ನೋ ಒಬ್ಬ ಮನುಷ್ಯ ಗೊತ್ತು. ಈಸ್ಟ್‌ಬೋರ್ನ್‌ನಲ್ಲಿದ್ದವನು.

[ಹೋಟೆಲ್ ಯಜಮಾನ ಡ್ರಿಂಕ್ಸ್ ತರುತ್ತಾನೆ.]

**ಹೋಟೆಲ್ ಮಾಲಿಕ**: [ಮೆರಿಡ್ಯೂಗೆ] ಸಾರ್, ನಾನು ನಿಮಗೆ ಕೇಳ್ಲಿಲ್ಲ–ನೀವು ಮತ್ತು ಮೇಡಮ್ ಅವರು ಇವತ್ತು ರಾತ್ರಿ ಇಲ್ಲಿ ಉಳಕೊಳ್ಳೋವರಾ ಅಂತ.

**ಮೆರಿಡ್ಯೂ**: ಅಯ್ಯೋ. ಇಲ್ಲ ಮಾರಾಯ.ನಾನು ನಾಳೆ ಬೆಳಗ್ಗೇನೇ ಲಂಡನ್ನಿನಲ್ಲಿರಬೇಕು.

**ಮಿಸೆಸ್ ವೇನ್**: ಈಗ ಹವಾಮಾನ ಹ್ಯಾಗಿದೆಯೋ?

**ಹೋಟೆಲ್ ಮಾಲಿಕ**: ವಿಪರೀತ ಹಿಮ ಸುರೀತಾ ಇದೆ. ದಿನಾ ಪೂರ್ತಿ ಹೀಗೇ ಇದೆ.

**ಮಿಸೆಸ್ ವೇನ್**: ಅಯ್ಯೋ. ದೇವರೆ! ಇದಕ್ಕಿಂತ ಇನ್ನೇನು ಬೇಕು. ಈ ಜಾಗ ಇನ್ನೂ ಹೆಚ್ಚು ಹಾಳು ಸುರೀಲಿಕ್ಕೆ! ಮಿಸ್ಟರ್ ಮೆರಿಡ್ಯೂ. ನೀವು ನನ್ನನ್ನು ಇಲ್ಲಿಂದ ಪಾರು ಮಾಡಬೇಕಾಗುತ್ತೆ.

**ಮೆರಿಡ್ಯೂ**: ಖಂಡಿತ. ಖಂಡಿತ. [ಹೋಟೆಲ್ ಮಾಲಿಕನಿಗೆ ] ಈ ಸಂಜೆ ಇವತ್ತು ಇಲ್ಲಿ ಯಾರಾದರೂ ನಮ್ಮ ಬಗ್ಗೆ ವಿಚಾರಿಸಿದಾರಾ? ನನ್ನ ಹೆಸರು ಮೆರಿಡ್ಯೂ ಅಂತ.

**ಹೋಟೆಲ್ ಮಾಲಿಕ**: ಇಲ್ಲ. ಸರ್. ಯಾರೂ ವಿಚಾರಿಸಿಲ್ಲ. ನೀವು ಯಾರಿಗಾದ್ರೂ ಕಾಯ್ತಾ ಇದೀರಾ?

**ಮೆರಿಡ್ಯೂ**: ಹೌದು. ಹಾಳಾದ್ದು! ಏನು ಕಾಯೋದೋ ಏನೋ!

**ಸ್ಟ್ಯಾಂಡಿಷ್**: ಯಾವುದೊ ಕಾರು ಬಂತು.[ಎಲ್ಲರೂ ಶಬ್ದ ಆಲಿಸುತ್ತಾರೆ.]

**ಮಿಸೆಸ್ ವೇನ್**: ಮಿಸ್ಟರ್ 'ಎಲ್' ಬಂದ! ಅವನು ಕಾರಲ್ಲಿ ಬಂದಿದಾನೆ ಅಂದ್ರೆ ಅವನು ಭೂತ ಅಲ್ಲ ಅಂತ.

[ಹೋಟೆಲ್ ಮಾಲಿಕ ಬಾಗಿಲು ತೆರೆಯುತ್ತಾನೆ. ಹೊಸದಾಗಿ ಮದುವೆಯಾಗಿರುವ ಮಿಸ್ಟರ್ ಅಂಡ್ ಮಿಸೆಸ್ ವಿಯರ್ ದಂಪತಿಗಳು ಒಳಗೆ ಬರುತ್ತಾರೆ.] ವಿಯರ್ [ಕಣ್ಣು ಕೊರೈಸುವ ಬೆಳಕಿನಿಂದಾಗಿ ಕಣ್ಣು ಮಿಟುಕಿಸಿ]; ಓಹ್–ಹಲೋ. ಕ್ರಾಸ್ ವರ್ತ್‌ನ 'ದ ಜಾರ್ಜ್' ಹೋಟೆಲ್ ಇದೇ ಇರಬೇಕು. ಅಲ್ವಾ? ನಾನು ಬೋರ್ಡ್ ನೋಡಲಿಕ್ಕಾಗಲಿಲ್ಲ.

**ಹೋಟೆಲ್ ಮಾಲಿಕ**: ಹೌದು. ಸಾರ್. 'ದ ಜಾರ್ಜ್' ಇದೇನೇ.

**ವಿಯರ್:** ಇದೆಲ್ಲೋ ಮೂಲೆಯಲ್ಲಿದೆಯಲ್ರೀ. ಯಾರಿಗೂ ಗೊತ್ತಾಗಲ್ಲ. ಈ ಜಾಗ ಹುಡಕಲಿಕ್ಕೆ ನಾನು ಹಲವಾರು ಮೈಲಿ ಸಮುದ್ರದ ಮೇಲೆ ಸುಳಿದಾಡ ಬೇಕಾಯ್ತು. [ಹೆಂಡತಿಗೆ] ನೀನು ಅಲ್ಲಿ ಹೋಗು, ಡಿಯರ್, ಬೆಂಕಿಗೂಡಿನ ಹತ್ರ . [ಎಲ್ಸೀ ವಿಯರ್ ಬೆಂಕಿಗೂಡಿನೆಡೆ ನಡೆದು ಕೈ ಕಾಯಿಸಿಕೊಳ್ಳುತ್ತಾಳೆ.] ಅಯ್ಯೋ, ಏನು ಚಳಿ ಮಾರಾಯ್ರೆ ಇವತ್ತು!

**ಮೆರಿಡ್ಯೂ:** ಹೊರಗಡೆ ಹಿಮ ಸುರೀತಾ ಇದೆಯೇನೊ?

**ವಿಯರ್:** ವಿಪರೀತ! ನಮಗೆ ನೀವು ಇಲ್ಲಿ ಸಿಕ್ಕಿದ್ದು ಒಳ್ಳೇದಾಯ್ತು. ಇಲ್ಲ ಅಂದ್ರೆ ನಾವೆಲ್ಲೋ ಕಳೆದು ಹೋಗ್ತಾ ಇದ್ವಿ.

**ಮಿಸೆಸ್ ವೇನ್:** [ಇದ್ದಕ್ಕಿದ್ದ ಹಾಗೆ ಉದ್ರೇಕದಿಂದ] ಕ್ಷಮಿಸಿ, ಇವರೆ. ನಿಮ್ಮ ಹೆಸರೇನು?

**ವಿಯರ್:** ವಿಯರ್. ಗಿಲ್ಬರ್ಟ್ ವಿಯರ್ ಅಂತ. ಆಕೆ ನನ್ನ ಹೆಂಡತಿ.

**ಸ್ಟ್ಯಾಂಡಿಷ್:** ಅಗೋ! [ಎಲ್ಲರೂ ಅವನತ್ತ ನೋಡುತ್ತಾರೆ] ನಿಮಗೆ ನೆನಪಿಲ್ವಾ? ವಿಯರ್ ಕೂಡ ಕಾಲ್ನಿಯಲ್ಲಿದ್ದರು.

**ಹೋಟೆಲ್ ಮಾಲಿಕ** [ಬಾಗಿಲಲ್ಲಿ]; ನಿಮಗೆ ಏನಾದ್ರೂ ಬೇಕಿದ್ದಲ್ಲಿ ಬೆಲ್ ಮಾಡ್ತೀರಲ್ವಾ? [ಹೋಗುತ್ತಾನೆ.]

**ವಿಯರ್:** ಹೌದು, ನೀವು ಹೇಳಿದ್ದು ಸರಿ. ಅಲ್ಲಿ ನಾನು–ನನ್ನ ಹೆಂಡತಿ ಇಬ್ಬರೂ ಇದ್ವಿ, ಆದರೆ ಆವಾಗ ನಾವಿನ್ನೂ ಮದುವೆಯಾಗಿದ್ದಿಲ್ಲ. [ಇತರರನ್ನು ನೋಡುತ್ತಾ] ಓ, ನೀವೂ ಇದ್ರಿ, ನೀವೆಲ್ಲೂರ್‍ವೆ. ಮಿಸೆಸ್ ವೇನ್– ಕ್ಯಾಪ್ಟನ್ ಸ್ಟ್ಯಾಂಡಿಷ್, ಮಿಸ್ಟರ್...

**ಮೆರಿಡ್ಯೂ:** ಮೆರಿಡ್ಯೂ.

**ಎಲ್ಸೀ ವಿಯರ್:** [ಅವನ ಕಡೆ ಬಂದು] ನಿಮಗೂ ನಮ್ಮ ಹಾಗೇ ಟೆಲಿಗ್ರಾಂ ಬಂದಿದೆಯೋ ಏನು?

**ಸ್ಟ್ಯಾಂಡಿಷ್:** ನಿಮ್ಮ ಹಾಗೇ ?

**ವಿಯರ್:** ಹೌದು. ನಮ್ಮಿಬ್ಬರಿಗೂ ಬಂದಿದೆ. ವಿಚಿತ್ರ! ಏನು ಗೊತ್ತಾ? ಎಲ್ಸೀ ಮತ್ತು ನಾನು ಮದುವೆಯಾಗಿ ಈಗ ನಾಲ್ಕು ತಿಂಗಳು, ಅಷ್ಟೆ. ಮತ್ತವಳಿಗೆ ಬಂದಿರೋ ಟೆಲಿಗ್ರಾಂ ಅವಳ ಮದುವೆಗೆ ಮೊದಲಿನ ಹೆಸರಿನಲ್ಲಿದೆ.

**ಮೆರಿಡ್ಯೂ:** ನಾನು ಇನ್ನು ಇಲ್ಲಿ ಇರಲ್ಲ ಕಣ್ರಿ. ಇದರಲ್ಲೇನೋ ಮೋಸ ಇದೆ. ಇದ್ಯಾವುದೋ ಮೋಸದ ಆಟ ಅನ್ನೋದಾದ್ರೂ ನಾನೇನೂ ಮೋಸ ಹೋಗಲ್ಲ.

**ಮಿಸೆಸ್ ವೇನ್:** ಮೂರ್ಖನ ಹಾಗೆ ಮಾತಾಡಬೇಡಿ. ನೀವೀಗಾಗ್ಲೇ ಮೋಸ ಹೋಗಿದೀರಾ. ನಾವೆಲ್ರೂ ಮೋಸ ಹೋಗಿದೀವಿ. ಈಗ ಉಳಿದಿರೋದು ಏನು ಅಂದ್ರೆ ಕಾದು ನೋಡೋದು, ಅಷ್ಟೆ.

**ವಿಯರ್** [ಮೆಲ್ಲಗೆ ]; ನಾವು ಕಾಲ್ನಿ ಲಾಡ್ಜ್ ಗೆ ಹತ್ತಿರದಲ್ಲೇನಾದ್ರೂ ಇದ್ದೇವಾ?

**ಸ್ಟ್ಯಾಂಡಿಷ್:** ಹೌದು, ಹತ್ತಿರದಲ್ಲೇ.

**ವಿಯರ್:** ನೋಡಪ್ಪ! ನಾನೂ ಹಾಗೇ ಅಂದ್ಕೊಂಡಿದ್ದೆ. ಒಳ್ಳೆ ವಿಚಿತ್ರ ಕಾಕತಾಳೀಯವಲ್ವಾ ನಾವೆಲ್ಲ ಹೀಗೆ–

**ಮಿಸೆಸ್ ವೇನ್**: ಕಾಕತಾಳೀಯವೆ! ನೀವು ಬರೋಕಿಂತ ಮುಂಚೆ ಸ್ವಲ್ಪ ವಿಚಿತ್ರವಾಗೇ ಇತ್ತು. ಆದರೆ ಈಗ–

**ವಿಯರ್**: ತಾಳಿ. ಎಲ್ಲ ಸರಿಯಾಗಿ ಜ್ಞಾಪಿಸಿಕೊಳ್ಳೋಣ. ಮತ್ತು ಇದೇನಂತ ನೋಡೋಣ. ನಾವು ಐದು ಜನಾನೂ ಕಾಲ್ನಿ ಲಾಡ್ಜ್‌ನಲ್ಲಿ ಅತಿಥಿಗಳಾಗಿದ್ವಿ–ಕರ್ನಲ್ ಫಾಸ್ಟರ್‌ನ ಕೊಲೆಯಾದಾಗ.

**ಮಿಸೆಸ್ ವೇನ್** [ತಕ್ಷಣವೇ]: ಕೊಲೆ ಅಂತ ಯಾರು ಹೇಳಿದ್ದು?

**ವಿಯರ್**: ಕೊಲೆ ಅಲ್ಲ ಅಂತ ತೀರ್ಪೇನೋ ಬಂತು. ನಿಜ. ಆದರೆ ನನ್ನ ನಂಬಿಕೆ ಏನಂದ್ರೆ–

**ಮಿಸೆಸ್ ವೇನ್**: ನೀವು ಬೇರೆ ಏನೂ ಸಂಬೋಹಾಗಿಲ್ಲ. ಅದು ಸಹಜ ಮರಣ.

**ಮೆರಿಡ್ಯೂ**: ಇಲ್ಲ. ಇಲ್ಲ. ತೀರ್ಪು ಹಾಗಿರಬಹುದು. ಆದರೆ ನಡೆದದ್ದು ಹಾಗಲ್ಲ.

**ಎಲ್ಸೀ ವಿಯರ್**: ನನಗ್ಯಾಕೋ ಈ ಜಾಗ ಸರಿ ಇಲ್ಲ ಅನ್ಸುತ್ತೆ. ನಾವು ಯಾಕೆ ಹೊರಟುಹೋಗಬಾರದು? ನಾವು ಯಾರದೋ ಭೇಟಿಗಾಗಿ ಹೀಗೆ ಕಾಯೋದೇನೂ ಬೇಕಿಲ್ಲ ಅನ್ಸುತ್ತೆ.

**ವಿಯರ್**: ಆಗಬಹುದು, ಡಿಯರ್. ಆದ್ರೆ ನಾವು ಬಂದು ಬಿಟ್ಟಾಗಿದೆಯಲ್ಲ!ಹಾಗಾಗಿ, ನೋಡೋಣ. ತಾಳು, ಏನಾಗುತ್ತೆ ಅಂತ.

**ಎಲ್ಸೀ ವಿಯರ್** [ ಸ್ವಲ್ಪ ಪುಕ್ಕಲುತನದಿಂದ]; ನನಗೆ ಇದು ಇಷ್ಟ ಇಲ್ಲ! ಇದರಲ್ಲಿ ಖಂಡಿತ ಅಪಾಯದ ಸೂಚನೆ ಇದೆ.

**ಮಿಸೆಸ್ ವೇನ್**: ಹೌದು. ಮರಿ. ನೀನು ಹೇಳೋದು ನಿಜ.

**ಸ್ಕ್ಯಾಂಡಿಷ್**: ನಾನು ನಿಮ್ಮ ಮಾತು ಒಪ್ಪಲ್ಲ. ಇದೆಲ್ಲ ವ್ಯವಸ್ಥಿತವಾಗಿ ಮಾಡಿರೋ ಕೀಟಲೆ, ಅಷ್ಟೆ.

**ಮೆರಿಡ್ಯೂ**: ಅಲ್ಲ. ಅದು ಸಾಧ್ಯವಿಲ್ಲ.

**ಮಿಸೆಸ್ ವೇನ್**: ಸ್ಕಾಟ್‌ಲೆಂಡ್ ಯಾರ್ಡ್‌ನವರು ಸ್ವಲ್ಪ ತಡವಾಗಿ ಪುನಃ ಪ್ರಾರಂಭಿಸಿರುವ ಪತ್ತೆ ಕೆಲಸದಂತೆ ಕಾಣುತ್ತೆ .

**ಸ್ಕ್ಯಾಂಡಿಷ್**: ಅದೇನಾದ್ರೂ ಆಗಿರಲಿ. ನಾನು ಇದೆಲ್ಲ ಏನು ಅಂತ ಕೊನೇವರೆಗೂ ನೋಡ್ತೀನಿ.

**ವಿಯರ್** [ಹೆಂಡತಿಗೆ]; ನಾವು ಇಲ್ಲೇ ಇರೋಣವಾ, ಹ್ಯಾಗೆ?

**ಎಲ್ಸೀ ವಿಯರ್**: ಆಗಬಹುದು. ನಿಜ ಹೇಳಬೇಕೂಂದ್ರೆ ನನಗೆ ಭಯ ಅಂತ ಅಲ್ಲ, ಆದರೆ ಇದು ಯಾಕೊ ತುಂಬ ವಿಚಿತ್ರವಾಗಿದೆ.

**ವಿಯರ್**: ಇರ್ಲಿ ಬಿಡು. ಇದೂ ಒಳ್ಳೇ ಪಾರ್ಟೀನೇ. ನೀನು ಒಪ್ಪೋದಾದ್ರೆ, [ಒಂದು ಸಿಗರೇಟು ಹಚ್ಚುತ್ತಾನೆ.]

**ಮೆರಿಡ್ಯೂ** [ಸಿಡುಕಿನಿಂದ]; ನೋಡಿ. ಸಾರ್. ನೀವು ಇದನ್ನ ಇಷ್ಟು ಹಗುರವಾಗಿ– ತಗೋಬೇಡಿ. ಯಾಕಂದ್ರೆ ಕರ್ನಲ್ ಫಾಸ್ಟರ್ ನನ್ನ ಹಳೆಯ ಸ್ನೇಹಿತನಾಗಿದ್ದವನು.

**ಸ್ಟ್ಯಾಂಡಿಷ್** [ಅಸಹನೆಯಿಂದ]; ಅಯ್ಯೋ, ಗೊತ್ತು ಬಿಡಿ. ಅಲ್ಲಾರಿ, ನಾವು ಸ್ವಲ್ಪ ಸರಿಯಾಗಿ ಯೋಚನೆ ಮಾಡೋದು ಬೇಡವೆ? ಇದಕ್ಕೂ–ಅಂದರೆ ಈ ಟೆಲಿಗ್ರಾಂಗಳು, ಭೇಟಿಯ ಈ ಸ್ಥಳ, ನಾವು ಮೂರು ವರ್ಷದ ಹಿಂದೆ ಸೇರಿದ್ದು– ಇದಕ್ಕೂ ಮತ್ತು ಮರೆತುಹೋಗಿರೋ ಘಟನೆಗೂ ನಾವು ಯಾಕೆ ಸಂಬಂಧ ಕಲ್ಪಿಸಬೇಕು?

**ಮಿಸೆಸ್ ವೇನ್:** ಅದು ನಿಜ.

**ಸ್ಟ್ಯಾಂಡಿಷ್:** ಈ ಹೊಟ್ಲಗಿಂತಲೂ ದರಿದ್ರವಾಗಿರೋದು ಏನಾದ್ರೂ ಇರಲಿಕ್ಕೆ ಸಾಧ್ಯಾನಾ? ನಾವ್ಯಾಕೆ ಹೆದರಬೇಕು–ಫಾಸ್ಟರ್‌ನ ಭೂತ ಬಂದುಬಿಟ್ಟೀತು ಅನ್ನೋ ಹಾಗೆ?

**ಎಲ್ಸೀ ವಿಯರ್:** ಅಂಥ ವಿಷಯ ಮಾತಾಡಬೇಡಿ! ಅಸಹ್ಯ.

**ಸ್ಟ್ಯಾಂಡಿಷ್:** ತಪ್ಪಾಯ್ತು, ಕ್ಷಮಿಸಿ. ನನಗೆ ಕರ್ನಲ್ ಫಾಸ್ಟರ್ ತುಂಬ ಚೆನ್ನಾಗಿ ಗೊತ್ತಿದ್ದೋರು. ಬೇರೆಯವರಿಗಿಂತಲೂ ಹೆಚ್ಚು ದು:ಖ ನನಗಾಗಿತ್ತು. ನಿಜ ಹೇಳಬೇಕೂಂದ್ರೆ, ಬೇರೆಯವರು ನಾಟ್ಕ ಮಾಡಿದ್ದೇ ಜಾಸ್ತಿ ಅನ್ನಬಹುದು.

**ಮೆರಿಡ್ಯೂ:** ಸಾರ್, ನೀವು ನನ್ನ ಬಗ್ಗೆ ಅನುಮಾನ ಸೂಚಿಸ್ತಿಲ್ಲ ತಾನೆ?

[ಸ್ಟ್ಯಾಂಡಿಷ್ ಭುಜ ಎಗುರಿಸಿ, ಆಚೆ ನಡೆಯುತ್ತಾನೆ. ಹೋಟೆಲ್ ಮಾಲಿಕ ಖಾಲಿ ಗ್ಲಾಸುಗಳನ್ನು ತೆಗೆದುಕೊಂಡು ಹೋಗಲು ಬರುತ್ತಾನೆ.]

**ಮೆರಿಡ್ಯೂ:** ಏನ್ರೀ, ನಿಮಗೇನಾದರೂ ನೆನಪಿದೆಯಾ ಮೂರು ವರ್ಷದ ಹಿಂದೆ ಕಾಲ್ನಿ ಲಾಡ್ಜ್‌ನಲ್ಲಾದ ಆ ಘಟನೆ?

**ಹೋಟೆಲ್ ಮಾಲಿಕ:** ಇದೆ ಸಾರ್. ನೆನಪಿದೆ, ಕರ್ನಲ್ ಫಾಸ್ಟರ್ ಹಾಸಿಗೆಯಲ್ಲಿ ಸತ್ತು ಬಿದ್ದಿದ್ರಂತೆ.

**ಎಲ್ಸೀ ವಿಯರ್:** ಇದ್ಯಾಕೆ ಬೇಕು?

**ಮೆರಿಡ್ಯೂ:** ಜನ ಈಗ್ಲೂ ಅದರ ಬಗ್ಗೆ ಮಾತಾಡ್ತಾರಾ?

**ಹೋಟೆಲ್ ಮಾಲಿಕ:** ಹಾಗೇನಿಲ್ಲ, ಅಂತ ಕಾಣುತ್ತೆ. ತೀರ್ಪು ಬಂತು! ಇದರಲ್ಲಿ ಏನೋ ಮೋಸ ನಡೆದಿರಬಹುದೆಂದು ಯಾರೂ ಭಾವಿಸಲಿಲ್ಲ.

**ಮೆರಿಡ್ಯೂ:** ಅದೂ ಸರೀನೇ.

**ಮಿಸೆಸ್ ವೇನ್:** ನಿಮಗೆ ಕರ್ನಲ್ ಫಾಸ್ಟರ್ ಗೊತ್ತಿದ್ರಾ?

**ಹೋಟೆಲ್ ಮಾಲಿಕ:** ತುಂಬ ಚೆನ್ನಾಗಿ, ಮೇಡಂ. ನಿಮಗೆ?

**ಮಿಸೆಸ್ ವೇನ್:** ಗೊತ್ತಿದ್ರು, ನಿಜ ಹೇಳಬೇಕೂಂದ್ರೆ–

**ವಿಯರ್** [ಮಾತಿನ ಮಧ್ಯೆ ಪ್ರವೇಶಿಸಿ]; ಆಯ್ತು , ಯಜಮಾನ್ರೆ ನೀವು ಹೋಗಬಹುದು. [ಹೋಟೆಲ್ ಯಜಮಾನ ಹೋಗುತ್ತಾನೆ.] ನಾವು ನಮ್ಮ ಸ್ವಂತ ವಿಷಯವನ್ನು ಎಲ್ಲರಿಗೂ ಗೊತ್ತಾಗೋ ಹಾಗೆ ಮಾತಾಡೋದು ಸರಿಯಲ್ಲ.

**ಮಿಸೆಸ್ ವೇನ್:** ದಯವಿಟ್ಟು ಕ್ಷಮಿಸಿ. ನೀವು ಹೇಳೋದು ಸರಿ. ಅಂದ್ಹಾಗೇ ಯಾಕೋ ಎಲ್ಲರೂ ಬಹು ಬೇಗ ತಪ್ಪು ತಿಳಕೊಳ್ತಿದಾರೆ ಅನ್ನಿಸ್ತಿದೆ.

**ವಿಯರ್**: ಸಾಧ್ಯವಾದರೆ ಅದನ್ನು ಮರೆತುಬಿಡೋಣ ಅನ್ನೋದು ನಮ್ಮ ಇಷ್ಟ. ಆ ಸಮಯದಲ್ಲಿ ಎಲ್ಸೀಗೆ ಬಹಳ ಶಾಕ್ ಆಗಿತ್ತು. ಮತ್ತು ಈ ಹಾಳು ಟೆಲಿಗ್ರಾಂ ಬಾರದೇ ಹೋಗಿದ್ರೆ–

**ಮಿಸೆಸ್ ವೇನ್**: ಹೌದು. ಆದರಿಂದ ನನಗೂ ಬಹಳ ಬೇಜಾರಾಯ್ತು. ಯಾಕಂದ್ರೆ, ನಾವು ಹಲವಾರು ವರ್ಷಗಳಿಂದ ಸ್ನೇಹಿತರಾಗಿದ್ದವರು. ಬಹಳ ಜನಕ್ಕೆ ಗೊತ್ತಿಲ್ಲ ಅಂತ ಕಾಣುತ್ತೆ–ನಮ್ಮ ಮದುವೆ ನಿಶ್ಚಯವೂ ಆಗಿತ್ತು!

**ಮೆರಿಡ್ಯೂ**: ಹೌದಾ?

**ಮಿಸೆಸ್ ವೇನ್** [ಸ್ವಲ್ಪದರಲ್ಲಿ ಹೇಳಿ ಮುಗಿಸುವ ಹಾಗೆ ]: ನಮ್ಮಲ್ಲಿ ಜಗಳ ಆಯ್ತು. ಮದುವೆ ನಡೀಲಿಲ್ಲ, ಅಷ್ಟೆ.

**ಮೆರಿಡ್ಯೂ**: ಆ ಮನುಷ್ಯ ಏನೇ ಹೇಳ್ಲಿ. ಅದು ಸಹಜ ಸಾವು ಅಂತ ಜನ ಏನೂ ನಂಬೋ ಹಾಗೆ ಕಾಣಲಿಲ್ಲ.

**ವಿಯರ್**: ಆ ಆಸ್ಟ್ರೇಲಿಯನ್ ಸ್ನೇಹಿತನ್ಯೇನಾಯ್ತು–ಕೊಲೆಗಾರನ ಪತ್ತೆ ಹಚ್ಚದೇ ಬಿಡೋಲ್ಲ ಅಂತ ಹೇಳಿದ್ನಲ್ಲ, ಅವನ ಕಥೆ?

**ಮಿಸೆಸ್ ವೇನ್**: ನನಗದು ನೆನಪಿಲ್ಲ.

**ಸ್ಟ್ಯಾಂಡಿಷ್**: ಅದು ನಿಜ. ಆ ಮನುಷ್ಯ ಇದ್ದ. ಫಾಸ್ಟರ್ ಜೊತೆ ಅವನ ವ್ಯವಹಾರದಲ್ಲಿ ಅನೇಕ ವರ್ಷ ಪಾಲುದಾರನಾಗಿದ್ದವನು. ಅವನು ಇಂಗ್ಲೆಂಡಿಗೆ ಬರೋ ದಾರೀಲಿ ಮುಳುಗಿ ಸತ್ತ.

**ಮೆರಿಡ್ಯೂ**: ಮುಳುಗಿ ಸತ್ತನೇ? ಓ ಹೌದು. ನೆನಪಾಯಿತು. ಆದರೆ ನಡೆದದ್ದು ಹೀಗೇ ಅಂತ ಖಚಿತವಾಗಿ ಅವನು ಹ್ಯಾಗೆ ಹೇಳಲಿಕ್ಕೆ ಸಾಧ್ಯ?

**ಸ್ಟ್ಯಾಂಡಿಷ್**: ಏನೋ ನಂಗೊತ್ತಿಲ್ಲ. ನಮಗೆ ತಿಳಿದದ್ದೇನೆಂದರೆ ಅವನು ಸೇಡು ತೀರಿಸ್ಕೊಳ್ಳೋದಾಗಿ ಹೇಳಿ ಇಂಗ್ಲೆಂಡಿನ ಹಡಗು ಹತ್ತಿ ಹೊರಟ. ಆದರೆ ಏನು ಮಾಡೋದಕ್ಕೂ ಮುಂಚೇನೇ ಸತ್ತ.

**ಮಿಸೆಸ್ ವೇನ್**: ಉದ್ದೇಶವಿಲ್ಲದ ಕೊಲೆ ಸುಲಭವಾಗಿ ಬಿಡಿಸಲಾಗುವದಿಲ್ಲ. ಜನ ಸುಮ್ಮನೆ ತಮಾಷೆಗಾಗಿ ಕೊಲೆ ಮಾಡಲ್ಲ.

**ವಿಯರ್**: ಉದ್ದೇಶ ಇದ್ದಿಲ್ಲ ಅಂತ ಕಾಣುತೆ.

**ಸ್ಟ್ಯಾಂಡಿಷ್**: ನನಗೆ ಅದರ ಬಗ್ಗೆ ಗೊತ್ತಲ್ಲ.

**ಮಿಸೆಸ್ ವೇನ್**: ನಿಜವಾಗ್ಲೂ?

**ಸ್ಟ್ಯಾಂಡಿಷ್**: ಕರ್ನಲ್ ಫಾಸ್ಟರ್ ಬಡವನಾಗಿದ್ದಿಲ್ಲ.

**ಎಲ್ಸೀ ವಿಯರ್**: [ಉದ್ರೇಕದಿಂದ] ನೀವು ಇಲ್ಲಿ ಯಾರ ಬಗ್ಗೇನೋ ಗುಮಾನಿ ಸೂಚಿಸ್ತಾ ಇದೀರಾ!

**ವಿಯರ್**: ಇಲ್ಲಿ ನೋಡಿ. ಕ್ಯಾಪ್ಟನ್ ಇಲ್ಲಿ ನಿಮಗೊಂದು ಕುತೂಹಲದ ವಿಷಯ ತಿಳಿಸ್ಲಾ? ಕರ್ನಲ್ ಫಾಸ್ಟರ್‌ನ ಉಯಿಲಿನ ಪ್ರಕಾರ ನನ್ನ ಹೆಂಡತಿಯೂ ಅವನ

ಆಸ್ತಿ ಪಡೆಯುವರಲ್ಲಿ ಒಬ್ಬಳಾಗಿದ್ದಳು. ನೀವು ನಮ್ಮ ಬಗ್ಗೆ ಏನಾದರೂ ಗುಮಾನಿ ಪಟ್ಟರೆ, ದೇವರಾಣೆಗೂ ಹೇಳ್ತೀನಿ–

**ಸ್ಟ್ಯಾಂಡಿಷ್:** ಮೂರ್ಖನ ಹಾಗೆ ಮಾತಾಡಬೇಡಿ.

**ಮಿಸೆಸ್ ವೇನ್:** ನೀವು ಬೇಕಾದರೆ ನನ್ನ ಬಗ್ಗೇನೂ ಅನುಮಾನ ಪಡಬಹುದು . ಯಾಕೆಂದ್ರೆ ಅವರು ಒಂದು ಸಲ ನನ್ನನ್ನು ಮದ್ವೆ ಮಾಡ್ಕೊಳ್ಳೊದಾಗಿ ಹೇಳಿ, ಆಮೇಲೆ [ಕೆಮ್ಮಿ, ತಕ್ಷಣವೇ ಮಾತು ನಿಲ್ಲಿಸುತ್ತಾಳೆ.]

**ಮೆರಿಡ್ಯೂ:** ಹುಚ್ಚು ಮಾತು, ಹುಚ್ಚು ಮಾತು.

**ಸ್ಟ್ಯಾಂಡಿಷ್:** ಇಲ್ಲಿ ಯಾರೂ ಏನೂ ಪರೋಕ್ಷವಾಗಿ ಸೂಚಿಸ್ತಾ ಇಲ್ಲ. ಹಾಗೆ ನೋಡಿದರೆ, ನೀವು ನನ್ನ ಬಗ್ಗೇನೇ ಯಾಕೆ ಗುಮಾನಿ ಪಡಬಾರದು? ಯಾಕಂದ್ರೆ, ಫಾಸ್ಟರ್ ಬಗ್ಗೆ ಯಾರಿಗಾದರೂ ಸಿಟ್ಟು ಇರೋ ಕಾರಣ ಇದ್ದಿದ್ರೆ ಅದು ನಾನೇ ಅಂತ ಹೇಳಬಹುದು.

**ವಿಯರ್:** ನೀವು ಅವರ ಜೊತೆ ಇಂಡಿಯಾದಲ್ಲಿ ಇದ್ರಿ, ಅಲ್ಲವಾ?

**ಸ್ಟ್ಯಾಂಡಿಷ್:** ಹೌದು, ಇದ್ದೆ. ಅವರು ನಮ್ಮ ಬೆಟಾಲಿಯನ್‌ನ ಕಮ್ಯಾಂಡಿಂಗ್ ಆಫೀಸರ್ ಆಗಿದ್ರು. ಆ ಸಮಯದಲ್ಲಿ ನಾವಿದ್ದ ಸಂಸ್ಥಾನದಲ್ಲಿನ ಗವರ್ನರ್‌ನ ಮಗಳೊಂದಿಗೆ ನನ್ನ ಮದುವೆ ನಿಶ್ಚಯವಾಗಿತ್ತು. ನಾವು ಪರಸ್ಪರ ತುಂಬ ಪ್ರೀತಿಸ್ತಾ ಇದ್ವಿ. ಆಗ ಈ ಫಾಸ್ಟರ್ ಮಧ್ಯೆ ಪ್ರವೇಶಿಸಿದ. ನಾನು ಅವಳನ್ನು ಅವನಿಗೇ ಬಿಟ್ಟುಕೊಟ್ಟರೆ ಅವನು ವಿಲ್‌ನಲ್ಲಿ ನನಗೆ ಹತ್ತು ಸಾವಿರ ಪೌಂಡು ಬರೀತೇನೆ ಅಂತ ವಾಗ್ದಾನ ಮಾಡ್ದ. ನಾನು ಒಪ್ಪಿದೆ ಮತ್ತು ಅವನು ಆ ಹುಡುಗಿಯನ್ನು ಮದುವೆಯಾದ.

**ಮೆರಿಡ್ಯೂ:** ನೀವು ಕೂಡ ಅವರ ಆಸ್ತಿ ಪಡೆಯೋರಲ್ಲಿ ಒಬ್ಬರಾಗಿದ್ದಿರಿ ಅನ್ನೋದು ನನಗೇನೂ ನೆನಪಿಲ್ಲ.

ಸ್ಟ್ಯಾಂಡಿಷ್ : ನೀವು ಹೇಳಿದ್ದೂ ಸರೀನೇ. ನನ್ನ ಹೆಸರು ವಿಲ್‌ನಲ್ಲಿ ಇರಲಿಲ್ಲ. [ಒಂದು ಸಿಗರೇಟು ಹಚ್ಚುತ್ತಾ] ಆದ್ರೂ ಕೂಡ ನಾನು ಅವನನ್ನು ಕೊಲ್ಲಲಿಲ್ಲ.

**ವಿಯರ್:** ಅದು ತುಂಬ ಸೋಜಿಗಾನೇ!

**ಎಲ್ಸೀ ವಿಯರ್:** ನಿಮಗೆ ಹಾಗಾದದ್ದು ಸರಿ ಅಂತ ನನ್ನ ಅಭಿಪ್ರಾಯ.

**ಸ್ಟ್ಯಾಂಡಿಷ್:** ಆಯ್ತು. ಈಗ ಮುಂದೇನು? ಮೆರಿಡ್ಯೂ ಅವರು ಕರ್ನಲ್‌ನ ವ್ಯವಹಾರದ ವಿಷಯ ನೋಡಿಕೊಳ್ತಾ ಇದ್ದವರು. ಹಾಗಾಗಿ, ಅಲ್ಲಿ ಏನಾದರೂ ಉದ್ದೇಶ ಇದ್ದಿರಬಹುದಾ?

**ಮೆರಿಡ್ಯೂ:** [ಆ ವಿಷಯವನ್ನು ನಗುತ್ತಾ ತಳ್ಳಿ ಹಾಕುತ್ತಾ]; ಎಷ್ಟು ಹಾಸ್ಯಾಸ್ಪದ ಅಂತೀನಿ!

**ಮಿಸೆಸ್ ವೇನ್:** ಇದೀಗ ತುಂಬ ಬೇಜಾರು ತರಿಸ್ತಾ ಇದೆಯಪ್ಪ. [ವಾಚ್ ನೋಡುತ್ತಾಳೆ] ಇಪ್ಪತ್ತು ನಿಮಿಷ ಆಯ್ತು. ನಾವು ಇನ್ನೊಂದು ರೌಂಡ್ ಡ್ರಿಂಕ್ಸ್ ಹೇಳೋಣ. ಇಲ್ಲ ಅಂದ್ರೆ ನಮ್ಮ ಮುಖ ಕಿತ್ತು ಹೋಗೊ ಹಾಗೆ ಒಬ್ಬರಿಗೊಬ್ಬರು ಹೊಡೆದಾಡಿ ಬಿಡಬಹುದು.

**ಸ್ಟ್ಯಾಂಡಿಷ್** [ಬೆಲ್ ಹತ್ತಿರ ನಡೆದು]: ಆಯ್ತು, ಹೇಳೋಣ.ಆದ್ರೆ ಈ ಸಲದ್ದು ನನ್ನದು. [ಕಿಟಕಿಯಿಂದ ಹೊರನೋಡುತ್ತಾ] ಅಯ್ಯೋ, ಇದೇನು ಮಾರಾಯಾ? ಹೊರಗಡೆ ಎಲ್ಲಿ ನೋಡಿದರೂ ಕರಿ ಕಂಬಳಿ ಹಾಸಿದ ಹಾಗಿದೆ!

**ಮಿಸೆಸ್ ವೇನ್:** ನಾವು ಇವತ್ತು ಇಲ್ಲೇ ಉಳಕೋಬೇಕಾಗುತ್ತೆ, ನೋಡಿ ಬೇಕಾದರೆ.

**ಎಲ್ಸೀ ವಿಯರ್:** ಅಯ್ಯೋ, ನನ್ನ ಕೈಲಾಗಲ್ಲಪ್ಪ! ಗಿಲ್ಬರ್ಟ್, ನಾನಿಲ್ಲಿರಾಕಾಗಲ್ಲ.

**ವಿಯರ್:** ಆಯ್ತು ಡಿಯರ್, ಬೇಡ. ಸ್ವಲ್ಪ ಹೊತ್ತು ಕೂತ್ಕೋ. ಯೋಚನೆ ಮಾಡಬೇಡ.

**ಮಿಸೆಸ್ ವೇನ್:** ಪಾಪ, ಅವಳು ಪುಕ್ಕಲು ಕಣಪ್ಪ. ನಾನೂ ಅಷ್ಟೆ.

[ಹೋಟೆಲ್ ಮಾಲಿಕ ಬರುತ್ತಾನೆ.]

**ಸ್ಟ್ಯಾಂಡಿಷ್:** ಬಂದ್ರಾ? ಮಿಸೆಸ್ ವಿಯರ್, ನೀವೇನು ತಗೋಳ್ತೀರ?

[ಅವಳು ತಲೆ ಅಲ್ಲಾಡಿಸುತ್ತಾಳೆ]

**ವಿಯರ್:** ನಮಗೇನೂ ಬೇಡ, ಥ್ಯಾಂಕ್ಸ್. ಓ, ತಾಳಿ, ನಾನು ಒಂದು ಚೂರು ವಿಸ್ಕಿ ತಗೊಳ್ತೀನಿ.

**ಸ್ಟ್ಯಾಂಡಿಷ್:** ಮಿಸೆಸ್ ವೇನ್, ನೀವು?

**ಮಿಸೆಸ್ ವೇನ್:** ನಾನೂ ತಗೊಳ್ತೀನಿ.

**ಸ್ಟ್ಯಾಂಡಿಷ್:** ಮೆರಿಡ್ಯೂ, ನಿಮಗೂ ವಿಸ್ಕೀನಾ?

**ಮೆರಿಡ್ಯೂ:** ಅಯ್ಯೋ, ಬೇಡಪ್ಪ. ನಾನು ಬೇರೆ ಬೇರೆ ಡ್ರಿಂಕ್ಸ್‌ನ್ನ ಮಿಕ್ಸ್ ಮಾಡ್ಲಿಕ್ಕೆ ಶುರು ಮಾಡಿದರೆ! ಆಯ್ತು, ನಾನೂ ತಗೋಬೇಕು ಅನ್ನೋದಾದ್ರೆ ನನಗೆ ಇನ್ನೊಂದು ಗ್ಲಾಸು ಷೇರಿ ತರಿಸಿ.

**ಸ್ಟ್ಯಾಂಡಿಷ್:** [ಹೋಟೆಲ್ ಮಾಲಿಕನಿಗೆ]: ಷೇರಿ ಮತ್ತು ಮೂರು ವಿಸ್ಕಿ.

**ಹೋಟೆಲ್ ಮಾಲಿಕ:** ಆಯ್ತು, ಸರ್.

**ಮಿಸೆಸ್ ವೇನ್:** ಹಿಮ ಸುರಿಯೋದು ನಿಲ್ಲಲಿಲ್ಲ ಅಂದ್ರೆ ನಮಗೆ ಇಲ್ಲಿ ಮಲಗಲಿಕ್ಕೆ ವ್ಯವಸ್ಥೆ ಮಾಡ್ತೀರಿ ತಾನೆ?

**ಹೋಟೆಲ್ ಮಾಲಿಕ:** ಮಾಡ್ತೀನಿ, ಮೇಡಂ. ಏನೊ ಪರವಾಗಿಲ್ಲ ಅನ್ನೋ ಹಾಗೆ ಮಾಡಬಹುದು.

[ಹೋಟೆಲ್ ಮಾಲಿಕ ಹೋಗುತ್ತಾನೆ.]

**ವಿಯರ್:** [ಸ್ಟ್ಯಾಂಡಿಷ್‌ಗೆ]: ನಾನು ಒರಟಾಗಿ ಮಾತಾಡಿದ್ದಕ್ಕೆ ಕ್ಷಮಿಸಿ.

**ಸ್ಟ್ಯಾಂಡಿಷ್:** ಏನು ಪರವಾಗಿಲ್ಲ ಬಿಡಿ.

**ವಿಯರ್:** ಅನುಮಾನದ ಮಾತುಗಳನ್ನ ನಾವು ಸಹಿಸಿಕೊಂಡಿರೋದು ಇದೇ ಮೊದಲನೇ ಸಲ ಅಂತೇನೂ ಅಲ್ಲ.

**ಮೆರಿಡ್ಯೂ:** ಅಂದರೆ, ಬೇರೆಯವರು–?

**ಎಲ್ಸೀ ವಿಯರ್:** ಬೇರೆಯವರು ಕೂಡ. ಯಾಕಂದ್ರೆ, ಫಾಸ್ಟರ್ ನನಗೆ ಸ್ವಲ್ಪ ಹಣ ಬಿಟ್ಟು ಹೋಗಿದಾರಲ್ಲ ಅದಕ್ಕೆ–[ಒಮ್ಮೆಲೆ ಕೆರಳಿ] ನಾನು ಅಂಥ ಕೆಲ್ಸ ಮಾಡಬಹುದು ಅಂದ್ಕೊಂಡಿದೀರಾ?

**ವಿಯರ್:** ಎಲ್ಸೀ, ದಯವಿಟ್ಟು ಸುಮ್ಮನಿರು!
**ಮಿಸೆಸ್ ವೇನ್:** ನೀವು ಹಾಗೆ ಮಾಡಿರಬಹುದು ಅನ್ನೋ ವಿಚಾರಾನೇ ಯಾರಿಗೂ ಬಂದಿರಲಿಕ್ಕೆ ಸಾಧ್ಯವಿಲ್ಲ.
**ಸ್ಟ್ಯಾಂಡಿಷ್** [ಅಸಹನೆಯಿಂದ]; ಏನು ಮಾಡಾಕಾಗುತ್ತೆ? ಅದೆಲ್ಲ ಪೇಪರಿನಲ್ಲಿ ಬಂದ ಅಭಿಪ್ರಾಯಗಳು. ಯಾರಾದರೂ ಅಂಥ ಸಂದರ್ಭದಲ್ಲಿ ಅನಿರೀಕ್ಷಿತವಾಗಿ ಸತ್ತರೆ, ತಕ್ಷಣ ಒಂದು ಮಹಜರ್ ನಡೆಸ್ತಾರೆ. ಸತ್ತದ್ದು ಗುಂಡೇಟಿನಿಂದಾನಾ? ಅಥವಾ ಯಾರಾದರೂ ಕತ್ತು ಹಿಸುಕಿ ಸಾಯಿಸಿದರಾ? ಅಂತ.
**ಮೆರಿಡ್ಯೂ:** ವಿಷ ಹಾಕಿರಬಹುದು ಅಂತ?
**ವಿಯರ್:** ವಿಚಾರಣೆಯ ಸಮಯದಲ್ಲಿ ಅದನ್ನು ತಳ್ಳಿ ಹಾಕಲಾಯಿತು.
**ಮೆರಿಡ್ಯೂ:** ಕೆಲವು ವಿಷಯಗಳ ಬಗ್ಗೆ ಏನೂ ಗೊತ್ತಾಗಲ್ಲ. ಉದಾಹರಣೆಗೆ, ಒಂದು ಸೌತ್ ಅಮೆರಿಕನ್ ಪಾಯ್ಸನ್ ಇದೆ. ಆ ಮೇಲೆ ಇಂಡಿಯಾದಲ್ಲಿ ನಡೆದ ಒಂದು ಕೇಸಿನ ಬಗ್ಗೇನೂ ನಾನು ಕೇಳಿದೀನಿ–
**ಮಿಸೆಸ್ ವೇನ್:** ಮೆರಿಡ್ಯೂ ಅವರೆ, ಕ್ಯಾಪ್ಟನ್ ಸ್ಟ್ಯಾಂಡಿಷ್ ಅವರು ಇಂಡಿಯಾದಲ್ಲಿದ್ದರು ಅಂತ ನೀವು ಮರೆತಿಲ್ಲ, ಅಲ್ಲವಾ?
**ಸ್ಟ್ಯಾಂಡಿಷ್:** [ನೀರಸವಾಗಿ]; ಥ್ಯಾಂಕ್ಯು.
**ಮೆರಿಡ್ಯೂ:** ಅಯ್ಯೋ, ನಾನೇನೊ ಹೇಳಿಬಿಟ್ಟೆ. ಕ್ಷಮಿಸಿ. ಒಂದು ಉದಾಹರಣೆ ಕೊಡ್ತಿದ್ದೆ, ಅಷ್ಟೆ
**ಸ್ಟ್ಯಾಂಡಿಷ್:** ಅಯ್ಯೋ ಹೋಗ್ರಿ, ಯಾವ ಉದಾಹರಣೇನಾದ್ರೂ ಕೊಡಿ. ಯಾರಿಗೆ ಬೇಕು?
[ಡ್ರಿಂಕ್ಸ್ ತಗೊಂಡು ಹೋಟೆಲ್ ಮಾಲಿಕ ಬರುತ್ತಾನೆ. ಟ್ರೇಯನ್ನು ಟೇಬಲ್‌ನ ಮೇಲಿಡುತ್ತಾನೆ. ಸ್ಟ್ಯಾಂಡಿಷ್ ದುಡ್ಡು ಕೊಡುತ್ತಾನೆ. ಹೋಟೆಲ್ ಮಾಲಿಕ ಹೋಗುತ್ತಾನೆ. ಸ್ಟ್ಯಾಂಡಿಷ್‌ನು ಡ್ರಿಂಕ್ಸನ್ನು ಮಿಸೆಸ್ ವೇನ್‌ಗೆ ಕೊಡುತ್ತಾನೆ. ವಿಯರ್ ಮತ್ತು ಮೆರಿಡ್ಯೂ ತಮ್ಮದನ್ನು ತಾವೇ ತೆಗೆದುಕೊಳ್ಳುತ್ತಾರೆ. ಟ್ರೇನಲ್ಲಿ ಒಂದು ಗ್ಲಾಸು ಉಳಿದಿದೆ]
**ಸ್ಟ್ಯಾಂಡಿಷ್:** ತಗೊಳ್ಳಿ. ನಾವು ಮತ್ತೆ ಯಾವತ್ತೂ ಸೇರೋದು ಬೇಡ ಅಂತ ಹೇಳಿ ಕುಡಿಯೋಣ.
**ಮೆರಿಡ್ಯೂ:** ಆಹ್!
**ಎಲ್ಸೀ ವಿಯರ್** [ಇದ್ದಕ್ಕಿದ್ದಹಾಗೆ]; ಓಹ್!
**ವಿಯರ್** [ಸ್ವಲ್ಪ ರೇಜಿಗೆಯಿಂದ] ;ಏನಾಯ್ತು?
**ಎಲ್ಸೀ ವಿಯರ್:** ಇದು ಮತ್ತೆ ನನ್ನ ನೆನಪಿಗೆ ತರ್ತಾ ಇದೆ–ಅದೇ. ಕಾಲ್ನಿಯಲ್ಲಿ ಕರ್ನಲ್ ಫಾಸ್ಟರ್ ಸತ್ತ ಹಿಂದಿನ ರಾತ್ರಿ. ನಿಮಗೂ ನೆನಪಾಗಲಿಲ್ಲವಾ? ನಾವು ದಿವಾನ್‌ಖಾನೆಯಲ್ಲಿ ಕೂತಿದ್ವಿ, ಮತ್ತು ಅವರು ನಮಗೆಲ್ಲರಿಗೂ ಡ್ರಿಂಕ್ಸ್ ತರಿಸಿದ್ದರು.
**ಮಿಸೆಸ್ ವೇನ್:** ಅಯ್ಯೋ ಏನು ಹುಡುಗಿ ಅಂತೀನಿ! ಎಂಥ ಅನಿಷ್ಟದ ನೆನಪು!
**ಮೆರಿಡ್ಯೂ:** ಹೌದು. ಅಂದ್ಹಾಗೆ, ನಾನು ಅವತ್ತು ಷೆರಿ ಕುಡೀತಾ ಇದ್ದಿಲ್ಲ.

**ಸ್ಟ್ಯಾಂಡಿಷ್**: ನಿಜ. ಅದೆಂಥದೋ ಲಿಕ್ಕರ್ ಅಲ್ವಾ?
**ವಿಯರ್**: ಹೌದು. ಕರ್ನಲ್ ಅವರು ಅದೆಂಥದ್ದೋ ತರಿಸಿದ್ರು-ಅವರಿಗೆ ತುಂಬ ಇಷ್ಟವಾದ್ದು. ಎಂಥ ಮದ್ಯ ಅದು? ಆ್ಯಬ್‌ಸಿನ್ತಾ?
**ಮಿಸೆಸ್ ವೇನ್**: ಹೌದು . ಆ್ಯಬ್‌ಸಿನ್ತ್.
**ಮೆರಿಡ್ಯೂ**: ಅವತ್ತು ಸಾಯಂಕಾಲ ನಾವೆಲ್ಲ ಎಷ್ಟು ಮಜವಾಗಿ ಕಾಲ ಕಳೆದೆವು! ಆಮೇಲೆ, ಮಾರನೇ ದಿನ ಬೆಳಿಗ್ಗೇನೇ ಹಾಗಾಗೋದು ಅಂದ್ರೆ-!
**ಮಿಸೆಸ್ ವೇನ್**: ನಾನು ಇವತ್ತು ರಾತ್ರಿ ಇಂಥ ಹೋಟ್ಲಲ್ಲಿ ಹ್ಯಾಗಪ್ಪ ಕಳೆಯೋದು?
**ವಿಯರ್**: ಇಲ್ನೋಡಿ. ನಾವೀಗ ಬೇರೆ ವಿಷಯ ಮಾತಾಡೋಣ. ಇದು ಬೇಡ. ದಯವಿಟ್ಟು, ಇದು ಸಾಕಾಯ್ತು.
**ಮೆರಿಡ್ಯೂ**: ಕಾರ್ಡ್ಸ್ ಆಡೋಣವಾ?
**ಮಿಸೆಸ್ ವೇನ್**: ಕಾರ್ಡ್ಸ್ ಅಂದ್ರಾ ? ಈಗ ಒಂಬತ್ತು ಇಪ್ಪತ್ತೈದಾಯ್ತು. ಒಂಬತ್ತೂವರೆಗೆ ನಾನು ನಿಮ್ಮ ಕಾರು ಸೇರ್ಕೊಳ್ತೀನಿ. ಇಲ್ಲ ಅಂದ್ರೆ ಇಲ್ಲಿ ಮಹಡಿ ಮೇಲೆ ನನಗಾಗಿ ಕಾಯ್ತಾ ಇರೋ ಮುರಿದುಬೀಳೋವಂಥ ಮಂಚಕ್ಕೆ ಹೋಗಿ ಮಲಕ್ಕೊಳ್ತೇನೆ.
**ಎಲ್ಸೀ ವಿಯರ್** [ಬಾಗಿಲತ್ತ ನಡೆದು]; ಬನ್ನಿ, ಡಿಯರ್, ನಾವು ಹೋಗೋಣ. ನಾವು ಸಾಕಷ್ಟು ಹೊತ್ತು ಕಾದದ್ದಾಯ್ತು. [ಇತರರಿಗೆ] ನಾವೆಲ್ಲರೂ ಒಟ್ಟಿಗೇ ಹೋದ್ರೆ ಹೇಗೆ?
**ವಿಯರ್**: ನೀವೇನು ಹೇಳ್ತೀರ?
**ಸ್ಟ್ಯಾಂಡಿಷ್**: ಆಗಬಹುದು. ಮೇನ್ ರೋಡ್ ತಲಪೋವರ್ಗೆ ತೂಗಾಡಿಕೊಂಡು ಒಟ್ಟಿಗೇ ಹೋಗಬಹುದು.
**ಮಿಸೆಸ್ ವೇನ್**: ನಾವು ಒಂಬತ್ತೂವರೆ ಆಗೋವರೆಗೆ ಕಾಯೋದು ಒಳ್ಳೇದಲ್ವಾ? ಎಷ್ಟಕ್ಕೂ ಟೆಲಿಗ್ರಾಂಗಳಿಂದಾಗಿ ತಾನೆ ನಾವು ಇಲ್ಲಿಗೆ ಬಂದಿರೋದು?
**ಎಲ್ಸೀ** [ಚಡಪಡಿಸುತ್ತಾ] ; ಇಲ್ಲ, ಇಲ್ಲಿ ಇರಾಕಾಗಲ್ಲ. ನಡೀರಿ, ಹೋಗೋಣ!
**ವಿಯರ್**: ಆಯ್ತು! ಹೋಗ್ಲೇಬೇಕಲ್ಲವಾ? ಹೋಗೋಣ. [ತನ್ನ ಡ್ರಿಂಕ್ಸ್ ಮುಗಿಸುತ್ತಾ] ಇದ್ಯಾರದು-ಈ ಡ್ರಿಂಕ್ಸ್? [ಟ್ರೇನಲ್ಲಿರುವ ಗ್ಲಾಸನ್ನು ತೋರಿಸಿ]
**ಸ್ಟ್ಯಾಂಡಿಷ್**: ನನ್ನದಲ್ಲ.
**ಮೆರಿಡ್ಯೂ** [ಬೆಂಕಿಗೂಡಿನ ಷೆಲ್ಫನ್ನು ತೋರಿಸುತ್ತಾ]; ನನ್ನ ಗ್ಲಾಸು ಅಲ್ಲಿದೆ ನೋಡಿ.
**ಮಿಸೆಸ್ ವೇನ್**: ಯಾರೊ ಒಬ್ಬರು ತಮ್ಮ ಗ್ಲಾಸು ಮುಟ್ಟಿಲ್ಲ. [ಕನ್ನಡಿಯತ್ತ ನಡೆಯುತ್ತಾಳೆ.]
**ವಿಯರ್**: ನಿಜಾನಾ?
**ಮಿಸೆಸ್ ವೇನ್**: ಅದು ವಿಸ್ಕಿ ಅಲ್ಲ. [ಹ್ಯಾಟನ್ನು ಸರಿಮಾಡಿಕೊಳ್ಳುತ್ತಾ]
**ವಿಯರ್** [ಗ್ಲಾಸನ್ನು ಮೂಸಿ ನೋಡಿ]; ಆ್ಯಬ್‌ಸಿನ್ತ್.
**ಮೆರಿಡ್ಯೂ** [ಸ್ವಲ್ಪ ಹೊತ್ತಿನ ಬಳಿಕ]; ಅದನ್ನ ಯಾರು ಆರ್ಡರ್ ಕೊಟ್ಟಿದ್ದು? [ಸ್ಟ್ಯಾಂಡಿಷ್‌ಗೆ] ನೀವಾ?
[ಸ್ಟ್ಯಾಂಡಿಷ್ ತಲೆ ಅಲ್ಲಾಡಿಸುತ್ತಾನೆ]
**ಎಲ್ಸೀ ವಿಯರ್**: ಇನ್ನ ನಾನು ಇದನ್ನ ಸಹಿಸ್ಕೊಳ್ಳಾಕಾಗಲ್ಲ .

**ಸ್ಟ್ಯಾಂಡಿಷ್:** ಇದನ್ನ ಯಾರಾದ್ರೂ ತರ್ಸಿದರಾ–ತಮಾಷೆಗೆ ಅಂತ?ನಿಮ್ಮ ದಮ್ಮಯ್ಯ!–

**ಮೆರಿಡ್ಯೂ:** ಈಗ ಇದನ್ನ ಕಾಕತಾಳೀಯ ಅಂತ ಯಾರು ಅನ್ತಾರೆ? ಇದೀಗ ಮೂರು ವರ್ಷದ ಹಿಂದಿನ ಕಾಲ್ನಿ ಲಾಡ್ಜ್ ಅಲ್ಲವಾ? ನಾವು ಐದು ಜನ. ಅಲ್ಲಿದ್ದ ಹಾಗೇ. ಮತ್ತು–

**ಮಿಸೆಸ್ ವೇನ್:** ನಾವು ಸ್ವಲ್ಪ ಸುಧಾರಿಸ್ಕೋಬೇಕಲ್ಲವಾ?

**ಸ್ಟ್ಯಾಂಡಿಷ್:** ಇದು ನಿಜವಾಗ್ಲೂ ಹುಚ್ಚು.

**ಎಲ್ಸೀ ವಿಯರ್:** ಇಲ್ಲ. ಇಲ್ಲ,! ಇದು ಬೇರೆ ಏನೋ ಇದೆ. [ಚಿತ್ತೋದ್ರೇಕದಿಂದ] ಯಾರಿಗೋ ಗೊತ್ತಿದೆ–ನಮ್ಮಲ್ಲಿ ಯಾರೋ ಒಬ್ಬರು ಕೊಲೆಗಾರರಿದ್ದಾರೆ!

**ವಿಯರ್** [ಅವಳೆಡೆ ನಡೆದು]; ಸುಮ್ನಿರು, ಮರಿ. ಹುಚ್ಚು ಹುಚ್ಚಾಗಿ ಆಡಬೇಡ!

**ಮೆರಿಡ್ಯೂ:** ಅಮ್ಮಾ, ದಯವಿಟ್ಟು ಹಾಗೆಲ್ಲ ಮಾತಾಡಬೇಡಿ.

**ಎಲ್ಸೀ:** ನಿಮಗೆಲ್ಲರಿಗೂ ಗೊತ್ತಿದೆ! ನಾನು ನಿಮ್ಮ ಮುಖದಲ್ಲೇ ಅದನ್ನ ಕಾಣಬಹುದು.

**ಸ್ಟ್ಯಾಂಡಿಷ್:** ಇದು ಇಪ್ಪತ್ತನೇ ಶತಮಾನವಾ? ನಾವು ಸ್ವಲ್ಪ ಸರಿಯಾಗಿ ಯೋಚನೆ ಮಾಡೋಣ.

**ಮಿಸೆಸ್ ವೇನ್:** ಹೌದು, ನೀವು ಹೇಳಿದ್ದು ಸರಿ, ಇಂಥ ಮಾತಿನಿಂದ ನಮಗೇನೂ ಪ್ರಯೋಜನವಿಲ್ಲ. ನಾನಂತೂ ಹೊರಟೆ. ಹಿಮ ಇರ್ಲಿ, ಬಿಡ್ಲಿ.

**ಮೆರಿಡ್ಯೂ:** ಒಂದು ನಿಮಿಷ ಇರಿ! [ಹೊರಟು ನಿಂತವರು ಅವನ ಕಡೆ ನೋಡುತ್ತಾರೆ] ಆಸ್ಟ್ರೇಲಿಯಾದಲ್ಲಿದ್ದ ಫಾಸ್ಟರ್‌ನ ಸ್ನೇಹಿತನ ಬಗ್ಗೆ ಯಾರೋ ಮಾತಾಡ್ತಾ ಇದ್ರಲ್ಲ, ಯಾರಿಗಾದ್ರೂ ಅವನ ಹೆಸರು ನೆನಪಿದೆಯಾ?

**ವಿಯರ್:** ಇಲ್ಲ

**ಸ್ಟ್ಯಾಂಡಿಷ್:** ಅದೀಗ ಮುಖ್ಯಾನಾ? ಬಿಡಿ ಅದನ್ನ. ಮತ್ತೆ ನಡೀರಿ, ಹೋಗೋಣ!

**ವಿಯರ್:** ಬಾ, ಎಲ್ಸೀ [ವಿಯರ್ ದಂಪತಿಗಳು ಬಾಗಿಲ ಬಳಿ ನಡೆದಿದ್ದಾರೆ.]

**ಮೆರಿಡ್ಯೂ:** (ನಿಧಾನವಾಗಿ) ಅವನ ಹೆಸರು ಲಾರ್ನರ್. (ಎಲ್ಲರೂ ಅಚ್ಚರಿಯಿಂದ ಅಚಲವಾಗಿ ನಿಂತುಬಿಡುತ್ತಾರೆ.)

**ಮಿಸೆಸ್ ವೇನ್:** (ತಗ್ಗಿದ ದನಿಯಲ್ಲಿ) ಲಾರ್ನರ್!

**ಮೆರಿಡ್ಯೂ:** ಈ ಟೆಲಿಗ್ರಾಂಗಳು–ಫಾಸ್ಟರ್‌ನ ಸ್ನೇಹಿತ, ಜೀವಂತ ಅಥವಾ ಮೃತ, ನಮ್ಮನ್ನ ಈ ಜಾಗಕ್ಕೆ ಕರೆದಿದ್ದಾನೆ.

**ವಿಯರ್:** ಈಗ ಟೈಮೆಷ್ಟು ?

**ಸ್ಟ್ಯಾಂಡಿಷ್:** ಒಂಬತ್ತೂವರೇ ಆಯ್ತಾಗಲೇ. ಒಟ್ಟಿನಲ್ಲಿ ಇವನು ಸರಿಯಾದ ಸಮಯಕ್ಕೆ ಬರಲಿಲ್ಲ.

**ಮೆರಿಡ್ಯೂ** [ಬಾಗಿಲಕಡೆ ಅವಸರವಾಗಿ ನಡೆದು]; ಸರಿ ಹಾಗಾದರೆ, ನಾವೀಗ ಹೊರಡೋಣ.

**ಎಲ್ಸೀ ವಿಯರ್** [ಇದ್ದಕ್ಕಿದ್ದಹಾಗೆ ]; ಇರಿ! ಯಾರೋ ಬಂದರು. [ಎಲ್ಲರೂ ಆಲಿಸುತ್ತಾರೆ. ಹೊರಬಾಗಿಲನ್ನು ಯಾರೋ ದೃಢವಾಗಿ ತಟ್ಟುತ್ತಿರುವ ಶಬ್ದ ಕೇಳಿಸುತ್ತದೆ.]
**ಮಿಸೆಸ್ ವೇನ್** [ಒಂದೆರಡು ಕ್ಷಣಗಳ ನಂತರ]; ಹೌದು. ನಾವ್ಯಾರಾದರೂ ಬಾಗಿಲು ತೆರೀಬೇಕಲ್ಲವಾ?
**ವಿಯರ್** [ಹಿಂಜರಿಯುತ್ತಾ]; ಆಯ್ತು. ತೆಗಿಯೋಣ.
**ಎಲ್ಸೀ ವಿಯರ್:** ಗಿಲ್ಬರ್ಟ್!
[ವಿಯರ್ ಬಾಗಿಲು ತೆಗೆಯುತ್ತಾನೆ. ಹೊಸ್ತಿಲಮೇಲೆ ಒಬ್ಬ ಪೊಲೀಸ್ ಇನ್ಸ್‌ಪೆಕ್ಟರ್ ನಿಂತಿದ್ದಾನೆ.]
**ಇನ್ಸ್‌ಪೆಕ್ಟರ್:** ನಮಸ್ಕಾರ. [ಅವನು ಒಳ ಬಂದು ಸುತ್ತಲೂ ನೋಡುತ್ತಾನೆ.]
**ಮಿಸೆಸ್ ವೇನ್:** ಯಾರು ನೀವು?
**ಇನ್ಸ್‌ಪೆಕ್ಟರ್:** ಇನ್ಸ್‌ಪೆಕ್ಟರ್ ಜೇಯರ್ಸ್, ಈ ಡಿವಿಜನ್‌ನಲ್ಲಿರೋನು. ನಾನು ಈ ಮಾರ್ಗವಾಗಿ ಮೊಬೈಲ್ ವ್ಯಾನ್ ತಗೊಂಡು ಬರ್‍ತಾ ಇದ್ದೆ. ಇಲ್ಲಿ ಲೈಟು ಕಾಣಿಸ್ತು. ಏನು ನಡೀತಾ ಇದೆ ಇಲ್ಲಿ? [ಈಗ ಎಲ್ಲರಲ್ಲೂ ಸ್ವಲ್ಪ ನೆಮ್ಮದಿಯ ಲಕ್ಷಣ.]
**ಸ್ಟ್ಯಾಂಡಿಷ್:** ಹಾಗಂದ್ರೆ ?
**ವಿಯರ್:** ನೀವು ನೋಡಿದ್ದು ನನ್ನ ಕಾರಿನ ಲೈಟು ಅನ್ನೋದಾದ್ರೆ –
**ಇನ್ಸ್‌ಪೆಕ್ಟರ್** [ನೀರಸವಾಗಿ]; ಹೊರಗಡೆ ಕಾರುಗಳೇನೋ ಬೇಕಾದಷ್ಟಿವೆ. ಆದರೆ ನೀವೆಲ್ಲ ಈ ಹೋಟೆಲಲ್ಲಿ ಯಾಕೆ ಇದೀರ ಅನ್ನಲಿಕ್ಕೆ ಸಮಜಾಯಿಷಿ ಕೊಡ್ತೀರಾ?
**ಮಿಸೆಸ್ ವೇನ್:** ಏನು ಹಾಗೆ ಕೇಳ್ತೀರ? ಒಂದು ಹೋಟ್ಲಿಗೆ ಬರೋದು ಅಪರಾಧಾನಾ?
**ಇನ್ಸ್‌ಪೆಕ್ಟರ್:** ಈ ಹೋಟ್ಲಿಗೆ ಬರೋದು, ಹೌದು. ಯಾಕಂದ್ರೆ ಈ ಹೋಟ್ಲು ಮಾರಾಟಕ್ಕಿದೆ. ಇದನ್ನ ಮುಚ್ಚಿ ಈಗ ಮೂರುವಾರ ಆಯ್ತು. ಹಾಗಿರುವಾಗ ಇಲ್ಲಿ ಲೈಟ್ ಉರೀತಾ ಇವೆ. ಇದು ಅತಿಕ್ರಮಣ ಅಲ್ಲದೆ ಇನ್ನೇನು?
**ವಿಯರ್:** ಏನು ಅಸಂಬದ್ಧ ಅಂತೀನಿ! ಇಲ್ಲಿ ನಾವು ಅತಿಕ್ರಮಣ ನಡೆಸಿದ್ದೇವೆ ಅನ್ನೋದಾದ್ರೆ, ಇಲ್ಲಿರೋ ಹೋಟೆಲ್ ಯಜಮಾನಾನೂ ಅಷ್ಟೆ.
**ಇನ್ಸ್ ಪೆಕ್ಟರ್:** ಯಾವ ಯಜಮಾನ?
**ಮೆರಿಡ್ಯೂ:** ಅಲ್ಲ, ಈ ಡ್ರಿಂಕ್ಸನ್ನ ನಾವೇ ಇಲ್ಲಿ ಸಪ್ಲೈ ಮಾಡ್ಕೊಂಡು ಕುಡೀತಾ ಕೂತಿದೀವಿ ಅಂತ ತಿಳಕೊಂಡಿದೀರಾ?
**ಇನ್ಸ್‌ಪೆಕ್ಟರ್** [ಆಕಡೆ ಹೋಗಿ ಟೇಬಲನ್ನು ಗಮನಿಸುತ್ತಾ]; ಹೂಂ. ಇಲ್ನೋಡಿ. ಇಲ್ಲಿ ಯಾವ ಹೋಟೆಲ್ ಮಾಲಿಕನೂ ಇಲ್ಲ. ಅವನು ಇಲ್ಲಿಂದ ಹೋಗಿ ಈಗ ಮೂರುವಾರ ಆಯ್ತು, ಅವತ್ತಿನಿಂದ ಈ ಹೋಟ್ಲು ಖಾಲಿ ಇದೆ.
**ಮಿಸೆಸ್ ವೇನ್** [ಕೆರಳಿ]; ನೀವು ಬೇಕಾದ್ರೆ ನಮ್ಮನ್ನ ಸುಳ್ಳರು ಅನ್ನಿ, ಆದ್ರೆ–
**ಮೆರಿಡ್ಯೂ:** ಅವನು ಆ ಬಾಗಿಲಿನಿಂದ ಬಂದು ಹೋಗಿ ಈಗ ಒಂದು ಹತ್ತು ನಿಮಿಷಾನೂ ಆಗಿಲ್ಲ.

**ಇನ್ಸ್‌ಪೆಕ್ಟರ್** [ಸುತ್ತಲೂ ನೋಡಿ]; ಆ ಬಾಗಿಲಾ? ಸಾರ್, ನೀವು ಹೋಗಿ ನೋಡ್ಕೊಂಡು ಬನ್ನಿ, ಅವನು ಅಲ್ಲಿದಾನಾ ಅಂತ.

[ಮೆರಿಡ್ಯೂ ಬಾಗಿಲತ್ತ ನಡೆದು ಅದನ್ನು ತೆರೆಯುತ್ತಾನೆ.]

**ಇನ್ಸ್‌ಪೆಕ್ಟರ್:** ಏನು?

**ಮೆರಿಡ್ಯೂ** [ಆಶ್ಚರ್ಯಚಕಿತನಾಗಿ ಮೆಲ್ಲಗೆ ಹಿಂತಿರುಗಿ ಬಂದು ] ಅಲ್ಲಿಂದ ಬಲ್ಲಿಕ್ಕೆ ಹೋಗಲಿಕ್ಕೆ ಯಾವ ಮಾರ್ಗಾನೂ ಇಲ್ಲ. ಅದು ಒಂದು ಬೀರು ಅಷ್ಟೆ.

**ವಿಯರ್** [ಭಯದಿಂದ]; ಅಯ್ಯೋ ದೇವರೆ! ಇದೇನು ಗತಿ ಆಯ್ತು ನಮ್ಮದು!

**ಎಲ್ಸೀ ವಿಯರ್:** ಅದು ಲಾರ್ನರೇ-ಖಂಡಿತ! ಸಾವು ಅವನಿಗೆ ಯಾವ ಅಡೆತಡೇನೂ ಆಗಿಲ್ಲ.

**ಇನ್ಸ್‌ಪೆಕ್ಟರ್:** ನೀವು ನನ್ನ ಜೊತೆ ಸ್ಟೇಷನ್‌ಗೆ ಬರಲಿಕ್ಕೆ ತಯಾರಿದ್ದರೆ ನಾವು ಇದರ ತನಿಖೆ ನಡೆಸೋಣ.

[ಇನ್ಸ್‌ಪೆಕ್ಟರನು ಒಂದು ರೀತಿಯ ಆಲಸ್ಯದಿಂದ ಟೇಬಲ್ಲಿನ ಮೇಲಿರುವ ಡ್ರಿಂಕ್ಸನ್ನು ಪರೀಕ್ಷಿಸುತ್ತಾ, ಅದನ್ನು ಮೂಸಿ ನೋಡಿ, ಗ್ಲಾಸನ್ನು ತುಟಿಯ ತನಕ ತರುತ್ತಾನೆ.]

**ಮಿಸೆಸ್ ವೇನ್** [ನಿಟ್ಟುಸಿರು ಬಿಟ್ಟು]; ಎಲ್ಲ ತುಂಬ ನಿಗೂಢವಾಗಿದೆ. ಆದರೆ ಇದರಿಂದ ಏನು ಸಿದ್ಧಮಾಡಿ ತೋರಿಸಿದಂತಾಯ್ತು? ಇದೆಲ್ಲ ಯಾವ ಕಾರಣಕ್ಕೋ?

[ತಕ್ಷಣವೇ ಸ್ಟ್ಯಾಂಡಿಷ್‌ನು ಇನ್ಸ್‌ಪೆಕ್ಟರನನ್ನು ಗಮನಿಸುತ್ತಾನೆ, ತಾನು ಏನು ಮಾಡುತ್ತಿದ್ದೇನೆ ಎಂಬುದರ ಅರಿವಿಲ್ಲದಂತೆ ಮುಂದೆ ಓಡಿಹೋಗಿ ಕೈ ಮಾಡಿ ತೋರಿಸುತ್ತಾನೆ]

**ಸ್ಟ್ಯಾಂಡಿಷ್:** ಅದನ್ನು ಕುಡೀಬೇಡಿ ! [ಇನ್ಸ್‌ಪೆಕ್ಟರನು ಹಿಂಜರಿಯುತ್ತಾನೆ] ಅದು ವಿಷ! ಹೌದು, ಫಾಸ್ಟರ್ ಸತ್ತಿದ್ದು ಅದರಿಂದಾನೇ!

[ತಾನು ಬಯಲು ಮಾಡಿದ ಸಂಗತಿಯ ಅರಿವಾದ ಕೂಡಲೇ ಸ್ಟ್ಯಾಂಡಿಷ್ ಗೋಡೆಗೆ ಒರಗುತ್ತಾನೆ. ಅವನ ಮುಖದಲ್ಲಿ ತಪ್ಪಿತಸ್ಥ ಮನೋಭಾವ ಎದ್ದು ಕಾಣುತ್ತದೆ. ಎಲ್ಲರೂ ಅವನನ್ನು ಭೀತಿಯಿಂದ ದಿಟ್ಟಿಸಿ ನೋಡುತ್ತಾರೆ.]

* * *

# ರಬ್ಬರ್ ಮಾಮಾ

**ತಮಿಳು ಮೂಲ : ಚಾರ್ವಾಕನ್** **ಅನು : ಡಾ. ತಮಿಳ್ ಸೆಲ್ವಿ**

ಶಂಕರ್ ಕಣ್ತೆರೆದು ನೋಡಿದ. ಎಂದಿನಂತೆ ಕೊಳೆಯಾದ ಹಳದಿ ಬಣ್ಣದ ಕಿಟಕಿ ಕಾಣಿಸಿತು. ಅವನಿಗೆ ದುಃಖ ಉಕ್ಕಿ ಬಂತು. ಎಷ್ಟು ದಿನಗಳಿಂದ ಕೇವಲ ಈ ಕಿಟಕಿಯೊಂದಿಗೇ ಎಚ್ಚರ. ಅವನ ಪ್ರಪಂಚ ಕೊಂಚಕೊಂಚವೇ ಚಿಕ್ಕದಾಗುತ್ತಾ ಬಂದು ಈಗ ಆರಡಿ–ಮೂರಡಿ ಉದ್ದದ ಮಂಚ, ಮೇಲ್ಛಾವಣಿ, ಎದುರಿನ ಕಿಟಕಿ...... ಇಷ್ಟೇ ಆಗಿ ಹೋಗಿದೆ. ಗಲಾಟೆ, ಜನರು, ನಗು, ಹಸಿವು, ಕಣ್ಣೀರು, ಪ್ರೀತಿ, ಗದ್ದಲ...... ಇತ್ಯಾದಿಗಳಿಂದ ಕಲರವವನ್ನೆಬ್ಬಿಸುತ್ತಿರುವ ಹೊರ ಪ್ರಪಂಚ ಅವನ ಮಟ್ಟಿಗೆ ಕೊಳೆ ತುಂಬಿದ ಕಿಟಕಿಯ ಚೌಕಟ್ಟಿನ ಕಂಬಿಯೇಲಿಯಷ್ಟೇ ಆಗಿ ಬಿಟ್ಟಿದೆ. ಅವನನ್ನು ಕೊಂಚವೂ ಲಕ್ಷಿಸದೆ. ಈಗ ಅವನ ಪಾಲಿಗಿರುವುದು ಕಿಟಕಿಯ ಮೂಲಕ ಕಾಣಿಸುವ ನೀಲಿ ಆಕಾಶ, ಕೆಲವೊಮ್ಮೆ ಒಯ್ಯಾರವಾಗಿ ತೇಲಿ ಸಾಗುವ ಬಿಳಿಯ ಮೋಡಗಳು ಅಷ್ಟೇ. ಈ ಹಾಳು ಕಿಟಕಿಯ ಮೇಲೆ ಒಂದು ಕಾಗೆ, ಗುಬ್ಬಿ, ಅಳಿಲು ಕೂಡ ಬಂದು ಕೂರುವುದಿಲ್ಲ ಎಂದು ಅವನಿಗೆ ದುಃಖವಾಯಿತು. ಆಯಾಸದಿಂದ ಕಣ್ಣುಗಳನ್ನು ಮುಚ್ಚಿಕೊಂಡ. ಮುಚ್ಚಿದ ಮೇಲೂ ಕಣ್ಣೊಳಗೆ ಕಾಣಿಸುತ್ತಿದ್ದ ಕಿಟಕಿಯ ಬಿಂಬವನ್ನೇ ನೋಡುತ್ತಿದ್ದ, ಅದು ಮಾಯವಾಗುವವರೆಗೆ. ಕೆಲವು ಕ್ಷಣಗಳವರೆಗೆ ಕೆಂಪಗೆ, ನಂತರ ಹಸಿರಾಗಿ, ಆಮೇಲೆ ತಿಳಿನೀಲಿಯಾಗಿ ಮತ್ತೆ ಏನೂ ಇಲ್ಲವಾಗುವವರೆಗೆ. 'ಇದೇ ನಾನು ನೋಡುವ ಕಡೆಯ ದೃಶ್ಯವಾಗಿರಬಹುದು' ಎನಿಸಿತು. ಮುಚ್ಚಿದ ಕಣ್ಣುಗಳೊಳಗೆ ಕತ್ತಲ ನಡುವೆ ತಿಳಿನೀಲಿ ಪಟ್ಟೆಗಳು. ನನ್ನ ಬದುಕಿನಲ್ಲಿ ನಾನು ಕಂಡು, ಕೇಳಿ, ಅನುಭವಿಸಿದ ಲಕ್ಷಗಟ್ಟಲೇ ಅನುಭವಗಳ ಸಾರ. ಉಸಿರು ಬಿಟ್ಟಾಗ ನಾಸಿಕ ದ್ವಾರಗಳು ಸುಟ್ಟವು. ಕಣ್ಣುಗಳೂ ಸುಟ್ಟವು. 'ಇಂದಿಗೆ ನನ್ನ ಆಯುಷ್ಯ ಮುಗಿಯಿತು' ಎಂದು ಗೊಣಗಿಕೊಂಡ. ತನ್ನ ಗೊಣಗುವಿಕೆ ತನ್ನ ಕಿವಿಗೇ ಕೇಳಿಸಿದಾಗ ಬೆದರಿದ. ತುಂಬ ಪ್ರಯಾಸದಿಂದ ಕಣ್ಣು ತೆರೆದ. 'ಇನ್ನು ಮೇಲೆ ಕಣ್ಣು ಮುಚ್ಚಿದರೆ ಅಷ್ಟೇ! ಮತ್ತೆ ಕಣ್ತೆರೆಯಲು ಸಾಧ್ಯವೇ ಇಲ್ಲ' ಎಂದು ಅವನಿಗೆ ಭಯವಾಯಿತು. ಇನ್ನು ಕೆಲವು ಗಂಟೆಗಳೊಳಗೆ ನಾನು ಸತ್ತು ಹೋಗುತ್ತೇನೆ ಎಂದು ಗೊತ್ತಾಗಿ ಹೋಯಿತು. ಈ ವಿಷಯ ಅವನಿಗೆ ಗೊತ್ತಾಗಿ ಸ್ವಲ್ಪ ದಿನಗಳಾಗಿದ್ದರೂ ಆ ಗಡುವು ಇಂದಿಗೆ ಮುಗಿಯಲಿದೆ ಎಂದು ತಿಳಿದಾಗ ಅವನಲ್ಲಿ ಅಪರಿಮಿತ ಭಯ ಮೂಡಿತು.

ಆರಂಭದಲ್ಲಿ, 'ಏನೋ ಮೈ ಚೆನ್ನಾಗಿಲ್ಲ. ನಾಲ್ಕು ದಿನ ಔಷಧಿ ತೆಗೆದುಕೊಂಡ್ರೆ ತಾನಾಗಿಯೇ ಸರಿ ಹೋಗುತ್ತದೆ' ಎಂದೇ ಶಂಕರನ್ ಅಂದುಕೊಂಡಿದ್ದ. ಸಾವು ತನ್ನನ್ನು ಸಮೀಪಿಸಬಹುದು ಎಂಬ ಯೋಚನೆ ಕೂಡ ಅವನ ಬಳಿ ಸುಳಿದಿರಲಿಲ್ಲ. ನಾಲ್ಕು ದಿನ ಅಂದುಕೊಂಡದ್ದು, ಬರಬರುತ್ತಾ ವಾರಗಟ್ಟಲೆ, ತಿಂಗಳುಗಟ್ಟಲೆ ಅವನನ್ನು ಹೊರಪ್ರಪಂಚದಿಂದ ಬೇರ್ಪಡಿಸಿ, ಕ್ರಮೇಣ ಒಂಟಿಯಾಗಿಸಿ, ಕಡೆಗೆ ಹಾಸಿಗೆಗೆ ತಳ್ಳಿದಾಗಲೇ ಅವನು ಮೊಟ್ಟಮೊದಲ ಬಾರಿಗೆ ಸಾವಿನ ಬಗ್ಗೆ ಯೋಚಿಸಿದ್ದು. ಅವನ ಕಾಯಿಲೆಯಂತೆಯೇ ಆ ಯೋಚನೆಯೂ ಅವನಿಗೆ ತಿಳಿಯದಂತೆಯೇ ಅವನೊಳಗೆ ಹುಟ್ಟಿ, ನಿಧಾನವಾಗಿ ಬೆಳೆದು, ದಿಢೀರನೆ ಒಂದು ದಿನ ವಿಶ್ವರೂಪ ತೋರಿ ಅವನನ್ನು ಆಕ್ರಮಿಸಿಕೊಂಡು ಬಿಟ್ಟಿತು. ಆರಂಭದಲ್ಲಿ ತಾನು ಸತ್ತುಹೋಗುತ್ತೇನೆ ಎಂಬ ಯೋಚನೆ ತನ್ನೊಳಗೆ ಮೂಡಿದಾಗಲೂ ಅವನಿಗೆ ಅಂತಹ ಹೆದರಿಕೆಯೇನಿರಲಿಲ್ಲ. ಒಮ್ಮೊಮ್ಮೆ ಆ ಸಂಭವವನ್ನು ಸ್ವಲ್ಪ ಸ್ವಲ್ಪವೇ ಸವಿದು, ಮೆಲುಕು ಹಾಕಿ, ಜೀರ್ಣಿಸಿಕೊಳ್ಳುವಾಗ ಕೂಡಾ ಅದು ಅವನಿಗೆ ಸ್ವಾರಸ್ಯಕರವಾಗಿಯೇ ತೋರುತ್ತಿತ್ತು. ಅಲ್ಲದೆ, ಪ್ರತಿಯೊಬ್ಬರೂ ಒಂದಲ್ಲಾ ಒಂದು ದಿನ ಸಾಯುತ್ತಾರೆ. ಅದೇ ತಾನೆ ನನಗೂ ಆಗುವುದು ಎಂದೆನಿಸುತ್ತಿತ್ತೇ ವಿನಾ ಭಯವೇನೂ ಆಗಲಿಲ್ಲ. 'ತಾನು ಸತ್ತು ಹೋಗುತ್ತೇನೆ' ಎಂಬ ಭಯದಿಂದ ಸಹಜವಾಗಿ ಕೆಲವೊಮ್ಮೆ ಹೆದರಿದರೂ ಅವನು ಅದು ನಿಜವೆಂದು ನಂಬಲೇ ಇಲ್ಲ. ಈ ಕಾಯಿಲೆ, ಅದರ ನೋವು, ಆಯಾಸ, ಮರಣ ಭಯ, ಹಾಸಿಗೆಯಲ್ಲೇ ಮಲಗಿ ಮಲಗಿ, ಹೊರಳಿ ಹೊರಳಿ...... ಕೊಳೆಯೂ- ಬಿಸಿಯೂ ಅಂಟಿಕೊಂಡು ಮುದುರಿ ಬಿದ್ದಿರುವ ಹಾಸಿಗೆ, ಕಹಿಗುಳಿಗೆಗಳು, ನಿದ್ರೆ ಮಾತ್ರೆಗಳು ಎಲ್ಲವೂ ಒಂದು ದುಃಸ್ವಪ್ನವೆಂಬಂತೆ ಒಂದು ದಿನ ದಿಢೀರನೆ ಮಾಯವಾಗಬಹುದು ಎಂದೇ ಅವನ ಅಂತರಾತ್ಮ ಹೇಳುತ್ತಿತ್ತು. ಒಂದು ದಿನ, ಇನ್ನೂ ಸರಿಯಾಗಿ ಹೇಳಬೇಕೆಂದರೆ ಒಂದು ರಾತ್ರಿ ಅವನ ನಂಬಿಕೆಗಳೆಲ್ಲವೂ ಮರಳಿನ ಮನೆಯಂತೆ ಕುಸಿದು ಬಿದ್ದು ಹೆಜ್ಜೆ ಗುರುತೂ ಇಲ್ಲದಂತೆ ಅವು ಮಾಯವಾಗಿ ಹೋದಾಗಲೇ ನಿಜವಾದ ಮರಣ ಅವನನ್ನು ಹಿಡಿದುಕೊಂಡದ್ದು.

ಆ ರಾತ್ರಿ ಮೂತ್ರ ವಿಸರ್ಜಿಸುವುದಕ್ಕಾಗಿ ಹಾಸಿಗೆಯಿಂದ ಏಳಲು ಪ್ರಯತ್ನಿಸಿದ. ಮನಸ್ಸು ಕೆಲಸ ಮಾಡಿತೇ ವಿನಾ ಶರೀರ ಸಹಕರಿಸಲಿಲ್ಲ. ಬಲಗೈಯನ್ನು ಊರಿ ಏಳಲು ನೋಡಿದ. ಕೈಯಲ್ಲಿ ಬಲವೇ ಇಲ್ಲ. ಅವನು ಹೀಗೆ ಕೈಗೂ ಕಾಲಿಗೂ ಅಪ್ಪಣೆ ನೀಡುತ್ತಿರುವಾಗಲೇ ಹಾಸಿಗೆಯಲ್ಲಿ ತೇವ ಹರಡಿಕೊಂಡಿತು.... ಕಾಲು, ತೊಡೆ, ಪೃಷ್ಠ... ಎಲ್ಲವೂ ನೆನೆದು..... ಎಲ್ಲರೂ ದೇಹ ಪೂರ್ತಿ ಬೆವರುತ್ತಿರುವಾಗ..... ಆಗಲೇ, 'ಇನ್ನು ಮೇಲೆ ನಾನು ಹಾಸಿಗೆ ಬಿಟ್ಟು ಏಳಲಾರೆ. ನನ್ನ ಕಾಲ ಮುಗಿದು ಹೋಯಿತು' ಎನ್ನುವ ಭಾವ ಅವನಲ್ಲಿ ಆಳವಾಗಿ ಬೇರೂರಿದ್ದು. ಮೊಟ್ಟ ಮೊದಲ ಬಾರಿಗೆ ಅವನ ಮುಖ ನೆನೆದು ಹೋಯಿತು.

ಶಂಕರ ಆರೋಗ್ಯ ಸರಿಯಿಲ್ಲದೆ ಮಲಗಿದ ಹೊಸದರಲ್ಲಿ ಅವನ ಸ್ನೇಹಿತರು, ಆಫೀಸಿನ ಸಹೋದ್ಯೋಗಿಗಳು..... ಎಲ್ಲರೂ ಒಬ್ಬೊಬ್ಬರಾಗಿಯೋ ಅಥವಾ ಸಣ್ಣ

ಸಣ್ಣ ಗುಂಪುಗಳಾಗಿಯೋ ಆಗಾಗ ಬಂದು ಕುಶಲ ವಿಚಾರಿಸುತ್ತಿದ್ದರು. ಬಿ.ಎ. ಮುಗಿದ ಮೇಲೂ ಮೂರು-ನಾಲ್ಕು ವರ್ಷ ಕೆಲಸ ಸಿಗದೆ ಅಲೆದಾಡಿ, ಕಡೆಗೆ ಕೆಲಸ ಸಿಕ್ಕು ಒಂದೂವರೆ ವರ್ಷ ಆಗಿದೆ ಅಷ್ಟೇ! ಅಷ್ಟರೊಳಗೇ ಅವನಿಗೆ ಎಷ್ಟು ಜನ ಆತ್ಮೀಯ ಸ್ನೇಹಿತರು! ಕಾಯಿಲೆಯಿಂದ ಮಲಗಿದ ಹೊಸದರಲ್ಲಿ ಅವನನ್ನು ನೋಡಲು ಬರುತ್ತಿದ್ದ ನಟರಾಜ, ಮೋಸೆಸ್, ಶಂಕರನಾರಾಯಣ..... ಎಲ್ಲರೂ ಎಷ್ಟು ಸಲ 'ಶಂಕರಾ..... ನೀನಿಲ್ಲದೆ ಇತ್ತೀಚೆಗೆ ಇಸ್ಪೀಟ್ ಆಟ ಕಳೆ ಕಟ್ಟುವುದೇ ಇಲ್ಲ' ಎಂದು ಅವನಿಲ್ಲದ ಕೊರತೆಯನ್ನು ತೋಡಿಕೊಳ್ಳುತ್ತಿದ್ದರು. ಆಗೆಲ್ಲ ಶಂಕರನಿಗೆ ಹೆಮ್ಮೆಯೆನಿಸುತ್ತಿತ್ತು. ಒಮ್ಮೆ, ಅವನ ಜೊತೆ ಕೆಲಸ ಮಾಡುವ ಮೂರು ಜನ ಲೇಡಿ ಟೈಪಿಸ್ಟ್‌ಗಳೂ ಬಂದಿದ್ದರು. ಮಿಸೆಸ್. ಪೆರೇರಾ, ಮಿಸ್.ಪದ್ಮಿನಿ, ಮಿಸ್.ಜಾನಕಿ. ಇಷ್ಟಕ್ಕೂ ಮಿಸ್.ಜಾನಕಿ ಆಫೀಸಿಗೆ ಸೇರಿ ಮೂರು ತಿಂಗಳಿಗಿಂತ ಹೆಚ್ಚಾಗಿರಲಾರದು. ಮಿಸೆಸ್.ಪೆರೇರಾ ಉಳಿದವರಿಗಿಂತ ಹೆಚ್ಚು ಮಾತನಾಡುತ್ತಿದ್ದಳು. ಅವಳು ಯಾವಾಗಲೂ ಹಾಗೇ. ಮದುವೆಯಾದವಳು ಎನ್ನುವುದರಿಂದಲೋ ಏನೋ ಅವಳು ಉಳಿದ ಹೆಂಗಸರಿಗಿಂತ ಸ್ವಲ್ಪ ಹೆಚ್ಚು ಸ್ವಾತಂತ್ರ್ಯದಿಂದಲೇ ಗಂಡಸರೊಂದಿಗೆ ಮಾತನಾಡುತ್ತಿದ್ದಳು. ಅಲ್ಲದೆ, ಆಫೀಸಿನಲ್ಲಿ ಅವಳ ಪಕ್ಕದ ಮೇಜಿನಲ್ಲೇ ಶಂಕರ ಕುಳಿತುಕೊಳ್ಳುತ್ತಿದ್ದುದು. 'ಏನು ಹೀಗೆ ಇರೆಸ್ಪಾನ್ಸಿಬಿಲಿಟಿಯಾಗಿ ಮಲಗ್ಬಿಟ್ರಿ..... ಮಿಸ್ಟರ್ ಶಂಕರ್, ನನ್ನ ಮೇಲೇನಾದ್ರೂ ನಿಮಗೆ ಕೋಪಾನಾ? ಈಗ ನೋಡಿ, ಎಲ್ಲ ಫೈಲ್‌ಗಳೂ ನನ್ನ ಟೇಬಲ್ ಮೇಲೆ ರಾಶಿ ಬಿದ್ದಿವೆ. ನೀವಿರುವಾಗ ಪ್ರತಿದಿನ ಒಂದೋ ಎರಡೋ ಫೈಲ್‌ಗಳನ್ನು ಮಾತ್ರ ನನ್ನ ಟೇಬಲ್‌ಗೆ ಕಳಿಸ್ತಿದ್ರಿ. ಆ ಹಳೇ ಹೆಗ್ಗಣ ಆರೋಗ್ಯ ಸ್ವಾಮಿ ಇದ್ದಾನಲ್ಲ, ಅವನನ್ನು ಈಗ ನಿಮ್ಮ ಟೇಬಲ್ಲಿಗೆ ಹಾಕಿದ್ದಾರೆ. ಬರೋ ಫೈಲ್‌ಗಳನ್ನೆಲ್ಲ ಅವರು ನನ್ನ ಟೇಬಲ್‌ಗೇ ತಳ್ತಾರೆ. ನೀವು ಬೇಗ ಗುಣವಾಗಿ ಬಂದ್ಬಿಡಿ ಶಂಕರ್, ನನಗಾಗಿಯಾದ್ರೂ.....' ಎಂದು ತಮಾಷೆಯಾಗಿ ಹೇಳಿ ಅವಳು ಹುಬ್ಬು ಕುಣಿಸಿದಳು. ಮಿಸ್. ಪದ್ಮಿನಿಯೂ, ಮಿಸ್. ಜಾನಕಿಯೂ ಘೊಳ್ ಎಂದು ನಕ್ಕು, 'ಹೌದ್ಹೌದು, ಬೇಗ ಬಂದ್ಬಿಡಿ' ಎಂದು ದನಿಗೂಡಿಸಿದಾಗ ಅವನಿಗೆ ಎಷ್ಟು ಸಂತೋಷವಾಗಿತ್ತು! ಈಗ?

ಈ ಘಟನೆಯೆಲ್ಲ ಯಾವಾಗ ನಡೆದದ್ದು? ನಿಜವಾಗಿ ನಡೆಯಿತಾ? ಈ ಜನ್ಮದಲ್ಲೇನಾ? ಈ ಯುಗದಲ್ಲಾ? ಇದೇ ವರ್ಷದಲ್ಲಾ....? ದುಃಖದಿಂದ ಅವನ ಗಂಟಲು ಕಟ್ಟಿತು.

ಶಂಕರನಿಗೆ ಅಂಟಿರುವ ವ್ಯಾಧಿ ಬೇಗ ಗುಣವಾಗುವಂಥದಲ್ಲ. ಅವನ ಜೀವಕ್ಕೇ ಅಪಾಯ ತರಬಹುದು ಎಂದು ತಿಳಿದ ನಂತರ ಅವನನ್ನು ನೋಡಲು ಬರುವವರ ಸಂಖ್ಯೆ ಕಡಿಮೆಯಾಗುತ್ತಾ ಹೋಯಿತು. ಒಂದು ವೇಳೆ ಯಾರಾದರೂ ಬಂದರೂ ಅವನಲ್ಲಿ ಆವೇಶವೂ, ಕೋಪವೂ, ಹೊಟ್ಟೆಕಿಚ್ಚೂ ಮೂಡುತ್ತಿತ್ತೇ ಹೊರತು ಅವನಿಗೆ ಸಂತೋಷವೇನೂ ಆಗುತ್ತಿರಲಿಲ್ಲ. ಒಂದು ದಿನ ನಟರಾಜ ಬಂದಿದ್ದ. 'ಹೇಗಪ್ಪಾ ಇದೀಯಾ? ಡಾಕ್ಟರ್ ಏನು ಹೇಳಿದರು?' ಎಂಬುದಕ್ಕಿಂತ ಹೆಚ್ಚಾಗಿ

ಶಂಕರನೊಡನೆ ಮಾತನಾಡಲು ಅವನಲ್ಲಿ ಮಾತುಗಳೇ ಇರಲಿಲ್ಲ. ಮೊದಲೆಲ್ಲ ಬಂದರೆ ಆಫೀಸಿನಲ್ಲಿ ನಡೆಯುವ ಎಲ್ಲ ಸಂಗತಿಗಳನ್ನೂ ಅವುಗಳಿಗೆ ರೆಕ್ಕೆ–ಪುಕ್ಕ ಅಂಟಿಸಿ ಕತೆ–ಕತೆಯಾಗಿ ಹೇಳುತ್ತಿದ್ದ. ಈಗ ಶಂಕರ ಆಫೀಸ್ ಬಿಟ್ಟೇ ಎಷ್ಟೋ ಯುಗಗಳಾಗಿ ಹೋಗಿವೆ. ಆಫೀಸಿನಲ್ಲಿ ಈಗಿರುವವರಲ್ಲಿ ಅರ್ಧ ಜನರ ಹೆಸರೂ ಕೂಡ ಅವನಿಗೆ ಗೊತ್ತಿಲ್ಲ. ಅದೆಲ್ಲ ಹೇಳಿದ್ರೆ ಶಂಕರನಿಗೆ ಏನು ತಿಳಿಯುತ್ತೆ? ಆದ್ರೂ ಪಾಪ, ಹಾಸಿಗೆ ಹಿಡಿದು ಬಿಟ್ಟಿದ್ದಾನೆ. ಸ್ವಲ್ಪ ಉಲ್ಲಾಸಗೊಳಿಸೋಣ ಎಂದು ಆರಂಭಿಸಿದ; '..... ಈಗ ಹೊಸದಾಗಿ ಒಬ್ಬ ಹೆಡ್ ಕ್ಲರ್ಕ್ ಬಂದಿದ್ದಾರೆ. ಸ್ವಲ್ಪ ದಿನವಾಯ್ತು...... ಶಂಕರ್‌ರಾವ್ ಅಂತ ಹೆಸ್ರು, ಅವನನ್ನು ನೋಡಿದ ನಾಲ್ಕೆ ದಿನಗಳಲ್ಲೇ ಮಿಸ್.ಜಾನಕಿ..... ನೀನಿದ್ದಾಗ ಅವಳಿದ್ದಳಾ? ಯಾವಾಗ ನೋಡಿದ್ರೂ ಸೆರಗನ್ನು ಎಳೆದು ಹೊದ್ದುಕೊಂಡು, ಸದಾ ನೆಲ ನೋಡ್ತಾ ಇರ್ತಿದ್ದಳಲ್ಲಾ, ಅವಳೇ ಕಣಪ್ಪಾ..... ಅವ್ಳು ಶಂಕರ್‌ರಾವ್‌ನನ್ನು, ಅವರು ಬಂದ ನಾಲ್ಕೇ ದಿನಗಳಲ್ಲಿ ತನ್ನ ಬುಟ್ಟಿಗೆ ಹಾಕ್ಕೊಂಡು ಬಿಟ್ಟಿದ್ದಾಳೆ. ಈಗ ಅವಳ ಸ್ಟೈಲೇನು? ಅವಳೇನು? ನೋಡಿದ್ರೆ ನೀನು ಬೆರಗಾಗಿ ಹೋಗ್ತೀಯಾ! ನೈಲೆಕ್ಸ್ ಸೀರೆ, ಜಾಕೆಟ್ ..... ಅಬ್ಬಬ್ಬಾ.....' ಎಂದು ಹೇಳುತ್ತಿದ್ದವನು ಶಂಕರನ ಮುಖ ನೋಡಿ ನಿಲ್ಲಿಸಿಬಿಟ್ಟ.

'....ಸಾಯ್ತಾ ಇರೋ ಬ್ರಹ್ಮಚಾರಿಯ ಹತ್ತಿರ ಬಂದು ಸೀರೆ, ಜಾಕೆಟ್..... ಅಂತೆಲ್ಲಾ ಹೇಳ್ತಿದೀಯಲ್ಲಾ..... ನಿನ್ನ ಆಫೀಸ್ ವಿಷಯಗಳನ್ನೆಲ್ಲ ನೀನೇ ಇಟ್ಕೋ..... ನೀನು ಆಫೀಸಿಗೆ ಹೋಗ್ತೀಯಾ ಅನ್ನೋದು ನನಗೆ ಗೊತ್ತು' ಎಂದು ಶಂಕರ ಹೇಳುವಾಗ ಅವನ ಮುಖ ಕೆಂಪಾಗಿತ್ತು. ಹಣೆಯ ನರಗಳು ಬಿಗಿದುಕೊಂಡು ಉಬ್ಬಿದವು. ಕಣ್ಣುಗಳಲ್ಲಿ ನೀರು ತುಂಬಿಕೊಂಡು ಅವನು ಹೀಗೆ ಕಿರುಚಿದಾಗ ನಟರಾಜನಿಗೆ, 'ನಾನೇಕೆ ತಾನೇ ಬಂದೆ' ಎನ್ನಿಸಿ ಬಿಟ್ಟಿತು. ನಂತರ ನಟರಾಜ ಎಂದೂ ಬರಲಿಲ್ಲ, ಅದಕ್ಕಾಗಿ ಶಂಕರ ಬೇಸರವೆನಿಸಿಕೊಳ್ಳಲೂ ಇಲ್ಲ. 'ಅವನ ಕೆನ್ನೆಗಳನ್ನು ನೋಡು, ಮಿಠಾಯಿ ಅಂಗಡಿ ಲಾಲಾನ ತರಹ ಥಳಥಳ ಅಂತ ಹೊಳೀತಿದೆ, ಸುಖಜೀವಿ. ಅವನು ಬರದೇ ಇರೋದೇ ಒಳ್ಳೇದು. ಬಂದರೆ ನನ್ನ ಹೊಟ್ಟೆ ಉರಿಸ್ತಾನೆ......' ಎಂದು ಶಂಕರ ತನಗೆ ತಾನೇ ಹೇಳಿ ಸಮಾಧಾನ ಪಟ್ಟುಕೊಂಡ. ಆದರೆ ಅದೇಕೋ, ನಟರಾಜ ಕಡೆಯ ಸಲ ಬಂದಿದ್ದಾಗ ಮುದುರಿ ಬಿಸುಟ ಬಸ್ ಟಿಕೆಟ್ಟನ್ನು ಮಾತ್ರ ತೆಗೆದು ಮಡಿಕೆಗಳನ್ನು ಜಿಚ್ಚಿ ಸಮಗೊಳಿಸಿ ಜೋಪಾನವಾಗಿ ತಲೆದಿಂಬಿನ ಕೆಳಗೆ ಭದ್ರಪಡಿಸಿಕೊಂಡ.

'ಬಸ್ ಟಿಕೆಟ್ ಕೂಡ ನನಗೆ ಎಷ್ಟೊಂದು ಅಪರೂಪದ ವಸ್ತುವಾಗಿ ಹೋಗಿದೆ. ಮತ್ತೆ ನಾನು ಬಸ್ ಹತ್ತುವುದು ಯಾವಾಗಲೋ.....' ಎಂದು ತನ್ನೊಳಗೇ ಗೊಣಗಿಕೊಂಡ. ಈಗ ದಿನಕ್ಕೊಂದು ಸಲವಾದರೂ ಆ ಹಳದಿ ಕಾಗದವನ್ನು ತೆಗೆದು, ತಡವಿ ನೋಡಿ ಎರಡು ನಿಮಿಷಗಳಾದರೂ ಆನಂದ ಪಡುವುದು ಅವನಿಗೆ ಅಭ್ಯಾಸವಾಗಿ ಹೋಗಿದೆ. ಒಬ್ಬರನ್ನೊಬ್ಬರು ತಳ್ಳಿಕೊಂಡು ಬಸ್ ಹತ್ತುವುದು, ಆಫೀಸಿನಲ್ಲಿ ಮಧ್ಯಾಹ್ನದ

ಬಿಡುವಿನಲ್ಲಿ ಎಲೆ-ಅಡಿಕೆ ಜಗಿಯುವುದು, ಬೀದಿಯಲ್ಲಿ ನಡೆದು ಹೋಗುವಾಗ ತನ್ನನ್ನು ದಾಟಿಕೊಂಡು ಮುಂದೆ ಹೋಗುವ ಇಬ್ಬರ ನಡುವಿನ ಸಂಭಾಷಣೆಯ ತುಣುಕುಗಳು ಕಿವಿಗೆ ಬಿಳುವುದು, ಟೀ ಅಂಗಡಿ ನಾಯ್ಕರ್‌ನ ಪೀಚು ಧ್ವನಿ, ಸಮುದ್ರ ತೀರದ ಮರುಳು..... ಯಾವುದು ತಾನೆ ಅವನಿಗೆ ಉಳಿದಿದೆ? ಹೊಸ ಅಂಗಿಯ ಮೇಲೆ ಕಾಗೆ ಪಿಕ್ಕೆ ಹಾಕುವ ಅನುಭವ ಕೂಡ ತನಗಿನ್ನು ಸಿಗಲಾರದು ಎನ್ನಿಸಿದಾಗ ಅವನ ಎದೆ ನೋಯತೊಡಗಿತು. ಒಬ್ಬ ವ್ಯಕ್ತಿಯ ಬದುಕಿನಲ್ಲಿ ಇವೆಲ್ಲಾ ಎಷ್ಟು ಸಾಮಾನ್ಯವಾದ ಸಂಗತಿಗಳು. ಇವೂ ಕೂಡಾ ದೊರಕುವುದಿಲ್ಲವೆಂದರೆ..... ಅಂಗಡಿಯವನು ಚಿಲ್ಲರೆಯನ್ನು ವಾಪಸ್ಸು ಕೊಡುವಾಗ ನಾಣ್ಯಗಳು ಝಲ್ಲನೆ ಕೈಗೆ ಬೀಳುವ ಅನುಭವ ಕೂಡ ಈ ಜನ್ಮದಲ್ಲಿ ಮತ್ತೆ ಸಿಗಲಾರದು. ಹಲ್ಲಿಯಂತೆ ಮಂಜಿನ ಹನಿಗಳನ್ನು ನೆಕ್ಕಿ ದಾಹ ತೀರಿಸಿಕೊಳ್ಳುವ ಬದುಕಿದು. ಇದರಲ್ಲಿ ಇಂಥಹ ಸಣ್ಣ ಸಂಗತಿಗಳು ಕೂಡ ಮಹತ್ವದ ಅನುಭವಗಳೆಂದು ಅನ್ನಿಸುವ ಕಾಲ ಬಂದು ಬಿಟ್ಟಿತಲ್ಲಾ ಎನ್ನಿಸುವಾಗ ಅವನಿಗೆ ದುಃಖದೊಂದಿಗೆ ಆಶ್ಚರ್ಯವೂ ಆಯಿತು.

ಆದರೆ ಇಂದು..... ಇಂದೇ ತನ್ನ ಜೀವನದ ಕೊನೆಯ ದಿನ ಎಂಬುದು ಸಿದ್ಧವಾದ ಮೇಲೆ ಅವನು ಸ್ವಲ್ಪ ಮಟ್ಟಿಗೆ ದುಃಖದಿಂದ ಹೊರಬಂದನೆಂದೇ ಹೇಳಬೇಕು. ಇಷ್ಟು ದಿನಗಳ ಹಾಗೆ ಸಣ್ಣ ಪುಟ್ಟ ದುಃಖಗಳೆಲ್ಲಾ ಹಾರಿ ಬಂದು ತನ್ನನ್ನು ಉಸಿರುಗಟ್ಟಿಸಲಾರವೆನ್ನಿಸಿ ಅವನಿಗೆ ನೆಮ್ಮದಿಯೆನಿಸಿತು. ತನ್ನ ದಿನನಿತ್ಯದ ಮನಃಕ್ಲೇಶಗಳು ಮಾಯವಾಗುವುದರೊಂದಿಗೆ, ಕಿಟಕಿಯ ಕೊಳೆ ತುಂಬಿದ ಚೌಕಟ್ಟಿನ ಮೂಲಕ ಕಾಣಿಸುವ-ತನ್ನನ್ನು ಲಕ್ಷ್ಯಕ್ಕೇ ತೆಗೆದುಕೊಳ್ಳದ ಹೊರಪ್ರಪಂಚ, ಕಾಲಿಗೆ ಚುಚ್ಚಿದ ಮುಳ್ಳಿನಂತೆ ನೋವನ್ನು ನೆನಪಿಸುವ ಆಕಾಶದ ಒಂದು ತುಂಡು..... ಇವ್ಯಾವುವೂ ಇನ್ನು ಮೇಲೆ ತನ್ನನ್ನು ಅಣಕಿಸಲಾರವು. ಇನ್ನು ಮುಂದೆ ಹಾಗೆ ಮಾಡುವುದು ಅವುಗಳಿಂದ ಸಾಧ್ಯವೂ ಇಲ್ಲ ಎನ್ನಿಸಿದಾಗ ಅವನಿಗುಂಟಾದ ತೃಪ್ತಿ ಅಷ್ಟಿಷ್ಟಲ್ಲ. ತನ್ನ ಶವದ ಮೆರವಣಿಗೆಯನ್ನೂ, ಅಂತಿಮ ಸಂಸ್ಕಾರವನ್ನೂ ಕಲ್ಪಿಸಿಕೊಳ್ಳುವ ಮಟ್ಟಿಗೆ ಅವನೊಳಗೆ ಧೈರ್ಯ ಮೂಡಿತು ಎಂದೇ ಹೇಳಬೇಕು. ಎಲ್ಲರ ಶವಗಳ ಹಾಗೆ ತನ್ನ ಶವವೂ ಮಲಗಿರುವವರನ್ನು ಅಣಕಿಸುವಂತೆ ಕಣ್ಣುಗಳನ್ನು ಮುಚ್ಚಿಕೊಂಡು, ಸರ್ದಾರ್‌ಜೀಯ ಹಾಗೆ ತಲೆಗೆ ಕಟ್ಟು ಹಾಕಿಕೊಂಡು ಹೋಗುವುದು ದಿಢೀರನೆ ಅವನಿಗೆ ಅದೇಕೋ ಇಷ್ಟವಾಗಲಿಲ್ಲ. ತನ್ನ ಮೇಲೆ ಒಂದು ಬೃಹತ್ ಗಾತ್ರದ ಅಣುಬಾಂಬ್, ಹೈಡ್ರೋಜನ್ ಬಾಂಬ್..... ನಂತಹುದ್ಯಾವುದೋ ಬಿದ್ದು, ತನ್ನ ದೇಹ ಲಕ್ಷ್ಯಗಟ್ಟಲೆ ಕೋಟಿಗಟ್ಟಲೆ ಚೂರುಗಳಾಗಿ ಸಿಡಿದು, ಕಣ್ಣಿಗೂ ಕಾಣಿಸದ ಹಾಗೆ, ಇದ್ದ ಗುರುತೂ ಇಲ್ಲದಂತೆ ಕ್ಷಣಮಾತ್ರದಲ್ಲಿ ಮಾಯವಾಗಿ, ಜಗತ್ತಿನಾದ್ಯಂತ ವ್ಯಾಪಿಸಿಕೊಂಡು ನಾಶವಾಗಿ, ಹಾಳಾಗಿ ಹೋಗಬಾರದೇ ಎನ್ನಿಸಿತು. ಈ ಬಯಕೆ ಅವನೊಳಗೆ ವ್ಯಾಪಿಸಿಕೊಂಡಿತು.

ಕಿಟಕಿಯಿಂದ ಕಾಣಿಸುತ್ತಿದ್ದ ನೀಲಿ ಬಾನಿನಲ್ಲಿ ತೇಲಿ ಬರುತ್ತಿದ್ದ ಚಿಕ್ಕ ಮೋಡವೊಂದು ಅವನ ದೃಷ್ಟಿಗೆ ಬಂದ ಕೂಡಲೇ, ಅಲ್ಲಿಂದ ಸರಿದು ಹೋಗದೆ

ಸ್ಥಿರವಾಗಿ ಅಲ್ಲೇ ನಿಂತುಕೊಂಡಿತು. ಶಂಕರ ಆಶ್ಚರ್ಯದಿಂದ ನೋಡಿದ. ಪ್ರೇಮಶೋಕದಂತೆ ಅದರ ಸುತ್ತಲಿನ ಭಾಗಗಳು ಕ್ರಮೇಣ ಕೊಂಚ ಕೊಂಚವಾಗಿ ಸುತ್ತಲೂ ಇದ್ದ ಗಾಳಿಯೆಂಬ ನೀಲಕಡಲಲ್ಲಿ ಕರಗಲು, ಮೇಘದ ಆಕಾರ ಕುಗ್ಗುತ್ತಾ ಬರುವುದನ್ನು ಅವನು ಅಚ್ಚರಿಯಿಂದ ನೋಡಿದ. 'ಅದೂ ನನ್ನ ಹಾಗೆ ಒಂಟಿ ಜೀವ. ಏನೂ ಉಳಿಯದ ಹಾಗೆ ಕರಗಿ ಹೋಗುತ್ತಿದೆ' ಎನ್ನಿಸಿತು. ಪಶ್ಚಾತ್ತಾಪದಿಂದ ಅದನ್ನು ನೋಡುತ್ತಲೇ ಇದ್ದ. ಗಂಧದ ಬೊಟ್ಟಿನ ಗಾತ್ರಕ್ಕೆ ಕುಗ್ಗಿದ ಆ ಮೇಘದ ಮರಿ ಹಾಗೇ ಇತ್ತು, ಮತ್ತೆ ಕುಗ್ಗದೆ ಒಂಟಿಯಾಗಿ. ಆ ಮುಗಿಲ ಬೊಟ್ಟನ್ನೇ ಅವನು ನೋಡುತ್ತಿರುವಾಗ, ಎಂದೂ ಇಲ್ಲದಂತೆ ಅಪರೂಪವಾಗಿ ಪಕ್ಷಿಗಳ ಒಂದು ಸಣ್ಣ ಗುಂಪು–ಒಂದೊಂದು ಹಕ್ಕಿಯೂ ಒಂದೊಂದು ಸಣ್ಣ ಚುಕ್ಕಿಯ ಗಾತ್ರವಿರಬಹುದು–ಅವನ ದೃಷ್ಟಿಯ ಎಲ್ಲೆಯೊಳಗೆ ಹಾರಿ ಬಂತು. ಬಂದು ಅವನಿಗೆ ಚಿರಪರಿಚಿತವಾಗಿದ್ದ ನೀಲಿ ಚೌಕಟ್ಟಿನ ಬಾನಿನ ನಡುವೆ ಗಂಧದ ಬೊಟ್ಟಿನ ಮೇಘದ ಹಿನ್ನೆಲೆಯಲ್ಲಿ ಅನಾಯಾಸವಾಗಿ, ನಿಶ್ಶಬ್ದವಾಗಿ, ಈಟಿ ಮೊನೆಯಂತಹ ಸಾಲುಗಳು ಕೊಂಚವೂ ಬದಲಾಗದೆ, ಹೊರಳದೆ, ಯುದ್ಧವಿಮಾನಗಳಂತೆ ಯಾವುದೋ ಒಂದು ಗುರಿಯ ಕಡೆಗೆ ಹಾರುತ್ತಾ ಮರೆಯಾದವು.

ಕೆಲವು ಕ್ಷಣಗಳೊಳಗೆ ಕಂಡು ಮರೆಯಾದ ಈ ಅದ್ಭುತವನ್ನು ನೋಡಿ ಅದರಲ್ಲೇ ಮುಳುಗಿ ಆನಂದತುಂದಿಲನಾದ ಶಂಕರ. ಕೊನೆಯ ದಿನವಾದುದರಿಂದ ತನಗಾಗಿ ದೇವರು ಪ್ರತ್ಯೇಕವಾಗಿ ಕಳಿಸಿದ ದೃಶ್ಯ ಇದು ಎನ್ನಿಸಿ ಹರ್ಷಿತನಾದ. 'ನಾನೂ ಇದೇ ರೀತಿ ಯಾವುದೋ ಗುರಿಯಿಟ್ಟುಕೊಂಡು, ಎಲ್ಲಿಗೋ ಹೋಗಲಿದ್ದೇನೆ' ಎನ್ನಿಸಿತು. 'ಆದರೆ ಒಂಟಿಯಾಗಿ.....' ಎಂಬ ಭಾವ ಅದರ ಹಿಂದೆಯೇ ಉದಯಿಸಿತು. ಆ ಹಕ್ಕಿಗಳು ಗುಂಪಾಗಿ, ಖುಷಿಯಾಗಿ ಹೋಗುತ್ತಿವೆ. ನಾನೋ ಒಂಟಿಯಾಗಿ! ಎಲ್ಲಿ ಹೋಗುತ್ತಿದ್ದೇನೆ ಎಂಬುದೂ ತಿಳಿಯದೆ ಹೋಗುತ್ತಿದ್ದೇನೆ ಒಬ್ಬಂಟಿಯಾಗಿ ಎನ್ನಿಸಿದಾಗ ಅವನ ಮನಸ್ಸು ಖೇದಗೊಂಡಿತು.

ನಾವು ಏಕೆ ಬದುಕುತ್ತಿದ್ದೇವೆ? ಈ ಬದುಕು ಮುಗಿದ ನಂತರ ನಮ್ಮ ಮುಂದಿರುವುದೇನು ...ಎಂಬುದರ ಬಗ್ಗೆ ಶಂಕರ ಇದುವರೆಗೆ ಯೋಚಿಸಿದ್ದೇ ಇಲ್ಲ. ತಾನು ಆಸ್ತಿಕನೇ ನಾಸ್ತಿಕನೇ ಎಂಬುದೂ ಅವನಿಗೆ ಗೊತ್ತಿಲ್ಲ. ಈ ಸಂಗತಿಗಳೆಲ್ಲ ಮಹತ್ವವಾದುವೆಂದೋ, ಅವಶ್ಯಕವಾದುವೆಂದೋ ಎಂದೂ ಅವನಿಗನ್ನಿಸಿದ್ದೇ ಇಲ್ಲ . ಈಗ, ತನ್ನ ಮರಣದಲ್ಲಿ ಒಂದು ಹೊಸ ಶಬ್ದವನ್ನು ತಾನು ಆರಂಭಿಸಲಿದ್ದೇನೆ ಎಂಬ ಭಾವ ಅವನಲ್ಲಿ ಮೂಡಿತು. ಈ 'ಹೊಸ ಜೀವನ'ವನ್ನು ಒಂಟಿಯಾಗಿ, ಯಾರ ಸಹಕಾರವೂ ಇಲ್ಲದೆ ನಟ್ಟಡವಿಯಲ್ಲಿ, ನಡು ರಾತ್ರಿಯಲ್ಲಿ ಕುರುಡ ನಡೆಯತೊಡಗಿದಂತೆ ಆರಂಭಿಸಲಿರುವುದನ್ನು ಯೋಚಿಸಿ, ಭಯದಿಂದ ಮನದೊಳಗೇ ನಡುಗಿದ. ಯಾರಾದರೂ ಅಥವಾ ಒಂದು ಸಣ್ಣ ಗುಬ್ಬಿ ಮರಿಯಾದರೂ ತನಗೆ ಜೊತೆಯಾಗಿ, ಸಹ ಪ್ರಯಾಣಿಕನಂತೆ ಬರಬಾರದೇ ಎಂದು ಹಂಬಲಿಸಿದ. 'ಇನ್ನು ಕೆಲವೇ ಗಂಟೆಗಳೊಳಗೆ ನಾನು ಆರಂಭಿಸಲಿರುವ ಈ ಭಯಂಕರವಾದ ಪ್ರಯಾಣದಲ್ಲಿ

ನನಗೆ ಜೊತೆಯಾಗಿ ಯಾರು ಬರುತ್ತಾರೆ? ಈ ರೂಮಿನೊಳಗೆ ಒಂದು ಜಿರಲೆ ಕೂಡ ಬರುವುದಿಲ್ಲ. 'ಓ ದೇವರೆ. ಯಾರನ್ನಾದ್ರೂ, ಯಾವುದನ್ನಾದ್ರೂ ನನ್ನ ಜೊತೆ ಕಳಿಸಲಾರೆಯಾ?' ಎಂದು ತುಟಿಗಳನ್ನು ಕದಲಿಸದೆ, ಕಣ್ಣಿನಲ್ಲಿ ನೀರು ತುಂಬಿಕೊಂಡು ಪ್ರಾರ್ಥಿಸಿದ.

ಆಗಲೇ ಆ ಮಗು ಆ ಕೋಣೆಯೊಳಗೆ ನುಗ್ಗಿದ್ದು. ಚಿತ್ತಲೆಯಾಗಿ, ಆಗ ತಾನೇ ಅರಳಿದ ಹೂವಿನ ಹಾಗೆ.

ಗುಂಗುರುಗುಂಗುರಾಗಿ, ಒತ್ತಾಗಿ, ಕೆನ್ನೆಯವರೆಗೆ ಇಳಿಬಿದ್ದಿದ್ದ ಕೂದಲು ಹಣೆಯ ಮೇಲಿಂದ ಇಣುಕಿ ನೋಡುತ್ತಾ, ಒಂದನ್ನೊಂದು ಸ್ಪರ್ಶಿಸುತ್ತಾ ಆಡಿಕೊಳ್ಳುತ್ತಿದ್ದವು. ಮೂರು ವರ್ಷಗಳು ಕೂಡ ತುಂಬದ ಆ ಎಳೆಯ ಮುಖದಲ್ಲಿ ಮುಂದೆ ಎಂದೋ ಒಂದು ದಿನ ಸುಕ್ಕು ಸುಕ್ಕಾಗಿ, ಸವೆದು ಬೂದಿಯಾಗಲಿರುವ ಮನುಷ್ಯ ಮುಖವಲ್ಲಿ ಇಷ್ಟೊಂದು ಕಾಂತಿಯೇ? ಎಂದು ಅವನು ಆಶ್ಚರ್ಯಗೊಂಡ. ಅವನ ಕೆಳಹೊಟ್ಟೆಯಿಂದ ಬಿಸಿಗಾಳಿ ಭಗ್ಗನೆ ಮೇಲೆದ್ದು ಅವನನ್ನು ಸುಟ್ಟಿತು. ಉಸಿರು ಕಟ್ಟಿಕೊಂಡಿತು. ಆಗ ತಾನೇ ಚಿತ್ರಿಸಿದ, ಇನ್ನೂ ಬಣ್ಣ ಕೂಡ ಒಣಗದ, ಸೂರ್ಯ ಕಿರಣಗಳನ್ನು ಪ್ರತಿಫಲಿಸುತ್ತಿರುವ ಚಿತ್ರದಂತಿರುವ ಆ ಮಗು ತನ್ನ ಕಪ್ಪು ಕಣ್ಣುಗಳನ್ನು ಅಗಲಿಸಿ ಎರಡು ಕಡೆಯೂ ನೋಡುತ್ತಾ, ಹೆದರುತ್ತಲೇ ಒಳಗೆ ಹೆಜ್ಜೆಯಿಟ್ಟಿತು. ಗುಂಡಗೆ ಹೊಳೆಯುತ್ತಿದ್ದ ಅದರ ಕೆನ್ನೆಗಳನ್ನೂ, ಕೈಗಳನ್ನೂ, ಮುಂದೆ ತೂಗುತ್ತಿದ್ದ ಹೊಟ್ಟೆಯನ್ನೂ, ತೊಡೆಗಳನ್ನೂ, ಬೆಳ್ಳಿವಿಗ್ರಹದಂತೆ ಹೊಳೆಯುತ್ತಿದ್ದ ಸ್ತ್ರೀರೂಪವನ್ನೂ ನೋಡಿ ಅವನ ಕಣ್ಣುಗಳು ಉಕ್ಕಿ, ಮನಸ್ಸನ್ನು ಸುಟ್ಟು ಕರಕಾಗಿಸಿದವು. ಜೀವವೋ ಮಂಜಿನ ಬೆಟ್ಟದಲ್ಲಿ ಹೂತು ಹಾಕಿದಂತೆ ಜುಂ ಎಂದು ನಡುಗಿ ಹೋಯಿತು!

ಗಂಡಾಗಿ ಹುಟ್ಟಿ ಬದುಕಿದ ಈ ಅರೆ ಬದುಕಿನಲ್ಲಿ ಮರೆಯಲಾರದ ಅನುಭವಗಳಲ್ಲಿ ಒಂದೂವರೆ ವರ್ಷ ಇತರರನ್ನು ಅವಲಂಬಿಸದೆ, ಸ್ವಂತ ಸಂಪಾದನೆಯಲ್ಲಿ ಬದುಕಿದೆನೆಂಬ ಒಂದು ಅನುಭವದ ಹೊರತು ಇನ್ನೊಂದನ್ನೂ ಅನುಭವಿಸದೆಯೇ ಜೀವನವನ್ನು ಮುಗಿಸಲಿದ್ದೇನೆ ಎಂದು ಮನಸ್ಸಿನೊಳಗೇ ಕೊರಗಿದ. 'ಕೆಲಸ ಸಿಕ್ಕಿದ ಮೇಲೆ ಎರಡು-ಮೂರು ವರ್ಷಗಳವರೆಗೆ ಮದುವೆ, ಮನೆ ಹುಡುಕುವ ತಾಪತ್ರಯ ಯಾವುದೂ ಬೇಡ. ಸ್ವಲ್ಪ ಹಣ ಸೇರಿಸಿಟ್ಟುಕೊಂಡು ನಂತರ ಒಬ್ಬ ಒಳ್ಳೆಯ ಸುಂದರವಾದ, ಬುದ್ಧಿವಂತ ಹುಡುಗಿಯನ್ನು ನೋಡಿ ಮದುವೆಯಾಗೋಣ. ಆಮೇಲೆ ಇನ್ನೂ ಎರಡು ಮೂರು ವರ್ಷ ಮಕ್ಕಳು-ಮರಿ, ಹಾಲಿನ ಪೌಡರ್‌ನ ಹುಡುಕಾಟ ...ಇತ್ಯಾದಿ ಯಾವ ಸಮಸ್ಯೆಯೂ ಇಲ್ಲದೆ ಮಧುಚಂದ್ರದಂತಹ ಸವಿಯಾದ ಬದುಕನ್ನು ಸಾಗಿಸೋಣ. ಅಂತಹ ವಯಸ್ಸೇನೂ ಆಗಿ ಹೋಗಿಲ್ಲವಲ್ಲ ಎಂಬ ಏನೇನೋ ಯೋಚನೆಗಳಿಂದ ನನ್ನನ್ನು ನಾನೇ ನಿಯಂತ್ರಿಸಿಕೊಂಡಿದ್ದೆನಲ್ಲ. ಎಷ್ಟೊಂದು ಮೂರ್ಖತನದ ಕೆಲಸವಾಗಿ ಹೋಯಿತು-' ಎಂದು ತನ್ನನ್ನು ತಾನೇ ಹಳಿದುಕೊಂಡ. ಆಸೆ ಮೂಡಿದಾಗ ಐದೋ-

ಹತ್ತೋ–ಇನ್ನೂ ಹೆಚ್ಚೆಂದರೆ ಐವತ್ತೋ ನೂರೋ ಕೊಟ್ಟು, ಕೆಟ್ಟವಳಾಗಿದ್ದರೂ ಪರವಾಗಿಲ್ಲ ಎಂದುಕೊಂಡು ಆಸೆಗಾಗಿ, ಬದುಕು ಪೂರ್ಣಗೊಳ್ಳುವುದಕ್ಕಾಗಿ ಸ್ತ್ರೀ ಸ್ಪರ್ಷಕ್ಕಾಗಿ ತುಟಿಯೊಂದಿಗೆ ತುಟಿ, ಹೊಟ್ಟೆಯೊಂದಿಗೆ ಹೊಟ್ಟೆ, ಶರೀರದೊಂದಿಗೆ ಶರೀರ ಬೆರೆತು ಒಂದರೊಳಗೊಂದು ಸೇರಿ, ಆ ಸೇರುವಿಕೆಯಲ್ಲಿ 'ಜೀವ' ಸೃಷ್ಟಿಯಾಗುವ ಆಶ್ಚರ್ಯಕರವಾದ ಮಾಯೆಯನ್ನು ಸಮೀಪಿಸಿ, ಕಾಲು ಅಥವಾ ಅರೆಕಾಲು ಕ್ಷಣ ಆ ಅಂತರಂಗದ ಸಣ್ಣ ಕಣವೊಂದನ್ನು ಪ್ರತ್ಯಕ್ಷವಾಗಿ ಕಾಣಲು ಸಿಗುವ ಅನುಭವಕ್ಕಾಗಿ ಬದುಕದೆ ಹೋದೆನಲ್ಲಾ ಎಂದು ಅವನ ಮನ ಪರಿತಪಿಸಿತು. ಅದರ ಜೊತೆಗೇ ಈಗ ಜೊತೆಯಲ್ಲಿ ಯಾರೂ ಇಲ್ಲದ ಒಂದು ಒಂಟಿಯಾದ ಹೊಸ ಪ್ರಯಾಣ , ಕತ್ತಲಯಾತ್ರೆಯನ್ನು ಬೇರೆ ಆರಂಭಿಸುತ್ತಿದ್ದೇನೆ. ಚಂದ್ರನ ಪ್ರತಿರೂಪದಂತಿರುವ ಈ ಮಗುವಾದರೋ ಏಕಾಂತವನ್ನು ಒದ್ದು ಬಂದು ಜನಸಂದಣಿಯ ನಡುವೆ ನಡೆಯಲು ಅಭ್ಯಾಸ ಮಾಡುತ್ತಿದೆ. ನಾನಾದರೋ ಜನಸಂದಣಿಯಿಂದ ಸೀಳಿಕೊಂಡು ಒಂಟಿಯಾಗಿ ಹೋಗುತ್ತಿದ್ದೇನೆ ಎಂಬ ಹಳೆಯ ಭಯ ಹೊಸ ರೂಪದಲ್ಲಿ ಎದ್ದು ಬಂದು ಅವನನ್ನು ಹೆದರಿಸಿತು. ಭಯ ಅವನಕಣ್ಣುಗಳಿಂದ ಕರಗಿ ಹರಿಯಿತು. 'ಯಾಕೆ ಅಳ್ತಿದೀಯಾ, ಹಸಿವಾಗುತ್ತಾ? ಭಯಾನಾ?'.

ಮಗು ತನ್ನ ಕಣ್ಣುಗಳನ್ನು ಅಗಲಿಸಿ ಅವನನ್ನು ನೋಡಿ, ಆಶ್ಚರ್ಯದಿಂದಲೂ ಕರುಣೆಯಿಂದಲೂ ಪ್ರಶ್ನಿಸಿತು. ಆದರೆ ಅವನ ಉತ್ತರಕ್ಕಾಗಿ ಕಾಯದೆ, 'ತಗೋ, ಈ ಚಾಕ್‌ಲೇಟ್ ತಿನ್ನು...' ಎಂದು ತನ್ನ ಪುಟ್ಟ ಕೈಯನ್ನು ಮುಂದೆ ಚಾಚಿ, ಮುಚ್ಚಿದ ಕೈಯನ್ನು ತೆರೆದು ಅವನ ಕಡೆ ನೀಡಿತು. ಮಗುವಿನ ಎಂಜಲು ಹಾಗೂ ಅಂಗೈ ಬೆವರಿನೊಂದಿಗೆ ಕರಗಿ ಮಗುವಿನೊಂದಿಗೇ ಐಕ್ಯವಾಗುತ್ತಿದ್ದ ಆ ಚಾಕ್‌ಲೇಟ್‌ನ ಪರಿಮಳ ಅವನ ಕೊನೆಯ ಉಸಿರಿಗೆ ಚೈತನ್ಯ ತುಂಬಿತು . ಶ್ರಮದಿಂದ ತಲೆಯೆತ್ತಿ ಮಗುವನ್ನು ನೋಡಿದ.

ಮಗು ಸುತ್ತ ಮುತ್ತ ನೋಡಿತು. ಇದಕ್ಕೆ ಮುನ್ನ ಆ ಮಗು ಈ ಕೊಣೆಯೊಳಗೆ ಬಂದದ್ದೇ ಇಲ್ಲ. ಆ ಮಗುವನ್ನು ನೋಡಿದ ನೆನಪು ಶಂಕರನಿಗೂ ಇಲ್ಲ. ಮಂಚ, ಚಾಪೆ, ಪಕ್ಕದಲ್ಲೇ ಒಂದು ಮೂರು ಕಾಲಿನ ಕುರ್ಚಿ, ಅದರ ಮೇಲಿದ್ದ ಬಾಟಲಿ, ಬಣ್ಣದ ಮಿಠಾಯಿಗಳ ಹಾಗೆ ಆ ಬಾಟಲಿಯೊಳಗಿನ ಮಾತ್ರೆಗಳು... ಎಲ್ಲರೂ ಎದ್ದು ಎಷ್ಟೋ ಹೊತ್ತಾದ ಮೇಲೂ, ಇನ್ನೂ ಮಲಗಿಯೇ ಇರುವ ಒಬ್ಬ ದೊಡ್ಡ ಮನುಷ್ಯ, ಅವನು ತನ್ನನ್ನು ಗದರಿಸಿ ಓಡಿಸದೆ ಕಣ್ಣೀರು ಸುರಿಸುತ್ತಾ ಅಳುತ್ತಿರುವುದು ... ಎಲ್ಲವೂ ಆ ಮಗುವಿಗೆ ಹೊಸದೆನಿಸುತ್ತಿತ್ತು. ಇಷ್ಟೊಂದು ಮಿಠಾಯಿಗಳಿದ್ದರೂ ಈ ದೊಡ್ಡ ಮನುಷ್ಯ ಏಕೆ ಅಳುತ್ತಿದ್ದಾನೆಂದು ಅದಕ್ಕೆ ಆಶ್ಚರ್ಯ.

'ಅಯ್ಯೋ? ಪಾಪ ! ಚಾಕ್‌ಲೇಟ್ ಬೇಕೋ, ಏನೋ?' ಎಂದು ಅನ್ನಿಸಿ, ಮತ್ತೆ ಅವನನ್ನು ನೋಡಿ ಕರುಣೆಯಿಂದ, 'ಚಾಕ್‌ಲೇಟ್ ತಗೋ, ನನಗೆ ಅಪ್ಪಾ ತುಂಬಾ ತಂದ್ಕೊಡ್ತಾರೆ' ಎಂದು ಹೇಳಿತು. 'ನಿನ್ನ ಹೆಸರೇನು ಮಗು?' ಕೇಳಿದ

ಶಂಕರ 'ನನ್ನ ಹೆಸರು ದೀಪಾ! ಆದರೆ ಅಪ್ಪಾ ಪೀಪಾ ಎಂದೇ ಕರೆಯೋದು. ನನ್ನ ಹೊಟ್ಟೆ ಪೀಪಾಯಿಯಂತೆ ದೊಡ್ಡದಾಗಿದೆಯಂತೆ. ಅದಕ್ಕೇ' ಎಂದು ಹೇಳಿ, ಹೇಳಿದ್ದನ್ನು ವಿವರಿಸುವಂತೆ ತನ್ನ ಹೊಟ್ಟೆಯನ್ನು ತಡವಿ ತೋರಿಸಿತು. ನಂತರ, 'ನಿನ್ನ ಹೆಸರೇನು?' ಎಂದು ಶಂಕರನನ್ನು ಪ್ರಶ್ನಿಸಿತು. 'ಶಂಕರ...' ಎಂದ ಅವನು.

'ಹಾಗಂದ್ರೇನು?' ಎಂದು ಮತ್ತೆ ಕೇಳಿತು. ಈ ನಿಮಿಷದವರೆಗೆ ತನ್ನ ಹೆಸರಿನ ಅರ್ಥವೇನೆಂದು ಅವನು ಯೋಚಿಸಿದ್ದೇ ಇಲ್ಲ. ಆ ಮಗುವಿಗೆ ಏನು ಉತ್ತರ ಹೇಳುವುದೆಂದು ತೋಚದೆ ಕಣ್ಣು ಕಣ್ಣು ಬಿಟ್ಟ. ಹೇಗೋ ತನ್ನನ್ನು ಸಮಾಧಾನ ಪಡಿಸಿಕೊಂಡು ಬೇಗನೆ ಯೋಚಿಸಲು ತೊಡಗಿದ.

'ಹಾಗಂದ್ರೆ.... ನಾಶಮಾಡುವವನು ಎಂದು ಅರ್ಥ' ಎಂದು ಉತ್ತರಿಸಿದ, 'ಶಂಕರ' ಎಂದರೆ 'ನಾಶಪಡಿಸುವುದು' ಎಂಬರ್ಥವಿರುವುದರಿಂದ. ಮಗು ಕಿಲಕಿಲನೆ ನಕ್ಕಿತು. ಒಂದು ಕ್ಷಣ , ಕೆನ್ನೆಯ ಮೇಲೆ ಕೈಯಿಟ್ಟುಕೊಂಡು ಯೋಚಿಸಿ 'ರಬ್ಬರ್ ಥರಾನಾ....?' ಎಂದು ಕೇಳಿ, ರಬ್ಬರ್ ಅಳಿಸುವ ಹಾಗೆ ಕೈಗಳನ್ನು ಆಡಿಸಿ ತೋರಿಸಿತು. 'ಹೌದು ...'ಎಂದು ಶಂಕರ ತಲೆಯಾಡಿಸಿದ.

'ಅಯ್ಯೋ. ಹಾಗಾದ್ರೆ ನಾನು ನಿನ್ನ "ರಬ್ಬರ್ ಮಾಮಾಂತ" ಕರೀತೀನಿ' ಎಂದು ಹೇಳಿ, ಕೈಲಿದ್ದ ಚಾಕ್‌ಲೇಟ್‌ನ್ನು ಮತ್ತೆ ಅವನತ್ತ ಚಾಚಿ, 'ತಗೋ' ಎಂದಿತು. ಆ ಕಟ್ಟಡದಲ್ಲಿ ವಾಸಿಸುತ್ತಿದ್ದ ಹಲವು ಕುಟುಂಬಗಳಲ್ಲಿ ಯಾವುದೋ ಒಂದು ಕುಟುಂಬದವರ ಮಗುವಾಗಿರಬೇಕು ಈ ದೀಪಾ ಎಂದು ಮನಸ್ಸಿನಲ್ಲೇ ಅಂದುಕೊಂಡ ಶಂಕರ. ದೊಡ್ಡವರ ದೃಷ್ಟಿಯಿಂದ ಈ ಮಗು ಹೇಗೋ ತಪ್ಪಿಸಿಕೊಂಡು ಬೇರೆಯಾಗಿ ಬಂದು ಬಿಟ್ಟಿರಬೇಕು ಎಂದು ಅವನಿಗನ್ನಿಸಿತು. 'ನೀನು ಒಬ್ಬಳೇ ಬಂದಿದೀಯಲ್ಲಾ, ನಿನಗೆ ಭಯವಾಗೋಲ್ವಾ...' ಎಂದ. 'ನನಗೇನೂ ಭಯ ಇಲ್ಲ. ನಿನಗೆ ಭಯವಾಗುತ್ತಾ? ಅದಕ್ಕೇ ಅಳ್ತಿದೀಯಾ. ನಾನು ನಿನ್ನ ಜೊತೆಗಿರ್ತೀನಿ. ಅಳಬೇಡ' ಎಂದು ಮಗು ತನ್ನ ಹಿರಿತನವನ್ನು ತೋರಿಸಿತು.

ಅವನ ಜೊತೆ ಮಾತನಾಡುತ್ತಾ, ಅದರ ಕಣ್ಣುಗಳು ಅವನನ್ನೂ, ಅವನ ಹಾಸಿಗೆಯನ್ನೂ, ಅದರ ಪಕ್ಕದಲ್ಲಿದ್ದ ಮೂರು ಕಾಲಿನ ಕುರ್ಚಿಯನ್ನೂ, ಅದರ ಮೇಲಿದ್ದ ಬಾಟಲಿಯನ್ನೂ ...ನೋಡಿದವು .

'ಹೌದು, ದೀಪಾ. ನನಗೆ ಭಯವಾಗ್ತಿತ್ತು. ನಾನು ಒಬ್ನೇ ಎಲ್ಲಿಗೋ ಹೋಗ್ಬೇಕಾಗಿದೆ. ನೀನು ನನ್ನ ಜೊತೆಯಲ್ಲಿದ್ದರೆ ನನಗೆ ಭಯವಾಗೋಲ್ಲ, ಬರ್ತೀಯಾ?' ಎಂದು ಕೇಳಿದ ಶಂಕರ. ಅದರ ಮುಖದರ್ಶನದಿಂದ, ಅದು ತನ್ನೊಂದಿಗೆ ಸಹಜವಾಗಿ ಸಮ ಧೋರಣೆಯಲ್ಲಿ ಮಾತನಾಡಿದ ಸಂತೋಷದಿಂದ ತಾನೇನು ಮಾತನಾಡುತ್ತಿದ್ದೇನೆ, ಅದು ಆ ಮಗುವಿಗೆ ಅರ್ಥವಾಗಬಹುದೇ ಎಂದೆಲ್ಲಾ ಅವನು ಯೋಚಿಸಲೇ ಇಲ್ಲ. ಮನಸ್ಸಿನಲ್ಲಿದ್ದುದು ಬಾಯಿಂದ ಹೊರ ಬಂತು. ತನಗನ್ನಿಸಿದ್ದನ್ನು ಹಾಗೆಯೇ ಕೇಳಿ ಬಿಟ್ಟ.

'ಓ, ಬರ್ತೀನಿ. ನಾನು ಬಂದ್ರೆ ಏನ್ ಕೊಡ್ತೀಯಾ?' ಎಂದು ತಲೆಯನ್ನು ಒಂದು ಬದಿಗೆ ಬಾಗಿಸಿಕೊಂಡು ಕೇಳಿದಳು ದೀಪಾ, ವ್ಯಾಪಾರವ ಮಾಡುವಳಂತೆ. ತನ್ನ ಕೈಯಲ್ಲಿದ್ದ ಚಾಕ್‌ಲೇಟ್‌ನ್ನು ಮತ್ತೊಮ್ಮೆ ನಾಲಿಗೆಯಿಂದ ನೆಕ್ಕುತ್ತಾ 'ನನ್ನ ಹತ್ರ ಏನಿದೆ? ಏನೂ ಇಲ್ವಲ್ಲಾ ...'ಎಂದು ತುಟಿ ಮುಂದು ಮಾಡಿದ ಶಂಕರ. ಈ ಮಗು ತುಂಬ ಕಿಲಾಡಿಯಾಗಿರುವಂತಿದೆಯಲ್ಲಾ, ಇದರ ಅಪ್ಪ ಒಬ್ಬ ಮಾರ್ವಾಡಿಯಾಗಿರಬೇಕು ಎಂದೆನ್ನಿಸಿ, ಒಂದು ಕಡೆ ನಗುವೂ, ತನ್ನ ಬದುಕೇ ಇಡಿಯಾಗಿ ತನ್ನ ಮುಂದಿದ್ದರೂ, ಸಾಯುತ್ತಾ ಬಿದ್ದಿರುವ ನನ್ನ ಬಳಿ 'ಏನಿದೆ?' ಎಂದು ವ್ಯಾಪಾರ ಮಾಡುತ್ತಿದ್ದಾಳಲ್ಲಾ ಈ ಹುಡುಗಿ ಎಂದು ಮತ್ತೊಂದೆಡೆ ಕೋಪವೂ ಇನ್ನೊಂದೆಡೆ, ನಾನು ಇನ್ನು ಕೆಲವು ಗಂಟೆಗಳೊಳಗೆ ಇದ್ದ ಗುರುತೂ ಇಲ್ಲದಂತೆ ನಾಶವಾಗಲಿದ್ದೇನೆ. ಆದರೆ ನನ್ನ ಮನಸ್ಸೂ ಮೆದುಳೂ ಎಷ್ಟೊಂದು ಚುರುಕಾಗಿ ಕೆಲಸ ಮಾಡುತ್ತಿದೆಯಲ್ಲಾ' ಎಂಬ ಆಶ್ಚರ್ಯವೂ ಅವನನ್ನು ಆಕ್ರಮಿಸಿಕೊಂಡವು. ಈ ಯೋಚನೆಗಳಿಂದ ಬಿಡಿಸಿಕೊಂಡು ಅವನು ವಾಸ್ತವಪ್ರಪಂಚಕ್ಕೆ ಬಂದು ನೋಡುತ್ತಾನೆ. ಪಕ್ಕದಲ್ಲಿ ದೀಪಾ ಇಲ್ಲ! ಅವನ ಎದೆ ಧಿಡುಕಿಟ್ಟು ಹೋಯಿತು.

ಅವಳಂತೆಯೇ ಬೆತ್ತಲೆಯಾಗಿದ್ದ ಆ ಕೋಣೆಯಲ್ಲಿ, ಅವಳು ಕೈಗಳನ್ನು ಹಿಂದೆ ಕಟ್ಟಿಕೊಂಡು, ಸುತ್ತಾಡುತ್ತಾ ನೋಡುತ್ತಿದ್ದಳು. ನಿಜವಾಗಿಯೂ ಎಲ್ಲವನ್ನೂ ಅವನ ಬಳಿ ಏನೂ ಇಲ್ಲವೇ ಅಥವಾ ಎಲ್ಲಾ ದೊಡ್ಡವರಂತೆಯೇ ಸುಳ್ಳು ಹೇಳಿ ನನ್ನನ್ನು ಮೋಸ ಮಾಡಲು ಈ ರಬ್ಬರ್ ಮಾಮಾ ಕೂಡ ಪ್ರಯತ್ನಿಸುತ್ತಿದ್ದಾರೆಯೇ ಎಂದು ಅವಳು ಸ್ವತ; ತಾನೇ ಎಲ್ಲವನ್ನು ಸುತ್ತಿ ನೋಡುತ್ತಿದ್ದಳು. ಅವನು ಹಸುಮಗುವಿನಂತೆ ಅಳುತ್ತಿರುವುದೂ, ಇತರ ದೊಡ್ಡವರಂತೆ ತನ್ನನ್ನು ಗದರಿಸಿ ಕಳಿಸದೆ, ಬೇಡಿಕೆಯ ಧ್ವನಿಯಲ್ಲಿ ತನ್ನನ್ನೇ ಜೊತೆಗೆ ಬರುವಂತೆ ಕರುಣೆಯಿಂದ ಕರೆಯುತ್ತಿರುವುದೂ ತನ್ನ ಮುಖದ ಎತ್ತರಕ್ಕಿಂತ ಕಡಿಮೆ ಇರುವ ಮಂಚದಲ್ಲಿ ಮಲಗಿ–ದೊಡ್ಡವರಂತೆ ಉದ್ದವಾಗಿದ್ದರೂ– ತನಗಿಂತ ದುರ್ಬಲನಾದವನು ಎಂಬುದನ್ನು ಅವಳಿಗೆ ಅರ್ಥ ಮಾಡಿಸಿತು.

'ಹಾ...ಹಾ.. ನಿಜವಾಗಿಯೂ ನಿನ್ನ ಹತ್ತಿರ ಏನೂ ಇಲ್ವಾ?' ಎಂದು ಕೋಣೆಯ ದಕ್ಷಿಣ ಮೂಲೆಗೆ ಹೋದವಳು, ಅಲ್ಲಿಯೇ ನಿಂತು ತಲೆ ತಿರುಗಿಸಿ ಅವನನ್ನು ಕೇಳಿದಳು. ತಾನು ಮೊಸ ಹೋಗಲಿಲ್ಲ ಎಂಬ ಅವಹೇಳನದ ನಗುವಿನೊಂದಿಗೆ. ಬಿ.ಎ. ಮುಗಿಸಿ, ಕೆಲಸ ಸಂಪಾದಿಸಿಕೊಂಡರೂ, ಅಲ್ಪಾಯುಸ್ಸಿನಲ್ಲಿ ಅತಿಯಾದ ವೇದನೆಯನ್ನನುಭವಿಸಿ ಸಾಯುತ್ತಿರುವ ತನ್ನನ್ನು ಅವಹೇಳನ ಮಾಡಿ ಬದುಕುತ್ತೇನೆಂಬ ಸೊಕ್ಕಿನ ಗರ್ವದಲ್ಲಿ ಹುಟ್ಟಿದ ಅಹಂನಿಂದ ತನ್ನನ್ನು ಉದಾಸೀನ ಮಾಡುತ್ತಿದ್ದಾಳೆ. ಹುಟ್ಟಿ ಮೂರು ಗೇಣುದ್ದ ಕೂಡ ಬೆಳೆಯಲಿಲ್ಲ. ಈ ದರಿದ್ರ ಹುಡುಗಿಯನ್ನು ಇಲ್ಲೇ ತಿಗಣೆಯಂತೆ ಹೊಸಕಿ ಹಾಕಬೇಕು ಎಂಬ ಆಕ್ರೋಶ ಹುಟ್ಟಿತು.

ನಾಳೆ ಇಷ್ಟು ಹೊತ್ತಿಗೆ ಈ ಲೋಕದ ಮಟ್ಟಿಗೆ ನಾನು ಇಲ್ಲ ಎಂದಾಗಿ ಬಿಡುತ್ತದೆ. ಇದ್ದ ಗುರುತೂ ಇಲ್ಲದ ಹಾಗೆ ಅಳಿದು ಹೋಗಲಿದ್ದೇನೆ. ಅದಕ್ಕಾಗಿ ಅಥವಾ ಅವರಿಂದ ಜಗತ್ತಿಗೆ ಏನೂ ಆಗಿ ಹೋಗುವದಿಲ್ಲ. ಅದು ಕೊಂಚವೂ ಚಿಂತಿಸದು. ನನ್ನ ಮಹತ್ತಾದ ನಷ್ಟವನ್ನೂ ಗಮನಿಸದೆಯೇ, ಎಂದಿನಂತೆ ಇರಲಿರುವ ಈ ನಿಷ್ಕರುಣೆಯ ಜಗತ್ತಿಗೆ, ಅದರ ಉದಾಸೀನತೆಯ ಪ್ರತೀಕಾರವೆಂಬಂತೆ ಮಾಡಲಿಕ್ಕಾಗದು, ನನ್ನಿಂದೇನೂ. 'ನಾಳೆಯೊಳಗಾಗಿ ಇದನ್ನು ನಾಶಪಡಿಸಲೋ, ನಾಶಪಡಿಸುತ್ತೇನೆಂದು ಆರ್ಭಟಿಸಲೋ ನನ್ನಿಂದ ಸಾಧ್ಯವಿಲ್ಲ' ಎಂದು ಮನಸ್ಸು ಚಡಪಡಿಸಿತು. ಅದರೊಂದಿಗೇ 'ನನ್ನಿಂದ ಈ ಜಗತ್ತನ್ನು ಅಳಿಸಿ ಹಾಕಲು ಸಾಧ್ಯವಿಲ್ಲದಿದ್ದರೂ– ಇಲ್ಲಿ ನಿಂತು ನನ್ನ ಬಳಿ ಏನೂ ಇಲ್ಲ ಎಂದು ಅವಹೇಳನ ಮಾಡಿ ನಗುತ್ತಿರುವ ಅದರ ಬದುಕಿನ ಪ್ರತಿನಿಧಿಯಾದ ಈ ಚಿಕ್ಕ, ಬೆಳೆಯುವ ಮನುಷ್ಯತ್ವವನ್ನು, ಅದರ ಪ್ರತಿಫಲನವನ್ನು ಅಳಿಸಲು ನನ್ನಿಂದ ಸಾಧ್ಯವಿಲ್ಲವೇನು? ಏಕೆ ಸಾಧ್ಯವಿಲ್ಲ?' ಎಂಬ ಭಾವನೆಗಳು ಅವನ ಮನಸ್ಸಿನೊಳಸಿಡಿದು ಹೊರಬಂದವು.

'ಯಾಕೆ ಹಾಗೆ ಕಣ್ ಕಣ್ ಬಿಡ್ತಿದೀಯಾ ? ಭಯವಾಯ್ತಾ ರಬ್ಬರ್ ಮಾಮಾ? ಅಯ್ಯೋ, ಇಷ್ಟು ದೊಡ್ಡವರಾಗಿದೀರಾ. ಅದ್ರೂ ಹೀಗೆ ಭಯ ಪಡ್ತೀರಲ್ಲಾ...' ಎಂದು ಪರಿಹಾಸ ಮಾಡುತ್ತಾ ಮುಖವನ್ನೂ, ಬಾಯನ್ನೂ ತಿರುಗಿಸಿ ಅಣಕಿಸಿದ ಆ ಮಗು, ತನ್ನ ಸುತ್ತಾಟವನ್ನು ಮುಗಿಸಿ ಮತ್ತೆ ಅವನ ಪಕ್ಕದಲ್ಲಿ ಬಂದು ನಿಂತುಕೊಂಡಿತು. 'ಇಷ್ಟೊಂದು ಮಿಠಾಯಿಗಳನ್ನಿಟ್ಟುಕೊಂಡೂ ಏನೂ ಇಲ್ಲ ಅಂತೀಯಲ್ಲಾ, ನೀನು ಹೇಳ್ತಿರೋದು ಸುಳ್ಳು ತಾನೇ....?'

ಅವನನ್ನು ಹಿಡಿದು ಹಾಕಿ ಅವನು ಹೇಳಿದ ಸುಳ್ಳನ್ನು ಕಂಡು ಹಿಡಿದ ಸಂತೋಷದಲ್ಲಿ ಕೈತಟ್ಟಿ ನಗುತ್ತಾ, ಅವನ ಪಕ್ಕದಲ್ಲಿದ್ದ ಮಾತ್ರೆಗಳ ಬಾಟಲಿಯನ್ನೇ ನೋಡುತ್ತಾ ಕೇಳಿತು.

'ನನಗೆ ಮರ್ತು ಹೋಗಿತ್ತು. ಈ ಎಲ್ಲಾ ಮಿಠಾಯಿಗಳೂ ನಿನಗೇ, ತಗೋ' ಎಂದ ಶಂಕರ. ಈ ಮಾತನ್ನು ಅವನು ಚೆನ್ನಾಗಿ ಯೋಚಿಸಿ, ನಿರ್ಧರಿಸಿ ಆಮೇಲೆ ಹೇಳಿದ್ದೇನೂ ಅಲ್ಲ. ಹೀಗೆ ಹೇಳುತ್ತಿರುವಾಗಲೇ, ಮನಸ್ಸಿನ ಇನ್ನೊಂದು ಮೂಲೆಯಲ್ಲಿ, 'ದಾರಿ ಕಂಡು ಹಿಡಿದು ಬಿಟ್ಟೆ, ಪ್ರತೀಕಾರಕ್ಕೆ ಪ್ರತೀಕಾರವನ್ನು, ದಾರಿಗೆ ದಾರಿಯನ್ನೂ, ಕಂಡು ಹಿಡಿದುಬಿಟ್ಟೆ . ನನ್ನ ಜೊತೆಯಲ್ಲಿ ಸಹಪ್ರಯಾಣಕ್ಕೆ ಒಬ್ಬ ವ್ಯಕ್ತಿ ಬರುವುದಕ್ಕೆ ಬೇಕಾದ ದಾರಿಯನ್ನು ಕಂಡು ಹಿಡಿದು ಬಿಟ್ಟೆ' ಎನ್ನಿಸಿ ಅವನು ಮನಸ್ಸಿನೊಳಗೇ ಗಹಗಹಿಸಿದ.

ತನ್ನ ಮನೋಬಲವನ್ನೆಲ್ಲ ಒಟ್ಟುಗೂಡಿಸಿ ಮೊಳಕೈಯನ್ನೂರಿ , ಹೇಗೋ ಕಷ್ಟಪಟ್ಟು ಅರ್ಧ ಎದ್ದು, ಪಕ್ಕದಲ್ಲಿದ್ದ ಮೂರು ಕಾಲಿನ ಕುರ್ಚಿಯ ಮೇಲಿಂದ ಸುಂದರವಾದ, ಗುಲಾಬಿ ಬಣ್ಣದ ಮಿಠಾಯಿಗಳಂತೆ ಕಾಣಿಸುತ್ತಿದ್ದ ನಿದ್ರೆಯ ಮಾತ್ರೆಗಳು ತುಂಬಿದ್ದ ಬಾಟಲಿಯನ್ನು ತೆಗೆದುಕೊಂಡ.

'ಒಂದು, ಎರಡು, ಮೂರು, ನಾಲ್ಕು, ಐದು...ಸಾಕಾ? ಬೇಕಾದ್ರೆ ಇನ್ನೂ ತಗೋ. ಹತ್ತಿರ ಬಾ, ಎಲ್ಲಿ ಬಾಯಿ ತೆಗೆ..' ಎಂದು ಹೇಳಿ ಅದರ ಬಾಯಿಯೊಳಗೆ ಎಂಟು ಹತ್ತು ಮಾತ್ರೆಗಳನ್ನು, ಉಳಿದದ್ದನ್ನು ಅದರ ಕೈಯೊಳಗೂ ಹಾಕಿದ. ಅಷ್ಟರೊಳಗೆ ಅವನ ದೇಹವಿಡೀ ಜೆವರತೊಡಗಿತು. ಉಸಿರು ಕಟ್ಟಿಕೊಂಡು ಮೇಲುಸಿರು ಬಿಡತೊಡಗಿದ.

'ಮಿಠಾಯಿ ಚೆನ್ನಾಗಿದೆಯಲ್ಲಾ....' ಎನ್ನುತ್ತಾ ಮಗು ಮಿಠಾಯಿಗಳನ್ನು ಬಾಯಿಗೆ ಹಾಕಿಕೊಳ್ಳುವುದಕ್ಕೂ,ಹೊರಗೆ ಯಾರೋ, 'ದೀಪಾ, ದೀಪಾ, ಎಲ್ಲಿದ್ದೀಯಾ?' ಎಂದು ಕರೆಯುವುದಕ್ಕೂ ಸರಿ ಹೋಯಿತು. ಅದು ಉಳಿದಿದ್ದ ಮಿಠಾಯಿಗಳನ್ನೆಲ್ಲ ಬಾಯೊಳಗೆ ಹಾಕಿಕೊಂಡು, 'ಅಕ್ಕಾ ಕರೀತಿದ್ದಾಳೆ. ನಾನು ಆಮೇಲೆ ನಿನ್ನ ಜೊತೆಗೆ ಇರಲು ಬರ್ತೀನಿ. ಭಯ ಪಡಬೇಡ' ಎನ್ನುತ್ತಾ ಓಡಿ ಹೋಯಿತು. ಬಾಗಿಲ ಬಳಿ ತಲುಪಿದ ಕೂಡಲೇ ಅಲ್ಲಿ ನಿಂತು, ಹಿಂದೆ ತಿರುಗಿ ಹೂನಗೆ ಚೆಲ್ಲುತ್ತಾ, ಕೈಯತ್ತಿ 'ಟಾ ಟಾ' ಹೇಳುವ ರೀತಿಯಲ್ಲಿ ಆಡಿಸಿ ಪುನ; ಓಡಿ ಹೋಯಿತು.

ಆ ಮಗು ಮರೆಯಾದ ಕೂಡಲೇ ಶಂಕರನಿಗೆ ತಲೆ ಸುತ್ತಲಾರಂಭಿಸಿತು ಗಂಟಲು ಕಿತ್ತು ಹೋಗುವಂತೆ ನೋಯುತ್ತಿತ್ತು. ಗಂಟಲ ಕೆಳಗೆ ಕೈಯಿಟ್ಟುಕೊಂಡು ಜೋರಾಗಿ ಕೆಮ್ಮತೊಡಗಿದ. ಎದೆಯೊಳಗಿನಿಂದ ಬಿಸಿ ನೀರಿನಂತೆ ಸುಡುತ್ತಾ ಹೊರ ನುಗ್ಗಿದ ರಕ್ತ ಮೂಗು–ಬಾಯಿಗಳಿಂದ ಉಕ್ಕಿ ಚೆಲ್ಲಿತು. ತಲೆದಿಂಬು ಪೂರ್ತಿ ನೆನೆದು ಹೋಯಿತು. ಪ್ರಜ್ಞೆ ತಪ್ಪುವವರೆಗೆ ಶಂಕರ ಕೆಮ್ಮುತ್ತಲೇ ಇದ್ದ. ಅವನಿಗೆ ಪುನ; ಪ್ರಜ್ಞೆ ಮರಳಲು ನಾಲ್ಕು ದಿನಗಳೂ, ಒಂದು ದೊಡ್ಡ ಆಪರೇಷನ್ನೂ, ಹೇರಳವಾದ ಔಷಧಿಗಳೂ, ಇಂಜೆಕ್ಷನ್‌ಗಳೂ, ಕೈ–ಕಾಲಿನ ನರಗಳ ಮೂಲಕ ಎರಡು ಬಾಟಲ್ ರಕ್ತವೂ, ಪ್ರತಿನಿತ್ಯ ಮೂರು ಅಥವಾ ನಾಲ್ಕು ಬಾಟಲ್ ಉಪ್ಪು– ಸಕ್ಕರೆ ಬೆರೆಸಿದ ನೀರೂ ಬೇಕಾದವು!

ಸತ್ತು ಹುಟ್ಟಿದ ಕೆಲವು ದಿನಗಳ ನಂತರ, ಅವನು ವಾಸಿಸುತ್ತಿದ್ದ ಕಟ್ಟಡದಲ್ಲಿ ಅವನಿಗೆ ಪರಿಚಯವಿದ್ದ, ಒಬ್ಬರೇ ಒಬ್ಬರು ವ್ಯಕ್ತಿಯಾದ ಸೋಮಯಾಜುಲು ಅವನನ್ನು ನೋಡಲು ಬಂದಿದ್ದರು. ಶಂಕರ ಸಾಯುತ್ತಾ ಬಿದ್ದಿದ್ದ ಅಂದು ಅವರು ಅವನನ್ನು ಅಕಸ್ಮಾತ್ತಾಗಿ ನೋಡಲು ಬಂದುದನ್ನೂ, ಆಗ ಶಂಕರ ನಾಡಿಯ ತುಡಿತವಿಲ್ಲದೆ, ಕೈ–ಕಾಲುಗಳೆಲ್ಲ ತಣ್ಣಗಾಗಿ, ಮೈಯಿಡೀ ಬೆವರಿ, ಬಾಯಿ–ಮೂಗುಗಳಿಂದ ರಕ್ತ ಸೊರಸೊರೆಯಾಗಿ ಹೊರ ಬರುತ್ತಿದ್ದುದನ್ನೂ, ಶಂಕರ ಪ್ರಜ್ಞಾಹೀನನಾಗಿ ಬಿದ್ದುದನ್ನೂ, ಕೂಡಲೇ ಅವರು ಅವನನ್ನು ಆಸ್ಪತ್ರೆಗೆ ಹೇಗೆ ಸಾಗಿಸುವ ಏರ್ಪಾಡು ಮಾಡಿದರೆಂಬುದನ್ನೂ, ಜೊತೆಯಲ್ಲೇ ತಾವೂ ಆಸ್ಪತ್ರೆಗೆ ಬಂದು ಅವನನ್ನು ಸೇರಿಸಿದುದನ್ನೂ ವಿಸ್ತಾರವಾಗಿ ಅವನಿಗೆ ವಿವರಿಸಿ ತಿಳಿಸಿದರು. ಅದನ್ನೆಲ್ಲ ಕೇಳುತ್ತಾ ಕೇಳುತ್ತಾ ಶಂಕರನಿಗೆ ತುಂಬ ಆಶ್ಚರ್ಯವಾಯಿತು. ಸಿನಿಮಾದ ಕತೆಯಂತೆ ಅವರು ಮತ್ತೆ ಮುಂದುವರಿಸಿದರು; 'ಅವತ್ತೇ ನೋಡಿ, ನಿಮ್ಮನ್ನು

ಆಸ್ಪತ್ರೆಗೆ ಸೇರಿಸಿ, ಟೌನಿನಲ್ಲಿ ಸ್ವಲ್ಪ ಕೆಲಸ ಇತ್ತು, ಅದನ್ನೂ ಮುಗಿಸಿಕೊಂಡು ಮನೆಗೆ ಹೋದ್ರೆ, ಸ್ಟೋರ್‌ಕೀಪರ್ ಗೋಪಾಲರಾವ್ ಇದ್ದಾರಲ್ಲ. ಅವರ ಮಗಳು, ಮೂರು ನಾಲ್ಕು ವರ್ಷ ಇರಬಹುದು. ಆ ಹುಡುಗಿ ಪ್ರಜ್ಞೆ ತಪ್ಪಿ, ಉಸಿರೆಳೆಯುತ್ತಾ ಬಿದ್ದುಕೊಂಡಿದೆ. ಪ್ರಾಣ ಇದೆಯಾ? ಇಲ್ವಾ? ಅನ್ನೋದು ಸಂದೇಹ. ಅಷ್ಟೊಂದು ಡೇಂಜರ್ ಆದ ಪರಿಸ್ಥಿತಿ. ಮನೆಯವರೆಲ್ಲ ಸುತ್ತ ಸೇರ್ಕ್ಕೊಂಡು 'ಕುಯ್ಯೋ ಮರ್ರೋ' ಅಂತ ಕಿರುಚ್ತಿದಾರೆಯೇ ವಿನಾ ಡಾಕ್ಟರನ್ನು ಕರೆಸುವ ಯಾವ ಏರ್ಪಾಡನ್ನೂ ಮಾಡಲಿಲ್ಲ. ಅಷ್ಟೊಂದು ಮುಠ್ಠಾಳರು. ಸರಿ, ಮತ್ತೆ ಆ ಮಗುವನ್ನೆತ್ತಿಕೊಂಡು, ಗೋಪಾಲರಾವ್ ಅವರನ್ನು ಕರ್ಕ್ಕೊಂಡು, ಮಕ್ಕಳ ಆಸ್ಪತ್ರೆಗೆ ಓಡಿ ಹೋದೆ. ಅರ್ಧ ಗಂಟೆಯೊಳಗೆ ನೂಲಿನಂತೆ ಆಡುತ್ತಿದ್ದ ಉಸಿರೂ ಸಹ ನಿಂತು ಹೋಯ್ತು. ಮತ್ತೆ ಅವರನ್ನೂ, ಹೆಣವನ್ನೂ ಟ್ಯಾಕ್ಸೀಲಿ ಹಾಕ್ಕೊಂಡು ಮನೆಗೆ ಹೋಗೋದ್ರೊಳಗೆ ರಾತ್ರಿ ಹನ್ನೆರಡು ಗಂಟೆ! ತುಂಬ ಬೇಜಾರಾಗಿ ಹೋಯ್ತು. 'ಅಯ್ಯೋ? ಅಷ್ಟೊಂದು ಚಿಕ್ಕ ಮಗುವಿಗೆ ಏನಾಯ್ತಂತೆ?' ಎಂದು ಕುತೂಹಲದಿಂದ ಕೇಳಿದ ಶಂಕರ. ಅವನಿಗೆ ಸ್ಟೋರ್ ಕೀಪರ್ ಆಗಲೀ ಅವರ ಮಗುವಾಗಲೀ ಗೊತ್ತಿಲ್ಲ. ಆ ಕಟ್ಟಡದಲ್ಲಿ ವಾಸಿಸುತ್ತಿದ್ದ ಐದಾರು ಕುಟುಂಬಗಳಿಗೆ ಸೇರಿದ ಹದಿನೈದು–ಇಪ್ಪತ್ತು ಮಕ್ಕಳಲ್ಲಿ ಯಾವ ಮಗು ಯಾರದು? ಎಂಬುದು ಕೂಡ ಅವನಿಗೆ ಗೊತ್ತಿಲ್ಲ.

'ಏನೇ ಆದ್ರೂ ಮಕ್ಕಳಿಗೆ ಕಾಯಿಲೆ–ಕಸಾಲೆ ಅಂತ ಬರಬಾರದು. ಅವು ಸಾಯಬಾರದು ಸಾರ್. ಪಾಪ. ಆ ಆಸ್ಪತ್ರೆಗೆ ಹೋದ್ರೆ ಎಲ್ಲಾ ಮಕ್ಕಳೂ ಬಾಡಿ ಹೋದ ಹೂವಿನ ಹಾಗೆ ಮಂಚದಲ್ಲಿ ಬಿದ್ಕೊಂಡಿವೆ' ಎಂದು ಹೇಳಿ, ತಮ್ಮ ಬೇಸರ ನೀಗುವುದಕ್ಕಾಗಿ ನಸ್ಯವನ್ನು ಧಾರಾಳವಾಗಿ ತೆಗೆದು ತಮ್ಮ ಮೂಗಿನಲ್ಲಿ ತುಂಬಿಸಿ ಕೊಂಡರು. ನಂತರ ಮೂಗನ್ನು ಒರೆಸಿಕೊಂಡು, 'ಯಾರಿಗೂ ಗೊತ್ತಿಲ್ಲ, ಆಸ್ಪತ್ರೆಗೆ ಹೋದ್ರೆ ಆ ಡಾಕ್ಟರು ಬೇಟೆನಾಯಿಯ ಹಾಗೆ ಲೊಳ್ ಲೊಳ್ ಅಂತ ಕಿರುಚ್ತಾನೆ. ಸಾಯುವ ಕಡೇ ಸಮಯದಲ್ಲಿ ತಗೊಂಡು ಬರ್ತೀಯಲ್ಲಾ, ಎರಡು ದಿನಗಳ ಮೊದಲೇ ತಗೊಂಡ್ಬರೋಕೇನಾಗಿತ್ತು? ನಾನೇನು ಸತ್ಯವಾನ್ ಸಾವಿತ್ರಿಯಾ ಹೋದ ಉಸಿರನ್ನು ಮತ್ತೆ ಎಳ್ಕೊಂಡು ಬರೋಕೆ? ಅಂತ ಕಿರಿಚ್ತಾನೆ. ಎರಡು, ಮೂರು ದಿನಗಳ ಮೊದಲೇ ಅದು ಚೆನ್ನಾಗಿರೋವಾಗ ಅದನ್ನು ಯಾಕೆ ಆಸ್ಪತ್ರೆಗೆ ತಗೊಂಡು ಹೋಗ್ಬೇಕು? ಹೇಳಿದ್ರೆ ಅವನು ನಂಬೋಲ್ಲ ಅಂತಾನೆ. ಆ ಮಗುವಿಗೆ ಏನಾಗಿತ್ತು ಅಂತ ಅವನಿಗೂ ಗೊತ್ತಾಗಲಿಲ್ಲ. ಕುಯ್ದು ನೋಡಿದ ಮೇಲಷ್ಟೆ ಹೇಳೋಕೆ ಸಾಧ್ಯ ಎಂದು ಬಿಟ್ಟ! ಹಸುಮಗುವನ್ನು ಹೋಗಿ ಕುಯ್ತೀನೀಂತ ಹೇಳ್ತೀಯಲ್ಲಾ, ನಿನಗೆ ಸ್ವಲ್ಪವು ಕರುಣೆ ಅನ್ನೋದು ಇಲ್ವಾ? ಅಂತ ಬೈದು ಶವವನ್ನು ಮನೆಗೆ ತಗೊಂಡು ಬಂದ್ಬಿಟ್ಟೆ' ಎಂದರು.

'ಮತ್ತೇನು ವಿಷಯ?' ಎಂದು ಕೇಳಿದ ಶಂಕರ.

ಸೋಮಯಾಜುಲು ಮಾತನಾಡಲು ಆರಂಭಿಸಿದರು. ಅವನು ಕೇಳುತ್ತಲೇ ಇದ್ದ, ಸಮಯ ಕಳೆದದ್ದೇ ಗೊತ್ತಾಗದಂತೆ.

* * *

# ಇಬ್ಬರು ವೃದ್ಧರು

**ಲಿಯೋ ಟಾಲ್‌ಸ್ಟಾಯ್** **ಅನು : ಬಸವರಾಜ ಡೋಣೂರ**

ಒಮ್ಮೆ ಇಬ್ಬರು ವೃದ್ಧರು ಜೆರುಸಲೆಂಗೆ ತೀರ್ಥಯಾತ್ರೆ ಕೈಕೊಂಡು ದೇವರ ಸೇವೆ ಮಾಡಲು ನಿರ್ಧರಿಸಿದರು. ಎಫಿಮ್ ಶೆವೆಲೆವ್ ಎಂಬುವವನು ಶ್ರೀಮಂತ ರೈತನಾಗಿದ್ದ. ಎಲಿಶ್ ಜೊಡ್‌ರವ್ ಎಂಬಾತ ಅವನಷ್ಟು ಶ್ರೀಮಂತನಾಗಿರಲಿಲ್ಲ.

ಎಫಿಮ್ ಗಂಭೀರ ಹಾಗೂ ದೃಢನಿಶ್ಚಯದ ಮನುಷ್ಯ. ಅವನು ಕುಡಿಯುತ್ತಿರಲಿಲ್ಲ. ಸೇದುತ್ತಿರಲಿಲ್ಲ; ನಸ್ಯ ಕೂಡ ತೆಗೆದುಕೊಳ್ಳುತ್ತಿರಲಿಲ್ಲ. ಅವನು ತನ್ನ ಜೀವನದಲ್ಲಿ ಒಮ್ಮೆಯೂ ಕೆಟ್ಟ ಭಾಷೆ ಬಳಸಿರಲಿಲ್ಲ. ಹಳ್ಳಿಯ ಮುಖ್ಯಸ್ಥನಾಗಿ ಎರಡು ಅವಧಿಗೆ ಸೇವೆ ಸಲ್ಲಿಸಿದ್ದ. ಅವನು ಆ ಹುದ್ದೆ ಬಿಟ್ಟುಕೊಟ್ಟಾಗ ಲೆಕ್ಕ-ಪತ್ರ ಸರಿಯಾಗಿತ್ತು. ಅವನದು ಬಹುದೊಡ್ಡ ಕುಟುಂಬ; ಇಬ್ಬರು ಮಕ್ಕಳು ಮತ್ತು ಲಗ್ನವಾದ ಒಬ್ಬ ಮೊಮ್ಮಗ. ಎಲ್ಲರೂ ಅವನೊಂದಿಗೆ ಇರುತ್ತಿದ್ದರು. ಅವನು ಗಟ್ಟಿಮುಟ್ಟಾಗಿದ್ದ, ಉದ್ದ ಗಡ್ಡ ಬಿಟ್ಟಿದ್ದ, ನೇರವಾಗಿದ್ದ. ಅರವತ್ತು ವರ್ಷ ದಾಟಿದ ಮೇಲೆಯೇ ಅವನ ಗಡ್ಡ ಕೊಂಚ ಕಂದು ಬಣ್ಣಕ್ಕೆ ತಿರುಗಿದ್ದು.

ಎಲಿಶ್ ಇತ್ತ ಶ್ರೀಮಂತನೂ ಅಲ್ಲ, ಅತ್ತ ಬಡವನೂ ಅಲ್ಲ. ಅವನು ಹಿಂದೆ ಬಡಗಿತನ ಮಾಡಲು ಎಲ್ಲಿಗೋ ಹೋಗಿದ್ದ. ಆದರೆ ಈಗ ವೃದ್ಧನಾಗಿರುವುದರಿಂದ ಜೇನುಸಾಕಣೆ ಮಾಡಿಕೊಂಡು ಮನೆಯಲ್ಲೇ ಇದ್ದಾನೆ. ಅವನ ಮಕ್ಕಳಲ್ಲಿ ಒಬ್ಬ ಕೆಲಸ ಹುಡುಕಿಕೊಂಡು ಹೋಗಿದ್ದರೆ, ಇನ್ನೊಬ್ಬ ಮನೆಯಲ್ಲೇ ಇದ್ದಾನೆ. ಎಲಿಶ್ ತುಂಬ ದಯಾಳು ಹಾಗೂ ಪ್ರಸನ್ನವಾಗಿದ್ದ. ನಿಜ, ಕೆಲವೊಮ್ಮೆ ಅವನು ಕುಡಿಯುತ್ತಿದ್ದ, ನಸ್ಯ ತೆಗೆದುಕೊಳ್ಳುತ್ತಿದ್ದ, ಹಾಡುವುದೆಂದರೆ ಅವನಿಗೆ ಎಲ್ಲಿಲ್ಲದ ಖುಷಿ. ಆದರೆ ಅವನು ಶಾಂತಿಪ್ರಿಯ ಮನುಷ್ಯ. ಕುಟುಂಬದ ಸದಸ್ಯರೊಂದಿಗೆ, ನೆರೆಹೊರೆಯವರೊಂದಿಗೆ ಒಳ್ಳೆಯ ಸಂಬಂಧ ಇಟ್ಟುಕೊಂಡಿದ್ದ. ಅವನು ಕುಳ್ಳನಾಗಿದ್ದ, ಕಪ್ಪಗಿದ್ದ, ಗುಂಗುರು ಗಡ್ಡ ಹೊಂದಿದ್ದ. ತನ್ನ ಪೋಷಕ ಸಂತ ಎಲಿಶನಂತೆ ಅವನೂ ಪೂರ್ಣ ಬೊಕ್ಕತಲೆಯವನಾಗಿದ್ದ.

ಇಬ್ಬರೂ ಬಹಳ ಹಿಂದೆಯೇ ಪ್ರತಿಜ್ಞೆ ಮಾಡಿದ್ದರು. ಇಬ್ಬರೂ ಸೇರಿಯೇ ಜೆರುಸಲೆಂಗೆ ತೀರ್ಥಯಾತ್ರೆಗೆ ಹೋಗಲು ನಿರ್ಧರಿಸಿದ್ದರು. ಆದರೆ ಎಫಿಮ್‌ಗೆ

ಸಮಯವೇ ಸಿಕ್ಕಿರಲಿಲ್ಲ. ಅವನಿಗೆ ಯಾವಾಗಲೂ ಕೈತುಂಬ ವ್ಯಾಪಾರವಿರುತ್ತಿತ್ತು. ಒಂದು ಕೆಲಸ ಮಾಡಿ ಮುಗಿಸುತ್ತಿದ್ದಂತೆಯೇ ಅವನು ಇನ್ನೊಂದು ಕೆಲಸ ಪ್ರಾರಂಭಿಸಿಬಿಡುತ್ತಿದ್ದ. ಮೊದಲು ತನ್ನ ಮೊಮ್ಮಗನ ಮದುವೆಯನ್ನು ಮಾಡಬೇಕಿದ್ದಿತು; ಅಮೇಲೆ ತನ್ನ ಕಿರಿಯ ಪುತ್ರ ಸೈನ್ಯದಿಂದ ಹಿಂತಿರುಗಿ ಬರುವುದನ್ನು ಎದುರು ನೋಡಿದ. ಅದಾದ ಮೇಲೆ ಒಂದು ಹೊಸ ಮನೆ ಕಟ್ಟಲು ಪ್ರಾರಂಭ ಮಾಡಿದ.

ಒಂದು ರಜೆಯ ದಿನದಂದು ಮನೆಯ ಹೊರಗೆ ಇಬ್ಬರೂ ಭೇಟಿಯಾದರು. ಮರದ ತುಂಡಿನ ಮೇಲೆ ಕುಳಿತು ಮಾತಿಗಿಳಿದರು. " ಸರಿ, ನಾವು ನಮ್ಮ ಪ್ರತಿಜ್ಞೆಯನ್ನು ಯಾವಾಗ ಪೂರ್ಣಗೊಳಿಸೋದು?" ಎಲಿಶ್ ಕೇಳಿದ. ಎಫಿಮ್ ತನ್ನ ಮುಖ ಏಕಾರ ಮಾಡಿದ. "ನಾವು ಕಾಯಲೇಬೇಕು. ನನ್ನ ಪಾಲಿಗೆ ಈ ವರ್ಷ ಬಹಳ ಕಠಿಣವಾಗಿ ಪರಿಣಮಿಸಿದೆ. ಒಂದು ನೂರಕ್ಕಿಂತ ಕೊಂಚ ಹೆಚ್ಚು ರೂಬೆಲ್ ಹಣ ತಗುಲಬಹುದೆಂದು ವಿಚಾರಿಸಿ ಈ ಮನೆಯನ್ನು ಕಟ್ಟಲು ಶುರು ಮಾಡಿದೆ. ಆದರೆ ಈಗ ಮೂರು ನೂರು ರೂಬೆಲ್ ಖರ್ಚಾಗಿದೆ. ಆದರೂ ಮನೆ ಇನ್ನೂ ಪೂರ್ಣಗೊಂಡಿಲ್ಲ. ನಾವು ಬೇಸಿಗೆಯವರೆಗೆ ಕಾಯಬೇಕು. ದೇವರ ಅನುಗ್ರಹವಿದ್ದರೆ ಬೇಸಿಗೆಯಲ್ಲಿ ನಾವು ಖಂಡಿತವಾಗಿ ತೀರ್ಥಯಾತ್ರೆಗೆ ಹೋಗೋಣ."

"ನಾವು ಮುಂದೆ ಹಾಕೋದು ಬೇಡ ಅಂತಾ ನನಗೆ ಅನ್ಸುತ್ತೆ. ಈಗಲೇ ಹೊರಡೋಣ. ಪ್ರವಾಸಕ್ಕಾಗಿ ವಸಂತಕಾಲ ತುಂಬಾ ಒಳ್ಳೆಯದು" ಎಂದು ಎಲಿಶ್ ಹೇಳಿದ.

" ಇದು ಸೂಕ್ತ ಕಾಲ ಅಲ್ಲ. ಅಲ್ಲದೆ, ಈಗ ಹೋದರೆ ನನ್ನ ಕಟ್ಟಡದ ಗತಿಯೇನು? ನಾನು ಹೇಗೆ ಅದನ್ನು ಅರ್ಧಕ್ಕೆ ಬಿಟ್ಟು ಹೋಗಲಿ?" ಅಂದ ಎಫಿಮ್.

"ಅದನ್ನು ನೋಡಿಕೊಳ್ಳಲು ಯಾರೂ ಇಲ್ಲ ಎಂಬಂತೆ ಹೇಳ್ತೀಯಲ್ಲಾ? ನಿನ್ನ ಮಗ ಅನನ್ನು ನೋಡಿಕೊಳ್ತಾನೆ" ಎಂದನು ಎಲಿಶ್.

"ಆದರೆ ಹೇಗೆ? ನನ್ನ ದೊಡ್ಡ ಮಗ ನಂಬಿಗಸ್ಥನಲ್ಲ. ಅವನು ಒಮ್ಮೊಮ್ಮೆ ಒಂದು ಗ್ಲಾಸ್ ಹೆಚ್ಚಿಗೆ ಕುಡಿಯುತ್ತಾನೆ."

"ಸ್ನೇಹಿತನೆ, ನಾವು ಸತ್ತರೆ, ನಾವಿರದಿದ್ದರೂ ಅವರ ಜೀವನ ನಡೆಯುತ್ತೆ ಅಲ್ಲವೆ? ನಿನ್ನ ಮಗ ಹೊಸ ಅನುಭವ ಪಡೆದುಕೊಳ್ಳಲಿ ಬಿಡು."

" ಅದು ನಿಜ. ಆದರೆ ಒಬ್ಬನು ಒಂದು ಕೆಲಸ ಪ್ರಾರಂಭ ಮಾಡಿದರೆ ಅದು ತನ್ನ ಕಣ್ಮುಂದೇ ಪೂರ್ಣಗೊಳ್ಳಲಿಯೆಂದು ಅವನು ಅಪೇಕ್ಷಿಸುತ್ತಾನೆ."

"ಎಯ್ ಗೆಳೆಯಾ, ನಾವು ಮಾಡಬೇಕೆಂದುಕೊಂಡಿದ್ದನ್ನೆಲ್ಲ ಪೂರೈಸಲು ನಮ್ಮಿಂದಾಗದು. ಈಸ್ಟರ್ ಹಬ್ಬದ ಸಲುವಾಗಿ ನಿನ್ನೆ ನಮ್ಮ ಹೆಣ್ಣು ಮಕ್ಕಳು ಮನೆಯನ್ನು ಸ್ವಚ್ಛಗೊಳಿಸುತ್ತಿದ್ದರು. ಇಲ್ಲಿ ಏನೇನೋ ಮಾಡಬೇಕಿದ್ದಿತ್ತು, ಅಲ್ಲಿ ಇನ್ನೇನೋ ಮಾಡಬೇಕಿದ್ದಿತ್ತು. ಆದರೆ ಅವರಿಗೆ ಎಲ್ಲವನ್ನೂ ಮಾಡಲು ಸಾಧ್ಯವಾಗಲಿಲ್ಲ. ಹೀಗಾಗಿ ತುಂಬಾ ಸೂಕ್ಷ್ಮ ಹಾಗೂ ಸಂವೇದನಶೀಲಳಾದ ನನ್ನ ಹಿರಿ ಸೊಸೆ ಹೇಳಿದಳು: "ಈ

ಪವಿತ್ರ ದಿನ ನಮಗಾಗಿ ಕಾಯದೆ ಬಂದಿದೆ. ಅದಕ್ಕೆ ಕೃತಜ್ಞರಾಗಿರಬೇಕು. ಆದರೆ ಎಷ್ಟೇ ಪರಿಶ್ರಮಪಟ್ಟರೂ ನಾವು ಅದಕ್ಕಾಗಿ ಸಿದ್ಧವಾಗಲಾರೆವು." ಎಫಿಮ್ ಚಿಂತಿತನಾದ. "ನಾನು ಈ ಕಟ್ಟಡದ ಸಲುವಾಗಿ ಬಹಳ ಹಣ ಖರ್ಚು ಮಾಡಿದ್ದೇನೆ. ಖಾಲಿ ಜೇಬಿನಿಂದ ಪ್ರವಾಸ ಪ್ರಾರಂಭಿಸುವುದಾದರೂ ಹೇಗೆ? ಒಂದು ನೂರು ರೂಬೆಲ್ ಆದರೂ ಬೇಕು. ಇದೇನು ಕಡಿಮೆ ಮೊತ್ತವಲ್ಲ" ಎಂದು ಅವನು ಹೇಳಿದ. ಅದಕ್ಕೆ ಎಲಿಶ್ ನಕ್ಕ.

"ಏನು ಹೇಳ್ತೀಯಾ ಗೆಳೆಯಾ. ನನ್ನಲ್ಲಿರುವುದಕ್ಕಿಂತ ಹತ್ತು ಪಟ್ಟು ಹೆಚ್ಚು ಹಣ ನಿನ್ನ ಬಳಿಯಿದೆ. ಹೀಗಿದ್ದರೂ ಹಣದ ಬಗ್ಗೆ ವಿಚಾರಿಸ್ತೀ. ನಾವು ಯಾವಾಗ ಪ್ರವಾಸ ಪ್ರಾರಂಭ ಮಾಡೋಣ ಎಂದು ಮಾತ್ರ ಹೇಳು. ನನ್ನ ಬಳಿ ಈಗ ಹಣವಿಲ್ಲವೇನೋ ನಿಜ. ಆ ಹೊತ್ತಿಗೆ ನಾನು ಹಣ ಸಂಗ್ರಹಿಸಿರುತ್ತೇನೆ" ಎಂದು ಅವನು ಹೇಳಿದ. ಅವನ ಮಾತಿಗೆ ಎಫಿಮ್ ಕೂಡ ನಕ್ಕ. "ಸ್ನೇಹಿತ, ನೀನು ಅಷ್ಟು ಶ್ರೀಮಂತನೆಂದು ನಾನು ತಿಳಿದುಕೊಂಡಿಲ್ಲ. ನೀನು ಎಲ್ಲಿಂದ ಹಣ ತರುತ್ತೀಯಾ?" ಎಂದು ಅವನು ಕೇಳಿದ.

"ಮನೆಯಲ್ಲಿಯ ಚಿಲ್ಲರೆ ಹಣ ಹೊಂದಿಸುತ್ತೇನೆ. ಅದು ಸಾಕಾಗದಿದ್ದರೆ, ಅರ್ಧ ಡಜನ್ ಜೇನುಗೂಡುಗಳನ್ನು ನನ್ನ ನೆರೆಯವನಿಗೆ ಮಾರುತ್ತೇನೆ. ಅವನು ಬಹಳ ದಿನಗಳಿಂದ ಅವುಗಳನ್ನು ಖರೀದಿಸಬೇಕೆಂದುಕೊಂಡಿದ್ದಾನೆ."

"ಈ ವರ್ಷ ಹೆಚ್ಚು ಜೇನುನೊಣ ಬಂದರೆ, ನೀನು ಪಶ್ಚಾತ್ತಾಪ ಪಡುತ್ತೀಯಾ."

"ಪಶ್ಚಾತ್ತಾಪ! ನಾನಲ್ಲ, ನೆರೆಯವನು ಪಡುತ್ತಾನೆ! ನನ್ನ ಜೀವನದಲ್ಲಿ ನಾನು ಯಾವುದಕ್ಕೂ ಪಶ್ಚಾತ್ತಾಪ ಪಟ್ಟಿಲ್ಲ. ಆದರೆ ನನ್ನ ಪಾಪಕ್ಕಾಗಿ ಪಶ್ಚಾತ್ತಾಪ ಪಟ್ಟಿದ್ದೇನೆ. ಯಾಕೆಂದರೆ ಆತ್ಮಕ್ಕಿಂತ ಬೆಲೆಯುಳ್ಳ ವಸ್ತು ಮತ್ತೊಂದಿಲ್ಲ" ಎಂದನು.

"ಅದು ಸರಿ. ಆದರೆ ಮನೆಯಲ್ಲಿಯ ವಸ್ತುಗಳನ್ನು ನಿರ್ಲಕ್ಷಿಸುವುದು ಸರಿಯಲ್ಲ" ಎಫಿಮ್ ಅಂದ. "ಆದರೆ ನಮ್ಮ ಆತ್ಮಗಳನ್ನು ನಿರ್ಲಕ್ಷಿಸುವುದು ಎಷ್ಟು ಸರಿ? ಅದು ತುಂಬ ಕೆಟ್ಟದ್ದು ಅಲ್ಲವೆ? ನಾವು ಪ್ರತಿಜ್ಞೆ ಮಾಡಿದ್ದೇವೆ. ಹೀಗಾಗಿ ನಾವು ಹೋಗೋಣ! ಈಗ ನಾನು ಗಂಭೀರವಾಗಿ ಹೇಳ್ತೇನೆ, ನಾವು ಹೋಗೋಣ" ಎಂದು ಎಲಿಶ್ ಹೇಳಿದ.

೨

ಎಲಿಶ್ ತನ್ನ ಸ್ನೇಹಿತನ ಮನವೊಲಿಸುವಲ್ಲಿ ಯಶಸ್ವಿಯಾದ. ಬೆಳಿಗ್ಗೆ ಈ ಬಗ್ಗೆ ವಿಚಾರಿಸಿದ ಎಫಿಮ್ ಎಲಿಶ್‌ನ ಹತ್ತಿರ ಬಂದು "ನೀನು ಹೇಳಿದ್ದು ಸರಿಯಾಗಿದೆ, ನಾವು ಹೋಗೋಣ. ಹುಟ್ಟು-ಸಾವು ದೇವರ ಕೈಯಲ್ಲಿವೆ, ನಾವು ಈಗ ಹೋಗೋಣ"ಎಂದು ಹೇಳಿದ.

ಒಂದು ವಾರದ ತರುವಾಯ ಇಬ್ಬರು ವೃದ್ಧರು ಹೊರಡಲು ಅಣಿಯಾದರು. ಎಫಿಮ್‌ನ ಹತ್ತಿರ ಸಾಕಷ್ಟು ಹಣವಿತ್ತು. ಅವನು ಒಂದು ನೂರು ರೂಬೆಲ್ ತೆಗೆದುಕೊಂಡ, ಎರಡು ನೂರು ರೂಬೆಲ್ ಹೆಂಡತಿಯ ಹತ್ತಿರ ಬಿಟ್ಟ.

ಎಲಿಶ್ ಕೂಡ ಸಿದ್ಧನಾದ. ತನ್ನ ನೆರೆಯವನಿಗೆ ಹತ್ತು ಜೇನುಗೂಡು ಮಾರಿದ. ಅವನಿಂದ ಎಪ್ಪತ್ತು ರೂಬೆಲ್ ತೆಗೆದುಕೊಂಡ. ತನ್ನ ಕುಟುಂಬದ ಸದಸ್ಯರಿಂದ ನೂರು ರೂಬೆಲ್ ಹಣ ಸಂಗ್ರಹಿಸಿದ. ಅವನಿಗೆ ಹಣ ಕೊಟ್ಟು ಮನೆಯವರೆಲ್ಲರೂ ಬರಿಗೈಯಾದರು. ಅವನ ಹೆಂಡತಿ ತನ್ನ ಅಂತ್ಯಕ್ರಿಯೆಗಾಗಿ ಕೂಡಿಟ್ಟಿದ್ದ ಎಲ್ಲ ಹಣ ಗಂಡನಿಗೆ ಕೊಟ್ಟಳು. ಅವನ ಸೊಸೆ ಕೂಡ ತಾನು ಸಂಗ್ರಹಿಸಿದ ಹಣವನ್ನು ಮಾವನಿಗೆ ಕೊಟ್ಟಳು. ಎಫಿಮ್ ತನ್ನ ಮಗನಿಗೆ ಅವನು ಏನು ಮಾಡಬೇಕು. ಹುಲ್ಲುರಾಶಿಯನ್ನು ಎಲ್ಲಿ ಹಾಕಬೇಕು ಮತ್ತು ಕಟ್ಟಡದ ಕೆಲಸ ಹಾಗೂ ಬಿಲ್ಡಿಂಗ್‌ನ ಮೇಲ್ಛಾವಣಿ ಹೇಗೆ ಪೂರ್ಣಗೊಳಿಸಬೇಕು ಎಂಬುದರ ಬಗ್ಗೆ ಹೇಳಿದ. ಪ್ರತಿಯೊಂದರ ಬಗ್ಗೆಯೂ ವಿಚಾರಿಸಿ ಅದಕ್ಕೆ ಅನುಗುಣವಾಗಿ ಕಿರಿಯರಿಗೆ ಸಲಹೆ ಕೊಟ್ಟ. "ತಾನು ಮಾರಿದ ಜೇನುಹುಟ್ಟುಗಳಿಂದ ಬರುವ ಜೇನುನೊಣಗಳನ್ನು ಪ್ರತ್ಯೇಕವಾಗಿಡತಕ್ಕದ್ದು ಮತ್ತು ಅವನ್ನೆಲ್ಲ ತನ್ನ ನೆರೆಯವನಿಗೇ ಕೊಡತಕ್ಕದ್ದು, ಯಾವುದೇ ಮೋಸವಿಲ್ಲದೆ" ಎಂದು ಎಲಿಶ್ ತನ್ನ ಹೆಂಡತಿಗೆ ಹೇಳುವುದನ್ನು ಮರೆಯಲಿಲ್ಲ. ಮನೆಯ ದೈನಂದಿನ ಕೆಲಸಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಅವನು ಅದನ್ನು ಹೆಸರಿಸಲೂ ಹೋಗಲಿಲ್ಲ. "ಅಗತ್ಯ ಬಿದ್ದ ಹಾಗೆ ಮಾಡಬೇಕು ಮತ್ತು ಹೇಗೆ ಮಾಡಬೇಕು ಎಂಬುದು ನಿಮಗೆ ಸ್ಪಷ್ಟವಾಗುತ್ತದೆ. ನಿಮಗೆ ಸ್ವಾತಂತ್ರ್ಯವಿದೆ. ನಿಮಗೆ ಸರಿಕಂಡದ್ದನ್ನು ನೀವು ಮಾಡೇ ಮಾಡ್ತೀರಾ" ಎಂದು ಅವನು ಹೇಳಿದ. ಹೀಗೆ ಇಬ್ಬರು ವೃದ್ಧರು ಸಿದ್ಧರಾದರು. ಅವರ ಮನೆಯವರು ಕೇಕ್ ಬೇಯಿಸಿ ಕೊಟ್ಟರು. ಬ್ಯಾಗ್‌ಗಳನ್ನು ತಯಾರಿಸಿ ಕೊಟ್ಟರು. ಚರ್ಮದ ಬೂಟುಗಳನ್ನು ಹಾಗೂ ತೊಗಟೆಯ ಒಂದು ಜೋಡು ಮೆಟ್ಟಲು ತೆಗೆದುಕೊಂಡರು. ಅವರ ಕುಟುಂಬವರ್ಗದವರು ಹಳ್ಳಿಯನ್ನು ದಾಟಿ ಬಂದು ಅವರನ್ನು ಬೀಳ್ಕೊಟ್ಟರು. ಹೀಗೆ ಇಬ್ಬರು ವೃದ್ಧರು ತೀರ್ಥಯಾತ್ರೆಯನ್ನು ಪ್ರಾರಂಭ ಮಾಡಿದರು.

ಎಲಿಶ್ ನಗುನಗುತ್ತ ಮನೆಯಿಂದ ಹೊರಟ. ಒಂದು ವಾರ ದಾಟುತ್ತಿದ್ದಂತೆಯೇ ಅವನು ತನ್ನ ಮನೆಯ ಎಲ್ಲ ವ್ಯವಹಾರ ಮರೆತುಬಿಟ್ಟ. ತನ್ನ ಸ್ನೇಹಿತನನ್ನು ಹೇಗೆ ಖುಷಿಗೊಳಿಸಬೇಕು. ಯಾರಿಗೂ ಒಂದು ಬಿರುನುಡಿ ಆಡದಂತೆ ಹೇಗೆ ತನ್ನನ್ನು ತಡೆಯಬೇಕು. ತನ್ನ ಗುರಿಯನ್ನು ಮುಟ್ಟಿ ತಿರುಗಿ ತನ್ನ ಮನೆಯನ್ನು ಹೇಗೆ ಪ್ರೀತಿ ಮತ್ತು ಶಾಂತಿಯಿಂದ ತಲುಪಬೇಕು ಎಂಬುದೊಂದೇ ಅವನ ಚಿಂತೆಯಾಗಿತ್ತು. ರಸ್ತೆಯ ಗುಂಟ ನಡೆಯುತ್ತಾ ಎಲಿಶ್ ಯಾವುದೋ ಒಂದು ಪ್ರಾರ್ಥನೆಯನ್ನು ತನ್ನಷ್ಟಕ್ಕೆ ಪಿಸುಗುಟ್ಟುತ್ತಿದ್ದ ಅಥವಾ ತನ್ನ ಮನಸ್ಸಿನಲ್ಲಿ ತನಗೆ ಜ್ಞಾಪಕಕ್ಕೆ ಬರುವ ಪುಣ್ಯಪುರುಷರ ಸುಂದರ ಜೀವನದ ಕುರಿತು ಧ್ಯಾನಿಸುತ್ತಿದ್ದ. ರಸ್ತೆಯ ಮೇಲೆ ಯಾರಾದರೂ ಭೇಟಿಯಾದರೆ ಅವರೊಂದಿಗೆ ತನಗೆ ಎಷ್ಟು ಸಾಧ್ಯವೋ ಅಷ್ಟು ಸೌಮ್ಯವಾಗಿ ವರ್ತಿಸಲು ಹಾಗೂ ಭಕ್ತಿಯ ಮಾತುಗಳನ್ನು ಹೇಳಲು ಪ್ರಯತ್ನಿಸುತ್ತಿದ್ದ. ಹೀಗೆ ಅವನು ನಲಿಯುತ್ತ ಪ್ರವಾಸ ಮುಂದುವರಿಸಿದ. ಆದರೆ ನಸ್ಯ ತೆಗೆದುಕೊಳ್ಳದೆ ಇರಲು ಅವನಿಗೆ ಸಾಧ್ಯವಾಗಲಿಲ್ಲ. ಅವನು ತನ್ನ ನಸ್ಯದ ಡಬ್ಬಿಯನ್ನು

ಮನೆಯಲ್ಲಿಯೇ ಬಿಟ್ಟು ಬಂದಿದ್ದರೂ. ಅದರ ಬಗ್ಗೆ ಅವನು ವಿಚಾರಿಸದೇ ಇರುತ್ತಿರಲಿಲ್ಲ. ರಸ್ತೆಯ ಮೇಲೆ ಭೇಟಿಯಾದ ಒಬ್ಬ ವ್ಯಕ್ತಿ ಅವನಿಗೆ ನಾಶಿಪುಡಿ ಕೊಟ್ಟ. ಅವನು ಆಗೊಮ್ಮೆ ಈಗೊಮ್ಮೆ ಅವನ ಗೆಳೆಯನಿಗಿಂತ ನಾಲ್ಕು ಹೆಜ್ಜೆ ಹಿಂದೆ ಬಿದ್ದು ಒಂದು ಚಿಟಿಕೆ ನಸ್ಯ ತೆಗೆದುಕೊಳ್ಳುತ್ತಿದ್ದ.

ಎಫಿಮ್ ಕೂಡ ಸರಿಯಾಗೇ ನಡೆಯುತ್ತಿದ್ದ. ಯಾವ ತಪ್ಪೂ ಮಾಡದೆ, ಅನಾವಶ್ಯಕ ಮಾತನಾಡದೆ ದೃಢವಾಗಿ ನಡೆಯುತ್ತಿದ್ದ. ಮನೆಯ ಚಿಂತೆ ಅವನ ಮನಸ್ಸಿನ ಮೇಲೆ ಭಾರವಾಗಿತ್ತು. ಮನೆಯಲ್ಲಿ ಏನು ನಡೆಯುತ್ತಿರಬಹುದೆಂಬುದರ ಬಗ್ಗೆಯೇ ಚಿಂತಿತನಾದ. ತನ್ನ ಮಗನಿಗೆ ಇದನ್ನು ಮಾಡಬೇಕೆಂದೋ ಅಥವಾ ಅದನ್ನು ಮಾಡಬೇಕೆಂಬುದರ ಬಗ್ಗೆ ಸೂಚನೆ ಕೊಡುವುದನ್ನು ಮರೆತಿದ್ದೇನೆಯೆ? ತನ್ನ ಮಗ ತಾನು ಹೇಳಿದ ಕೆಲಸವನ್ನು ಸರಿಯಾಗಿ ಮಾಡಬಲ್ಲನೆ? ತಾನು ಹೊರಡಲು ನಿಂತಾಗ ತಮಾಟಿ ಬಿತ್ತನೆ ಮಾಡುವುದನ್ನು ಅಥವಾ ಅಷ್ಟರಾಶಿಯನ್ನು ಬೇರೆಡೆ ಹಾಕುತ್ತಿದ್ದುದನ್ನು ಗಮನಿಸಿರಬೇಕಿತ್ತು ಎಂದುಕೊಂಡ. ತನ್ನ ಕೆಲಸವನ್ನು ಹೇಗೆ ಮಾಡಬೇಕು ಎಂದು ಮಗನಿಗೆ ತಿಳಿಸಲು ಅಥವಾ ತಾನೇ ಮುಂದೆ ನಿಂತು ಅದನ್ನು ಮಾಡಿ ಮುಗಿಸಲು ತನ್ನ ಮನೆಗೆ ಹಿಂತಿರುಗಬೇಕೆಂದು ಅವನು ಬಹುವಾಗಿ ಆಲೋಚಿಸಿದ.

೩

ಇಬ್ಬರು ವೃದ್ಧರು ಐದು ವಾರಗಳಿಂದ ನಡೆಯುತ್ತಿದ್ದಾರೆ. ತೊಗಟೆಯಿಂದ ಮನೆಯಲ್ಲಿ ತಯಾರಿಸಿದ ಮೆಟ್ಟು ಹರಿದು ಹೋದವು. ಲಿಟಲ್ ರಶಿಯಾ ತಲುಪಿದ್ದಂತೆಯೇ ಹೊಸ ಮೆಟ್ಟುಗಳನ್ನು ಖರೀದಿಸಲು ಅವರು ಶುರುಮಾಡಬೇಕು. ಅವರು ಮನೆ ಬಿಟ್ಟ ದಿನದಿಂದಲೇ ಊಟಕ್ಕಾಗಿ ಮತ್ತು ರಾತ್ರಿ ಲಾಡ್ಜ್‌ನಲ್ಲಿ ತಂಗಲು ಹಣ ತೆತ್ತಬೇಕಾಗಿ ಬಂದಿತು. ಆದರೆ ಅವರು ಲಿಟಲ್ ರಶಿಯಾಕ್ಕೆ ಬಂದಾಗ ತಮ್ಮ ಮನೆಗೆ ಬರುವಂತೆ ಜನರು ಯಾತ್ರಿಕರನ್ನು ಆಹ್ವಾನಿಸಲು ಪರಸ್ಪರರು ಸ್ಪರ್ಧೆಗಿಳಿದರು. ಅವರನ್ನು ಜನರು ತಂತಮ್ಮ ಮನೆಗೆ ಕರೆದುಕೊಂಡು ಹೋಗಿ ಊಟಕ್ಕೆ ಬಡಿಸಿ ಅವರ ವಸತಿಯ ವ್ಯವಸ್ಥೆ ಮಾಡಿದರು. ಅದಕ್ಕಾಗಿ ಅವರು ಹಣ ಪಡೆಯಲಿಲ್ಲ. ಅಲ್ಲದೆ, ಹಾದಿಯಲ್ಲಿ ತಿನ್ನಲು ಇರಲಿ ಎಂದು ಅವರ ಬ್ಯಾಗಿನಲ್ಲಿ ರೊಟ್ಟಿಯನ್ನೋ ಕೇಕ್ ಅನ್ನೋ ಇಟ್ಟರು.

ಇಬ್ಬರು ವೃದ್ಧರು ಈ ರೀತಿಯಾಗಿ ಹಣ ಖರ್ಚು ಮಾಡದೆ ಸುಮಾರು ಐದು ನೂರು ಮೈಲು ನಡೆದರು. ಅವರು ಮುಂದಿನ ಪ್ರದೇಶ ದಾಟಿದ ಮೇಲೆ, ಒಂದು ಬರಗಾಲ ಪೀಡಿತ ಜಿಲ್ಲೆಗೆ ಬಂದರು. ರೈತರು ಯಾತ್ರಿಗಳಿಗೆ ರಾತ್ರಿ ತಂಗಲು ವಸತಿಯೇನೋ ಕೊಟ್ಟರು. ಆದರೆ ಅವರಿಂದ ಏನೂ ಪಡೆಯದೆ ವೃದ್ಧರಿಗೆ ಊಟ ಕೊಡಲು ಅವರಿಗೆ ಸಾಧ್ಯವಾಗಲಿಲ್ಲ. ಕೆಲವೊಮ್ಮೆ ಅವರಿಗೇ ಆಹಾರ ಸಿಗುತ್ತಿರಲಿಲ್ಲ. ದುಡ್ಡು ಕೊಡಲು ಸಿದ್ಧರಿದ್ದರೂ ಆಹಾರ ಸಿಗುತ್ತಿರಲಿಲ್ಲ. ಕಳೆದ ವರ್ಷವೂ ಬೆಳೆ ವಿಫಲವಾಗಿತ್ತೆಂದು ಜನರು ಅವರಿಗೆ ಹೇಳಿದರು. ಶ್ರೀಮಂತರೆಲ್ಲರೂ ದಿವಾಳಿ ಎದ್ದರು;

ತಮ್ಮಲ್ಲಿದ್ದುದನ್ನೆಲ್ಲ ಅವರು ಮಾರಬೇಕಾಗಿ ಬಂದಿತು. ಅವರು ಭಿಕ್ಷೆ ಬೇಡುತ್ತ ತಿರುಗಿದರು. ಮನೆಯಲ್ಲಿ ಹಸಿವೆಯಿಂದ ಬಳಲಿದರು. ಚಳಿಗಾಲದಲ್ಲಿ ಒಂದು ರಾತ್ರಿ ವೃದ್ಧರಿಬ್ಬರೂ ಒಂದು ಚಿಕ್ಕ ಹಳ್ಳಿಯಲ್ಲಿ ನಿಂತರು. ಹದಿನೈದು ಪೌಂಡ್ ಬ್ರೆಡ್ ಖರೀದಿಸಿ ತಿಂದು ಅಲ್ಲಿಯೇ ಮಲಗಿದರು. ಸೂರ್ಯೋದಯಕ್ಕಿಂತ ಮುಂಚೆ ಅವರು ಹೊರಟು ನಿಂತರು. ಬಿಸಿಲೇರುವ ಹೊತ್ತಿಗೆ ಸಾಕಷ್ಟು ದಾರಿ ಕ್ರಮಿಸಲು ಯೋಚಿಸಿದರು. ಅವರು ಎಂಟು ಮೈಲು ನಡೆದ ಮೇಲೆ ತಮ್ಮ ಕಾಲಿನ ಪಟ್ಟಿಯನ್ನು ಬದಲಿಸಿ ಕೆಲಹೊತ್ತು ವಿಶ್ರಮಿಸಿದರು. ಎಲಿಶ್ ನಸ್ಯದ ಡಬ್ಬಿ ಹೊರಗೆ ತೆಗೆದ. ಎಫಿಮ್ ಅವನೆಡೆಗೆ ನೋಡುತ್ತ ತನ್ನ ತಲೆ ಅಲ್ಲಾಡಿಸಿದ.

"ಈ ದುಶ್ಚಟ ಬಿಡಲು ನಿನಗೆ ಹೇಗೆ ಸಾಧ್ಯವಾಗಿಲ್ಲ?" ಅವನು ಕೇಳಿದ. ಎಲಿಶ್ ತನ್ನ ಕೈ ಅಲ್ಲಾಡಿಸುತ್ತಾ "ಇದು ನನಗಿಂತಲೂ ಹೆಚ್ಚು ಬಲಿಷ್ಠವಾಗಿದೆ" ಎಂದ.

ಅವರು ಎದ್ದು ಮುಂದೆ ಸಾಗಿದರು. ಸುಮಾರು ಎಂಟು ಮೈಲು ನಡೆದ ಮೇಲೆ ಅವರು ಒಂದು ದೊಡ್ಡ ಹಳ್ಳಿಗೆ ಬಂದು ಹಳ್ಳಿಯ ನಟ್ಟ ನಡುವೆ ಹಾದು ಹೋದರು. ಈಗ ಬಿಸಿಲು ನೆತ್ತಿಯ ಮೇಲೆ ಏರಿತ್ತು. ಎಲಿಶನಿಗೆ ಬಹಳ ಆಯಾಸವಾಗಿತ್ತು. ಎಲ್ಲಾದರೂ ವಿಶ್ರಮಿಸಿ ಪಾನೀಯ ಸೇವಿಸಬೇಕೆಂಬ ಬಯಕೆ ಮೂಡಿತು. ಇಬ್ಬರಲ್ಲಿ ಎಫಿಮ್ ಹೆಚ್ಚು ಚೆನ್ನಾಗಿ ನಡೆಯಬಲ್ಲನಾಗಿದ್ದ. ಅವನ ಜೊತೆ ಹೆಜ್ಜೆ ಹಾಕುವುದು ಎಲಿಶನಿಗೆ ತುಂಬ ಕಷ್ಟವಾಗುತ್ತಿತ್ತು.

"ನನಗೆ ಕುಡಿಯಲು ನೀರು ಸಿಗುವಂತಿದ್ದರೆ ಮಾತ್ರ ನಾನು ನಡೆಯಬಲ್ಲೆ" ಎಂದು ಅವನು ಹೇಳಿದ. ಎಲಿಶ್ ನಿಂತುಕೊಂಡ.

"ಸರಿ, ನೀನು ಮುಂದುವರಿಸು. ನಾನು ಅಲ್ಲಿರುವ ಚಿಕ್ಕ ಗುಡಿಸಲಿನಲ್ಲಿ ನಿಲ್ಲುತ್ತೇನೆ. ಒಂದು ಘಳಿಗೆಯಲ್ಲೇ ನಿನ್ನನ್ನು ಸೇರಿಕೊಳ್ಳುತ್ತೇನೆ" ಎಂದು ಅವನು ಹೇಳಿದ. "ಸರಿ" ಎಂದು ಹೇಳುತ್ತಾ ಎಫಿಮ್ ಒಬ್ಬನೇ ರಸ್ತೆಯ ಗುಂಟ ಮುಂದೆ ನಡೆದು ಹೋದ. ಎಲಿಶ್ ಮನೆಯ ಕಡೆಗೆ ಹಿಂತಿರುಗಿ ಹೋದ.

ಅದೊಂದು ಚಿಕ್ಕ ಮನೆ. ಮನೆಗೆ ಜೇಡಿಮಣ್ಣಿನಿಂದ ಗಿಲಾಯಿ ಮಾಡಲಾಗಿತ್ತು. ಕೆಳಗೆ ಕಪ್ಪು ಬಣ್ಣ ಹಾಗೂ ಮೇಲೆ ಸುಣ್ಣ ಮೆತ್ತಲಾಗಿತ್ತು. ಆದರೆ ಜೇಡಿಮಣ್ಣು ಉದುರಿಹೋಗಿತ್ತು. ಈ ಮನೆಗೆ ಪುನಃ ಗಿಲಾಯಿ ಮಾಡಿ ಬಹಳ ದಿನಗಳು ಸಂದು ಹೋದದ್ದು ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಒಂದು ಬದಿಗೆ ಮಾಳಿಗೆಯ ಮೇಲಿನ ಹುಲ್ಲು ಹಾಸಿಗೆ ಹಾರಿಹೋಗಿತ್ತು. ಅಂಗಳದ ಮೂಲಕ ಮನೆಗೆ ಹೋಗಲು ದಾರಿಯಿತ್ತು. ಲಿಟಲ್ ರಷಿಯಾದ ಸಂಪ್ರದಾಯದಂತೆ ಶರ್ಟನ್ನು ಪೈಜಾಮದಲ್ಲಿ ಸಿಲುಕಿಸಿಕೊಂಡ, ತೆಳುವಾದ ಗಡ್ಡರಹಿತ ಮನುಷ್ಯ ಮನೆಯ ಸುತ್ತಲೂ ಹರಡಿದ ಮಣ್ಣಿನ ಗುಂಪಿನ ಹತ್ತಿರ ಬಿದ್ದುಕೊಂಡಿದ್ದನ್ನು ಅಂಗಳ ಪ್ರವೇಶಿಸುತ್ತಿದ್ದಂತೆ ಎಲಿಶ್ ಕಂಡ. ಆ ಮನುಷ್ಯ ನೆರಳಿನಲ್ಲಿ ಮಲಗಿರಬಹುದು ಎಂದುಕೊಂಡ. ಆದರೆ ಸೂರ್ಯ ಅವನ ಮೇಲೆಯೇ ಪೂರ್ಣ ಥಳಥಳಿಸುತ್ತಿದ್ದಾನೆ. ನಿದ್ರಿಸುತ್ತಿಲ್ಲವಾದರೂ ಅವನು ಇನ್ನೂ ಅಲ್ಲಿಯೇ

ಬಿದ್ದುಕೊಂಡಿದ್ದನು. ಎಲಿಶ್ ಅವನನ್ನು ಕೂಗಿ ಕುಡಿಯಲು ನೀರು ಕೇಳಿದನು. ಆದರೆ ಅವನು ಯಾವುದೇ ಪ್ರತಿಕ್ರಿಯೆ ಕೊಡಲಿಲ್ಲ.

"ಅವನು ಒಂದೋ ಅನಾರೋಗ್ಯದಿಂದ ಬಳಲುತ್ತಿರಬಹುದು ಅಥವಾ ಒರಟಾಗಿರಬಹುದು" ಎಂದು ಎಲಿಶ್ ಅಂದುಕೊಂಡ. ಬಾಗಿಲಿನ ಹತ್ತಿರ ಹೋದಾಗ ಮನೆಯಲ್ಲಿ ಮಗುವೊಂದು ಅಳುತ್ತಿದ್ದುದು ಕೇಳಿಸಿ ಬಾಗಿಲನ್ನು ಬಡಿದನು.

"ಹೇ ಒಡೆಯನೆ!" ಎಂದು ಕರೆದ. ಪ್ರತ್ಯುತ್ತರವಿಲ್ಲ. ಅವನು ತನ್ನ ಕೋಲಿನಿಂದ ಮತ್ತೆ ಬಾಗಿಲಿನ ಮೇಲೆ ಬಡಿದ.

"ಹೇ, ದೇವರ ಸೇವಕರೆ!"ಎಂದ ಈಗಲೂ ಪ್ರತ್ಯುತ್ತರ ಇಲ್ಲ. ಎಲಿಶ್ ಹಿಂತಿರುಗಿ ಹೋಗಬೇಕೆಂದಾಗ, ಬಾಗಿಲಿನ ಇನ್ನೊಂದು ಬದಿಗೆ ನರಳಾಟ ಕೇಳಿಸಿತು.

"ಇಲ್ಲಿಯ ಜನರು ಸಂಕಷ್ಟದಲ್ಲಿರುವಂತೆ ಕಾಣುತ್ತದೆ. ನಾನು ಮನೆಯೊಳಗೆ ಇಣುಕಿ ನೋಡಲೇಬೇಕು" ಅಂದುಕೊಂಡ. ಎಲಿಶ್ ಬಾಗಿಲ ಸುರುಳಿ ತಿರುಗಿಸಿದ. ಬಾಗಿಲು ಹಾಕಿರಲಿಲ್ಲ. ಬಾಗಿಲು ತೆರೆದು ಕಿರಿದಾದ ದಾರಿಯಲ್ಲಿ ಮುಂದೆ ನಡೆದು ಹೋದ. ಮಲಗುವ ಕೋಣೆಯ ಬಾಗಿಲು ತೆರೆದಿತ್ತು. ಎಡಕ್ಕೆ ಇಟ್ಟಂಗಿಯ ಒಲೆಯಿತ್ತು, ಗೋಡೆಯೆದುರಿಗೆ ಒಂದು ಪ್ರತಿಮೆಯ ಶೆಲ್ಫ್ ಇತ್ತು, ಅದರೆದುರಿಗೆ ಒಂದು ಟೇಬಲ್ ಇದ್ದು, ಅದರ ಪಕ್ಕದಲ್ಲಿ ಒಂದು ಬೆಂಚ್ ಇತ್ತು, ಅದರ ಮೇಲೆ ಬರಿ ತಲೆಯ ಒಂದೇ ವಸ್ತ್ರ ಧರಿಸಿದ ವೃದ್ಧ ಮಹಿಳೆ ಕುಳಿತು ಟೇಬಲ್ ಮೇಲೆ ತಲೆಯಿಟ್ಟು ಅಳುತ್ತಿದ್ದಳು. ಹೊರಕ್ಕೆ ಹಾದ ಹೊಟ್ಟೆಯ, ಮೇಣದ ಬಣ್ಣದ, ತೆಳ್ಳಗಿನ ಒಬ್ಬ ಹುಡುಗ ಅವಳ ಹತ್ತಿರವಿದ್ದು ಅವಳ ಅಂಗಿಯ ತೋಳು ಹಿಡಿದು ಜಗ್ಗುತ್ತಾ ಕಟುವಾಗಿ ಚೀರುತ್ತಾ ಏನನ್ನೋ ಕೇಳುತ್ತಿದ್ದ. ಮನೆಯಲ್ಲಿ ಹವೆ ತುಂಬಾ ಮಲಿನವಾಗಿತ್ತು. ಅವನು ಸುತ್ತಲೂ ನೋಡಿದ. ಒಲೆಯ ಹಿಂದಿನ ನೆಲದ ಮೇಲೆ ಓರ್ವ ಮಹಿಳೆ ಮಲಗಿದ್ದನ್ನು ಕಂಡ. ಅವಳು ತನ್ನ ಕಣ್ಣುಗಳನ್ನು ಮುಚ್ಚಿದ್ದಳು, ಅವಳ ಗಂಟಲು ಕಟ ಕಟ ಎಂದು ಸದ್ದು ಮಾಡುತ್ತಿತ್ತು, ಒಮ್ಮೆ ಕಾಲನ್ನು ಚಾಚುತ್ತಾ, ಮತ್ತೊಮ್ಮೆ ಕಾಲನ್ನು ಒಳಗೆ ಎಳೆದುಕೊಳ್ಳುತ್ತಾ, ಮಗ್ಗಲು ಬದಲಿಸುತ್ತಾ ನೆಲದ ಮೇಲೆ ಚಪ್ಪಟೆಯಾಗಿ ಬಿದ್ದುಕೊಂಡಿದ್ದಳು. ಅವಳ ಮೈಯಿಂದ ಕೊಳಕು ವಾಸನೆ ಬರುತ್ತಿತ್ತು. ಅವಳು ತನಗಾಗಿ ಏನೂ ಮಾಡಿಕೊಳ್ಳದ ಸ್ಥಿತಿಯಲ್ಲಿದ್ದುದು ಸ್ಪಷ್ಟವಾಗಿತ್ತು. ಅವಳ ಅಗತ್ಯವನ್ನು ಪೂರೈಸಲು ಅಲ್ಲಿ ಯಾರೂ ಇರಲಿಲ್ಲ. ವೃದ್ಧ ಮಹಿಳೆ ತನ್ನ ಗೋಣು ಮೇಲಕ್ಕೆತ್ತಿ ಅಪರಿಚಿತನನ್ನು ನೋಡಿದಳು.

"ಏನು ಬೇಕು ನಿಮಗೆ? ಏನು ಬೇಕು ನಿಮಗೆ? ನಮ್ಮ ಹತ್ತಿರ ಏನೂ ಇಲ್ಲ" ಅಂದಳು. ಅವಳು ಲಿಟಲ್ ರಶಿಯನ್ ಭಾಷೆಯಲ್ಲಿ ಮಾತನಾಡಿದ್ದರೂ ಎಲಿಶ್ ಅವಳು ಹೇಳುವುದನ್ನು ಅರ್ಥ ಮಾಡಿಕೊಂಡ.

"ನಾನು ದೇವರ ಸೇವಕ. ನೀರಡಿಸಿ ಇಲ್ಲಿಗೆ ಬಂದೆ" ಎಂದು ಅವನು ಹೇಳಿದ. "ಇಲ್ಲಿ ಯಾರೂ ಇಲ್ಲ. ನೀರು ತರಲು ನಮ್ಮ ಬಳಿ ಏನೂ ಇಲ್ಲ. ನಿಮ್ಮ ದಾರಿ ಹಿಡಿದು ನಡೆಯಿರಿ" ಅಂದಳು. ಆಮೇಲೆ ಎಲಿಶ್ ಕೇಳಿದ:

"ಆ ಮಹಿಳೆಯನ್ನು ನೋಡಿಕೊಳ್ಳಲು ನಿಮ್ಮಲ್ಲಿ ಯಾರೂ ಇಲ್ಲವೆ?"

"ಇಲ್ಲ. ನಮ್ಮಲ್ಲಿ ಯಾರೂ ಇಲ್ಲ. ನನ್ನ ಮಗ ಹೊರಗಡೆ ಸಾಯುತ್ತಿದ್ದಾನೆ. ನಾವು ಇಲ್ಲಿ ಸಾಯುತ್ತಿದ್ದೇವೆ" ಎಂದಳು. ಈ ಅಪರಿಚಿತ ವ್ಯಕ್ತಿಯನ್ನು ನೋಡಿದ ಪುಟ್ಟ ಮಗು ತನ್ನ ಅಳು ನಿಲ್ಲಿಸಿತು. ಆದರೆ ವೃದ್ಧ ಮಹಿಳೆ ಮಾತನಾಡಲು ಪ್ರಾರಂಭಿಸಿದಾಗ ಆತನೂ ಅವಳ ತೋಳು ಹಿಡಿದು ಜಗ್ಗುತ್ತಾ ಅಳಲಾರಂಭಿಸಿದ. "ರೊಟ್ಟಿ. ರೊಟ್ಟಿ" ಎಂದು ಚೀರಿದ.

ಎಲಿಶ್ ಆ ವೃದ್ಧ ಮಹಿಳೆಗೆ ಪ್ರಶ್ನಿಸಬೇಕೆನ್ನುವಷ್ಟರಲ್ಲಿ ಹೊರಗೆ ಬಿದ್ದುಕೊಂಡಿದ್ದ ವ್ಯಕ್ತಿ ಹೊಯ್ದಾಡುತ್ತಾ ಗುಡಿಸಲಿನೊಳಗೆ ಬಂದ. ಅವನು ಗೋಡೆ ಹಿಡಿದುಕೊಂಡು ಒಳಗೆ ಬಂದಿದ್ದ. ಮಲಗುವ ಕೋಣೆಯೊಳಗೆ ಬರುತ್ತಿದ್ದಂತೆ ಹೊಸ್ತಿಲದ ಹತ್ತಿರದ ಮೂಲೆಯಲ್ಲಿ ಬಿದ್ದುಬಿಟ್ಟ. ಬೆಂಚಿನ ಹತ್ತಿರ ಬರಲು ಪ್ರಯತ್ನಿಸುತ್ತಾ ಅವನು ತನ್ನ ಒಡಕು ಧ್ವನಿಯಲ್ಲೇ ಮಾತನಾಡತೊಡಗಿದ. ಪ್ರತಿಯೊಂದು ಶಬ್ದ ಹೊರತರಲು ಪ್ರಯತ್ನಿಸುತ್ತಿದ್ದ. ಉಸಿರು ಎಳೆದುಕೊಳ್ಳಲು ತಡೆಯುತ್ತಿದ್ದ. ತೇಕುತ್ತಿದ್ದ. "ಅನಾರೋಗ್ಯ ಮತ್ತು ಬರಗಾಲ ನಮ್ಮನ್ನು ತನ್ನ ಸ್ವಾಧೀನಪಡಿಸಿಕೊಂಡಿವೆ. ಅವನು ಹಸಿವೆಯಿಂದ ಬಳಲಿ ಸಾಯುತ್ತಿದ್ದಾನೆ" ಎಂದು ಹೇಳಿದ. ಹುಡುಗನ ಹತ್ತಿರ ಹೋಗಿ ಅವನು ಅಳತೊಡಗಿದ. ಎಲಿಶ್ ತನ್ನ ಭುಜದ ಹಿಂದಿನ ಗೋಣಿ ಚೀಲ ತೆಗೆದು ನೆಲದ ಮೇಲೆ ಇಟ್ಟ. ಆಮೇಲೆ ಅದನ್ನು ಬೆಂಚಿನ ಮೇಲಿಟ್ಟು ಅದರ ತಂತಿಗಳನ್ನು ಬಿಚ್ಚಿ ಒಂದು ಬ್ರೆಡ್ ತೆಗೆದು. ಅದನ್ನು ಚಾಕುವಿನಿಂದ ಕತ್ತರಿಸಿ ಆ ವ್ಯಕ್ತಿಗೆ ಕೊಟ್ಟ. ಒಲೆಯ ಹಿಂದೆ ಕುಗ್ಗಿ ನಿಂತುಕೊಂಡಿದ್ದ ಚಿಕ್ಕ ಹುಡುಗ ಹಾಗೂ ಚಿಕ್ಕ ಹುಡುಗಿಯೆಡೆಗೆ ತೋರಿಸುತ್ತಾ 'ಅವರಿಗೆ ಕೊಡಿ' ಎಂದು ಹೇಳುವಂತೆ ಸನ್ನೆ ಮಾಡಿದ. ಆದರೆ ತಾನು ಅದನ್ನು ತೆಗೆದುಕೊಳ್ಳಲಿಲ್ಲ.

ಎಲಿಶ್ ಹುಡುಗನೆದುರಿಗೆ ಬ್ರೆಡ್ ಹಿಡಿದ. ಹುಡುಗನಿಗೆ ಬ್ರೆಡ್ಡಿನ ವಾಸನೆ ಬಡಿದು ತನ್ನ ಕೈಗಳನ್ನು ಚಾಚಿ ಎರಡೂ ಕೈಗಳಿಂದ ಬ್ರೆಡ್ ಹಿಡಿದುಕೊಂಡು ಅದನ್ನು ಹೇಗೆ ಕಚ್ಚಿದನೆಂದರೆ ಅವನ ಮೂಗು ಬ್ರೆಡ್ಡಿನ ದಿಮ್ಮಿಯಲ್ಲಿ ಕಾಣೆಯಾಗಿ ಹೋಯಿತು! ಚಿಕ್ಕ ಹುಡುಗಿ ಒಲೆಯ ಹಿಂದಿನಿಂದ ಬಂದು ಬ್ರೆಡ್ಡಿನ ಮೇಲೇ ತನ್ನ ಕಣ್ಣುಗಳನ್ನು ನೆಟ್ಟಳು. ಎಲಿಶ್ ಅವಳಿಗೂ ಒಂದು ತುಣುಕು ಕೊಟ್ಟನು. ಆಮೇಲೆ ಅವನು ತನ್ನ ಚಾಕುವಿನಿಂದ ಇನ್ನೊಂದು ತುಂಡು ಕತ್ತರಿಸಿ ವೃದ್ಧ ಮಹಿಳೆಗೆ ಕೊಟ್ಟ. ಅವಳು ಅದನ್ನು ಜಗಿಯಲು ಪ್ರಾರಂಭಿಸಿದಳು.

"ಸ್ವಲ್ಪ ನೀರು ತಂದಿದ್ದರೆ ಕೊಡಿ. ಗಂಟಲು ಒಣಗಿದೆ" ಎಂದಳು ಮಹಿಳೆ. "ನಾನು ಸ್ವಲ್ಪ ನೀರು ತರಲು ಪ್ರಯತ್ನಿಸಿದ್ದೆ. ನಿನ್ನೆಯೋ ಅಥವಾ ಇಂದು ಬೆಳಿಗ್ಗೆಯೋ ನೆನಪಾಗುತ್ತಿಲ್ಲ. ಆದರೆ ಹಿಂತಿರುಗುತ್ತಿದ್ದಾಗ ನಾನು ಬಿದ್ದುಬಿಟ್ಟೆ. ಮುಂದೆ ಹೋಗಲಾಗಲಿಲ್ಲ. ಯಾರೂ ತೆಗೆದುಕೊಂಡು ಹೋಗದಿದ್ದಲ್ಲಿ ಆ ನೀರಿನ ಗಡಿಗೆ ಅಲ್ಲಿಯೇ ಇರಬಹುದು." ಇನ್ನೂ ಅಲ್ಲಿಯೇ ಬಿದ್ದಿರಬಹುದೆಂದು ಎಲಿಶ್ ಹೊರಗೆ ಹೋದ. ಗಡಿಗೆ ಹುಡುಕಿ,

ನೀರು ತಂದು ಅವರಿಗೆ ಕುಡಿಯಲು ಕೊಟ್ಟ. ಮಕ್ಕಳು ಮತ್ತು ವೃದ್ಧ ಮಹಿಳೆ ನೀರಿನೊಂದಿಗೆ ಮತ್ತಷ್ಟು ಬ್ರೆಡ್ ತಿಂದರು. ಆದರೆ ಮನೆಯ ಯಜಮಾನ ತಿನ್ನಲಿಲ್ಲ.

"ನಾನು ತಿನ್ನಲಾರೆ" ಅವನು ಹೇಳಿದ. ಇಷ್ಟು ಹೊತ್ತು ತರುಣ ಮಹಿಳೆ ಯಾವುದೇ ಎಚ್ಚರಿಕೆ ತೋರಿಸದೆ ಈ ಬದಿಯಿಂದ ಆ ಬದಿಗೆ. ಆ ಬದಿಯಿಂದ ಈ ಬದಿಗೆ ಅಲ್ಲಾಡುತ್ತಿದ್ದಳು. ಎಲಿಶ್ ಹಳ್ಳಿಯಲ್ಲಿನ ಅಂಗಡಿಗೆ ಹೋಗಿ ಕಾಳು, ಉಪ್ಪು, ಹಿಟ್ಟು ಮತ್ತು ಎಣ್ಣೆ ತಂದನು. ಕೊಡಲಿಯನ್ನು ಹುಡುಕಿ, ಕಟ್ಟಿಗೆ ಒಡೆದು ಒಲೆ ಹೊತ್ತಿಸಿದ. ಪುಟ್ಟ ಹುಡುಗಿ ಬಂದು ಅವನಿಗೆ ನೆರವು ನೀಡಿದಳು. ಸೂಪ್ ಕುದಿಸಿ ಹಸಿವೆಯಿಂದ ಬಳಲುತ್ತಿದ್ದ ಜನರಿಗೆ ಊಟ ಕೊಟ್ಟ.

೫

ಯಜಮಾನ ಸ್ವಲ್ಪ ತಿಂದ. ಅವನ ತಾಯಿ ವೃದ್ಧಮಹಿಳೆ ಕೂಡ ಸ್ವಲ್ಪ ಆಹಾರ ಸೇವಿಸಿದಳು. ಪುಟ್ಟ ಹುಡುಗ ಹಾಗೂ ಪುಟ್ಟ ಹುಡುಗಿ ಬಟ್ಟಲನ್ನು ನೆಕ್ಕಿ ಶುಚಿಗೊಳಿಸಿದರು. ಆಮೇಲೆ ಒಬ್ಬರ ತೋಳಲ್ಲಿ ಒಬ್ಬರು ಮುದುಡಿಕೊಂಡು ಮಲಗಿ ನಿದ್ದೆ ಹೋದರು.

ಯಜಮಾನ ಮತ್ತು ಅವನ ತಾಯಿ ತಾವು ಇಂಥ ದಾರುಣ ಪರಿಸ್ಥಿತಿಗೆ ಹೇಗೆ ಬಂದು ತಲುಪಿದೆವು ಎಂಬುದನ್ನು ಹೇಳತೊಡಗಿದರು.

"ನಾವು ಮೊದಲೇ ಸಾಕಷ್ಟು ಬಡವರಿದ್ದೆವು. ಆದರೆ ಬೆಳೆ ವಿಫಲವಾಯಿತು. ನಾವು ಸಂಗ್ರಹಿಸಿದ ಕಾಳು ಶರತ್ಕಾಲ ಮುಗಿಯುವಷ್ಟರಲ್ಲೇ ತೀರಿತು. ಚಳಿಗಾಲದ ಹೊತ್ತಿಗೆ ನಮ್ಮ ಬಳಿ ಏನೂ ಉಳಿದಿರಲಿಲ್ಲ. ನಮ್ಮ ನೆರೆಯವರಿಂದ ಭಿಕ್ಷೆ ಬೇಡುವಂಥ ಸ್ಥಿತಿ ನಿರ್ಮಾಣವಾಯಿತು. ಆರಂಭದಲ್ಲಿ ಅವರು ಕೊಟ್ಟರು; ಆಮೇಲೆ ಅವರೂ ನಿರಾಕರಿಸಿದರು. ಕೆಲವರು ಸ್ವಸಂತೋಷದಿಂದ ನಮಗೆ ಏನಾದರೂ ಕೊಡಬಹುದಾಗಿತ್ತು. ಆದರೆ ಅವರ ಬಳಿ ಕೊಡಲು ಏನೂ ಇರಲಿಲ್ಲ. ನಮಗೆ ಕೇಳಲು ನಾಚಿಕೆಯಾಗುತ್ತಿತ್ತು. ನಾವು ಹಣ, ಹಿಟ್ಟು ಹಾಗೂ ರೊಟ್ಟಿಯನ್ನು ನಮ್ಮ ಸುತ್ತಲಿನ ಜನರಿಗೆ ಸಾಲ ಕೊಡಬೇಕಿತ್ತು."

"ನಾನು ಕೆಲಸಕ್ಕಾಗಿ ಅಲೆದಾಡಿದೆ. ಆದರೆ ಎಲ್ಲೂ ಕೆಲಸ ಸಿಕ್ಕಲಿಲ್ಲ" ಯಜಮಾನ ಹೇಳಿದ. "ಹೊಟ್ಟೆ ಹೊರೆಯಲು ಎಲ್ಲಾ ಕಡೆಗೆ ಜನರು ಕೆಲಸ ಮಾಡಲು ಸಿದ್ಧರಿದ್ದರು. ಒಂದು ದಿವಸ ಒಂದು ಚಿಕ್ಕ ಕೆಲಸ ಸಿಕ್ಕರೆ ಮುಂದೆ ಎರಡು ದಿನ ಮತ್ತೆ ಕೆಲಸಕ್ಕಾಗಿ ಅಲೆಯಬೇಕಾಗುತ್ತಿತ್ತು. ಆಮೇಲೆ ವೃದ್ಧ ಮಹಿಳೆ ಮತ್ತು ಪುಟ್ಟ ಹುಡುಗಿ ಭಿಕ್ಷಾಟನೆಗೆ ನಿಂತರು. ಅವರಿಗೆ ಸ್ವಲ್ಪ ಭಿಕ್ಷೆ ಸಿಕ್ಕಿತು. ರೊಟ್ಟಿಗೆ ಅಷ್ಟೊಂದು ಬರವಿತ್ತು. ಹೇಗಾದರೂ ಮಾಡಿ ಆಹಾರ ಸಂಗ್ರಹಿಸಿದೆವು. ಮುಂದಿನ ಸುಗ್ಗಿಯವರೆಗೆ ಹೋರಾಟ ನಡೆಸುವ ಭರವಸೆ ಇಟ್ಟುಕೊಂಡಿದ್ದೆವು. ಆದರೆ ವಸಂತ ಕಾಲದ ಹೊತ್ತಿಗೆ ಜನರು ಸಹಾಯವನ್ನು ನಿಲ್ಲಿಸಿದರು. ಇದೇ ಹೊತ್ತಿಗೆ ಅನಾರೋಗ್ಯ ನಮ್ಮನ್ನು ಆಕ್ರಮಿಸಿತು. ಪರಿಸ್ಥಿತಿ ಬಿಗಡಾಯಿಸುತ್ತಾ ಹೋಯಿತು. ಒಂದು ದಿನ ತಿನ್ನಲು ಕೊಂಚ ಸಿಕ್ಕರೆ ಮುಂದೆ

ಎರಡು ದಿನ ಏನೂ ಸಿಕ್ಕುತ್ತಿರಲಿಲ್ಲ.ಹೀಗಾಗಿ ನಾವು ಹುಲ್ಲನ್ನು ತಿನ್ನಲು ಶುರುಮಾಡಿದೆವು. ಆದರೆ ಹುಲ್ಲು, ನನ್ನ ಹೆಂಡತಿಯ ಆರೋಗ್ಯ ಕೆಡಿಸಿತು. ಅವಳಿಗೆ ತನ್ನ ಕಾಲ ಮೇಲೆ ನಿಲ್ಲಲು ಸಾಧ್ಯವಾಗಲಿಲ್ಲ. ನನ್ನಲ್ಲಿಯೂ ಶಕ್ತಿ ಉಳಿದಿರಲಿಲ್ಲ. ನಮ್ಮ ಆರೋಗ್ಯ ಸುಧಾರಿಸಲು ಯಾರ ನೆರವೂ ಸಿಕ್ಕಲಿಲ್ಲ" ಎಂದು ಯಜಮಾನ ಹೇಳಿದ.

"ನಾನೊಬ್ಬಳೇ ಏಕಾಂಗಿಯಾಗಿ ಕೆಲಕಾಲ ಹೋರಾಟ ಮಾಡಿದೆ. ಆದರೆ ಕೊನೆಗೆ ಆಹಾರದ ಕೊರತೆಯಿಂದಾಗಿ ನಾನೂ ಮುರಿದುಬಿದ್ದೆ.ಸೊರಗಿ ಹೋದೆ. ಈ ಹುಡುಗಿ ಕೂಡ ಸೊರಗಿ ಹೋದಳು. ನೆರೆಯವರ ಹತ್ತಿರ ಹೋಗೆಂದು ನಾನು ಅವಳಿಗೆ ಹೇಳಿದೆ. ಆದರೆ ಅವಳು ಗುಡಿಸಲು ಬಿಡಲಿಲ್ಲ. ತೆವಳಿಕೊಂಡು ಹೋಗಿ ಮೂಲೆಯಲ್ಲಿ ಕುಳಿತು ಬಿಟ್ಟಳು. ಮೊನ್ನೆ ಒಬ್ಬ ನೆರೆಯ ಮಹಿಳೆ ಮನೆಯೊಳಗೆ ನೋಡಿ, ನಾವು ಹಸಿವು ಹಾಗೂ ಅನಾರೋಗ್ಯದಿಂದ ಬಳಲುತ್ತಿದ್ದುದು ಕಂಡು ನಮ್ಮನ್ನು ತೊರೆದು ಹೋಗಿಬಿಟ್ಟಳು. ಅವಳ ಗಂಡನಿಗೆ ಎಲ್ಲೋ ಹೋಗಬೇಕಿತ್ತು. ತನ್ನ ಮಕ್ಕಳಿಗೆ ತಿನ್ನಲು ಏನೂ ಇರಲಿಲ್ಲ. ನಾವು ಸಾವಿಗಾಗಿ ಕಾಯುತ್ತಾ ಇಲ್ಲಿ ಬಿದ್ದುಕೊಂಡೆವು" ಎಂದು ವೃದ್ಧ ಮಹಿಳೆ ಹೇಳಿದಳು.

ಅವರ ಕಥೆ ಕೇಳಿಯಾದ ಮೇಲೆ ಎಲಿಶ್ ಅಂದು ತನ್ನ ಸ್ನೇಹಿತನನ್ನು ಹಿಂದೆ ಹಾಕುವ ವಿಚಾರ ಬಿಟ್ಟುಬಿಟ್ಟು, ರಾತ್ರಿಯೆಲ್ಲ ಅವರ ಜೊತೆಯೇ ಇದ್ದುಬಿಟ್ಟ. ಬೆಳಿಗ್ಗೆ ಎದ್ದು ಇದು ತನ್ನ ಸ್ವಂತ ಮನೆಯೇ ಎಂಬಂತೆ ಮನೆಗೆಲಸ ಮಾಡತೊಡಗಿದ. ವೃದ್ಧ ಮಹಿಳೆಯ ಸಹಾಯದಿಂದ ರೊಟ್ಟಿ ಹಿಟ್ಟು ನಾದಿ ಒಲೆ ಹೊತ್ತಿಸಿದ. ಆಮೇಲೆ ಅವನು ಪುಟ್ಟ ಹುಡುಗಿಯೊಂದಿಗೆ ತೀರ ಅಗತ್ಯವಿರುವ ವಸ್ತುಗಳನ್ನು ತೆಗೆದುಕೊಂಡು ಬರಲು ನೆರೆಯವರ ಹತ್ತಿರ ಹೋದ. ಯಾಕೆಂದರೆ ಮನೆಯಲ್ಲಿ ಏನೂ ಇರಲಿಲ್ಲ. ಅವರು ಅಡುಗೆಯ ಪಾತ್ರೆಗಳು, ಬಟ್ಟೆ ಎಲ್ಲವನ್ನೂ ರೊಟ್ಟಿಗಾಗಿ ಮಾರಿದ್ದರು. ಹೀಗಾಗಿ ಎಲಿಶ್ ಅಗತ್ಯವಿರುವ ವಸ್ತುಗಳನ್ನೆಲ್ಲ ಹೊಂದಿಸತೊಡಗಿದ– ಕೆಲವು ವಸ್ತುಗಳನ್ನು ತಾನೇ ತಯಾರಿಸಿದ, ಕೆಲವನ್ನು ಖರೀದಿಸಿದ. ಒಂದು ದಿನ, ಎರಡು ದಿನ, ಮೂರು ದಿನ ಅವನು ಅಲ್ಲಿಯೇ ಉಳಿದ. ಸಣ್ಣ ಹುಡುಗನಿಗೆ ಶಕ್ತಿ ಬಂತು. ಎಲಿಶ್ ಕುಳಿತುಕೊಂಡರೆ ಆ ಹುಡುಗ ಬೆಂಚಿನಗುಂಟ ತೆವಳುತ್ತಾ ಬಂದು ಅವನನ್ನು ತಬ್ಬಿಕೊಳ್ಳುತ್ತಿದ್ದ. ಪುಟ್ಟ ಹುಡುಗಿ ಕೂಡ ಚೈತನ್ಯ ಪಡೆದುಕೊಂಡಳು. ಅವನಿಗೆ ಕೆಲಸದಲ್ಲಿ ನೆರವಾದಳು. ಎಲಿಶನ ಬೆನ್ನು ಹತ್ತುತ್ತಾ ಅವನನ್ನು "ಡ್ಯಾಡಿ, ಡ್ಯಾಡಿ" ಎಂದು ಕರೆಯಲಾರಂಭಿಸಿದಳು.

ವೃದ್ಧ ಮಹಿಳೆ ಸದೃಢಳಾದಳು. ತನ್ನ ನೆರೆಯವರನ್ನು ನೋಡಿಕೊಂಡು ಬರುವಷ್ಟು ಅವಳು ಸಮರ್ಥಳಾದಳು. ಯಜಮಾನ ಕೂಡ ಸುಧಾರಿಸಿದ, ಗೋಡೆ ಹಿಡಿದು ನಡೆಯಲು ಶಕ್ತನಾದ. ಆದರೆ ಅವನ ಪತ್ನಿ ಮಾತ್ರ ಚೇತರಿಸಿಕೊಳ್ಳಲಿಲ್ಲ. ಆದರೆ ಮಾರನೆಯ ದಿನ ಅವಳಿಗೆ ಪ್ರಜ್ಞೆ ಬಂದು ಅವಳು ಆಹಾರ ಕೇಳಿದಳು. "ಸರಿ, ಮಾರ್ಗಮಧ್ಯದಲ್ಲಿ ಇಷ್ಟೊಂದು ಸಮಯ ಕಳೆಯುತ್ತೇನೆಂದು ನಾನು ಅಂದುಕೊಂಡಿರಲಿಲ್ಲ. ನಾನೀಗ ಮುಂದೆ ಸಾಗಬಹುದು" ಎಂದು ಎಲಿಶ್ ಅಂದುಕೊಂಡ.

೬

ಬೇಸಿಗೆಯ ಉಪವಾಸ ತೀರಿದ ನಾಲ್ಕನೆಯ ದಿನ ಹಬ್ಬದ ದಿನವಾಗಿತ್ತು. "ನಾನು ಇಲ್ಲಿಯೇ ಇದ್ದು ಈ ಜನರ ಜೊತೆಯೇ ನನ್ನ ಉಪವಾಸ ಮುರಿಯುತ್ತೇನೆ. ನಾನು ಹೋಗಿ ಅವರಿಗಾಗಿ ಏನನ್ನಾದರೂ ಖರೀದಿಸಿ ತಂದು, ಅವರೊಂದಿಗೆ ಸಮಾರಾಧನೆ ಇಟ್ಟುಕೊಳ್ಳುತ್ತೇನೆ. ನಾಳೆ ಸಂಜೆ ನನ್ನ ಪ್ರಯಾಣ ಬೆಳೆಸುತ್ತೇನೆ" ಎಂದುಕೊಂಡ ಎಲಿಶ್.

ಎಲಿಶ್ ಹಳ್ಳಿಗೆ ಹೋಗಿ ಹಾಲು, ಗೋಧಿ ಹಿಟ್ಟು ತೆಗೆದುಕೊಂಡು ಬಂದ. ನಾಳೆಯ ಸಲುವಾಗಿ ಅವುಗಳನ್ನು ಕುದಿಸಲು, ಬೇಯಿಸಲು ಯಜಮಾನನ ತಾಯಿಗೆ ಅವನು ನೆರವಾದ. ಹಬ್ಬದ ದಿವಸ ಎಲಿಶ್ ಚರ್ಚಿಗೆ ಹೋದ. ಆಮೇಲೆ ಮನೆಯಲ್ಲಿ ತನ್ನ ಸ್ನೇಹಿತರ ಜೊತೆ ಸೇರಿ ಉಪವಾಸ ಮುರಿದ. ಆ ದಿನ ಯಜಮಾನನ ಹೆಂಡತಿ ಎದ್ದು ಕುಳಿತು ಕೊಂಚ ನಡೆದಾಡಲು ಸಮರ್ಥಳಾದಳು. ಯಜಮಾನ ಮುಖ ಕ್ಷೌರ ಮಾಡಿಕೊಂಡು, ತಾಯಿ ತೊಳೆದು ಹಾಕಿದ ಶುಭ್ರವಾದ ಅಂಗಿಯನ್ನು ತೊಟ್ಟು, ತನ್ನ ಫಲವತ್ತಾದ ಗದ್ದೆ ಮತ್ತು ಹುಲ್ಲು ಮಾಳವನ್ನು ಒತ್ತೆಯಿಟ್ಟ ಕುಲೀನ ರೈತನಲ್ಲಿಗೆ ಹೋಗಿ, ತನ್ನ ಮೇಲೆ ಕರುಣೆ ತೋರಿಸುವಂತೆ ಆತನನ್ನು ಬೇಡಿಕೊಂಡ. ಸುಗ್ಗಿ ತೀರಿದ ಮೇಲೆ ಹುಲ್ಲು ಮಾಳ ಮತ್ತು ಗದ್ದೆಯನ್ನು ಊಳಲು ತನಗೆ ಬಿಟ್ಟುಕೊಡಬೇಕೆಂದು ಬೇಡಿಕೊಂಡ. ಆದರೆ ಸಂಜೆ ಅತ್ಯಂತ ದುಃಖಿತನಾಗಿ ಮನೆಗೆ ಹಿಂತಿರುಗಿ ಬಂದು ಅಳಲಾರಂಭಿಸಿದ. ಯಾಕೆಂದರೆ ಕುಲೀನ ರೈತ ಆತನ ಮೇಲೆ ಕರುಣೆ ತೋರಿಸಿರಲಿಲ್ಲ. ಬದಲಿಗೆ ತನ್ನ ಹಣ ತೆಗೆದುಕೊಂಡು ಬರಲು ಹೇಳಿದ್ದ.

ಎಲಿಶ್ ಮತ್ತೆ ಚಿಂತಿತನಾದ. "ಈಗ ಅವರು ಹೇಗೆ ಬದುಕಬೇಕು? ಬೇರೆ ಜನರು ಒಣಹುಲ್ಲು ಮಾಡುತ್ತಾ ಹೋಗುತ್ತಾರೆ. ಆದರೆ ಇವರಿಗೆ ಕಟಾವು ಮಾಡಲು ಏನೂ ಇಲ್ಲ, ಅವರ ಹುಲ್ಲು ಮಾಳ ಒತ್ತೆ ಇಡಲಾಗಿದೆ. ಸಣ್ಣಗೋಧಿ ಹಣ್ಣಾಗುವುದು. ಬೇರೆಯವರು ಪೈರನ್ನು ಕೊಯ್ಯುತ್ತಾರೆ. ಈ ವರ್ಷ ಭೂಮಿತಾಯಿ ಎಂಥ ಭವ್ಯ ಪೈರನ್ನು ಕೊಟ್ಟಿದ್ದಾಳೆ! ಆದರೆ ಅವರಿಗೆ ಎದುರು ನೋಡಲು ಏನೂ ಇಲ್ಲ. ಅವರ ಮೂರು ಎಕರೆ ಗದ್ದೆ ಶ್ರೀಮಂತ ರೈತನಿಗೆ ಒತ್ತೆ ಹಾಕಲಾಗಿದೆ. ಈಗ ಹೊರಟುಹೋದರೆ ನಾನು ಅವರನ್ನು ಎಂಥ ದುಃಸ್ಥಿತಿಯಲ್ಲಿ ಕಂಡಿದ್ದೆನೋ ಅಂಥ ಸ್ಥಿತಿಗೇ ಅವರು ಮರಳುತ್ತಾರೆ" ಎಂದುಕೊಂಡ ಎಲಿಶ್. ಆದರೆ ಕೊನೆಗೆ ಈ ಸಂಜೆ ಹೋಗದಿರಲು ಮತ್ತು ನಾಳೆಯವರೆಗೆ ಅಲ್ಲಿಯೇ ಉಳಿದುಕೊಳ್ಳಲು ಅವನು ನಿರ್ಧರಿಸಿ, ಅಂಗಳದಲ್ಲಿ ಪ್ರಾರ್ಥನೆ ಹೇಳಿ ಹಾಸಿಗೆಯ ಮೇಲೆ ಮಲಗಿದ. ಆದರೆ ಅವನು ನಿದ್ದೆ ಹೋಗಲಿಲ್ಲ. ಈಗಾಗಲೇ ತಾನು ಸಾಕಷ್ಟು ಹಣ ಮತ್ತು ಸಮಯ ಖರ್ಚು ಮಾಡಿದ್ದರಿಂದ ತಾನೀಗ ಮುಂದೆ ಹೋಗಲೇಬೇಕೆಂದುಕೊಂಡ.

"ಇದಕ್ಕೆ ಕೊನೆಯೆಂಬುದು ಕಾಣುತ್ತಿಲ್ಲ. ಮೊದಲಿಗೆ, ಅವರಿಗೆ ಕುಡಿಯಲು ಸ್ವಲ್ಪ ನೀರು ತಂದುಕೊಡುವುದು ಮತ್ತು ತಿನ್ನಲು ಪ್ರತಿಯೊಬ್ಬರಿಗೂ ಒಂದು ತುಂಡು

ರೊಟ್ಟಿ ಕೊಡುವುದು ನನ್ನ ಉದ್ದೇಶವಾಗಿತ್ತು. ಇದು ನನ್ನನ್ನು ಈಗ ಎಂಥ ಪರಿಸ್ಥಿತಿಯಲ್ಲಿ ತಂದು ನಿಲ್ಲಿಸಿದೆ ನೋಡಿ. ಹುಲ್ಲುಮಾಳ ಮತ್ತು ಗದ್ದೆಯನ್ನು ಒತ್ತೆಯಿಂದ ಬಿಡಿಸಿಕೊಳ್ಳಬೇಕು. ಈ ಕೆಲಸ ಪೂರೈಸಿದ ಮೇಲೆ ನಾನು ಅವರಿಗೆ ಒಂದು ಆಕಳು ಮತ್ತು ಹೊತ್ತು ಹಾಕಲು ಯಜಮಾನಿಗೆ ಒಂದು ಕುದುರೆ ಕೊಂಡುಕೊಳ್ಳಬೇಕಾಗುತ್ತದೆ." "ಸಹೋದರ ಎಲಿಶ್, ಒಳ್ಳೆಯ ಚಕ್ರವ್ಯೂಹದಲ್ಲಿ ಸಿಲುಕಿಬಿಟ್ಟಿರುವಿ! ನಿನ್ನ ಲಂಗರಿನ ಹಗ್ಗ ನಿನ್ನ ಕೈಯಿಂದ ಜಾರಿದೆ. ನಿನ್ನ ಎಣಿಕೆ ತಪ್ಪಿದೆ!" ಎಂದು ತನ್ನಷ್ಟಕ್ಕೇ ಅಂದುಕೊಂಡ.

ಎಲಿಶ್ ಮೇಲೆದ್ದ. ತಲೆದಿಂಬಾಗಿ ಬಳಸುತ್ತಿದ್ದ ತನ್ನ ಕೋಟನ್ನು ಎತ್ತಿ ಅದನ್ನು ಬಿಚ್ಚಿದ. ನಸ್ಯದ ಡಬ್ಬಿ ಹೊರತೆಗೆದು ಒಂದು ಚಿಟಿಕೆ ತೆಗೆದುಕೊಂಡ. ಅದು ತನಗೆ ಸರಿಯಾಗಿ ವಿಚಾರ ಮಾಡಲು ಸಹಾಯ ನೀಡಬಹುದೆಂದುಕೊಂಡ.

ಆದರೆ ತಾನು ಹೋದರೆ ಇಲ್ಲಿ ಹೇಗೆ? ಎಂದು ಅವನು ಪದೇ ಪದೇ ವಿಚಾರಿಸಿದ. ಯಾವ ನಿರ್ಣಯಕ್ಕೂ ಬರಲಿಲ್ಲ. ತಾನು ಹೋಗಲೇಬೇಕು. ಆದರೆ ದಯೆ, ಕರುಣೆ ಅವನನ್ನು ಹಿಡಿದು ನಿಲ್ಲಿಸಿದೆ. ತಾನು ಏನು ಮಾಡಬೇಕೆಂದು ತೋಚಲಿಲ್ಲ. ಅವನು ಕೋಟನ್ನು ಮಡಚಿ ಮತ್ತೆ ತನ್ನ ತಲೆಯ ಕೆಳಗಿಟ್ಟುಕೊಂಡ. ಕೋಳಿ ಪುನಃ ಕೂಗುವವರೆಗೆ ಅವನು ಹಾಗೆಯೇ ಬಿದ್ದುಕೊಂಡ. ಆಮೇಲೆ ಅವನಿಗೆ ಜೋಂಪು ಹತ್ತಿತು. ಕೂಡಲೇ ತನ್ನನ್ನು ಯಾರೋ ಎಬ್ಬಿಸಿದಂತೆ ಅವನಿಗೆ ಭಾಸವಾಯಿತು. ತಾನು ಪಯಣ ಮುಂದುವರಿಸಲು ಬಟ್ಟೆ ಧರಿಸಿ, ಬೆನ್ನಿಗೆ ಚೀಲ ಹಾಕಿಕೊಂಡು ಕೈಯಲ್ಲಿ ಕೋಲು ಹಿಡಿದು ನಿಂತಂತೆ, ತಾನು ನುಸುಳಿ ಹೋಗಲೆಂದೇ ಗುಡಿಸಲಿನ ಬಾಗಿಲು ಅರ್ಧ ತೆರೆದಂತೆ ಅವನಿಗೆ ಕಂಡಿತು. ಇನ್ನೇನು ಅವನು ಹೊರಗೆ ಹೋಗಬೇಕು, ಅಷ್ಟರಲ್ಲಿ ಅವನ ಗೋಣಿಚೀಲ ಬದಿಗೆ ಇದ್ದ ಬೇಲಿಯಲ್ಲಿ ಸಿಲುಕಿಕೊಂಡಿತು. ಅದರಿಂದ ಬಿಡಿಸಿಕೊಳ್ಳಲು ಅವನು ಪ್ರಯತ್ನಿಸಿದ. ಅಷ್ಟೊತ್ತಿಗೆ ಅವನ ಕಾಲಿನ ಪಟ್ಟಿ ಇನ್ನೊಂದು ಬದಿಗೆ ಸಿಲುಕಿತು. ಅವನು ತನ್ನ ಚೀಲ ಜಗ್ಗಿದ. ಆಗ ಅದು ಬೇಲಿಯಲ್ಲಿ ಸಿಲುಕಿಕೊಂಡಿಲ್ಲವೆಂಬುದು ಅವನ ಲಕ್ಷ್ಯಕ್ಕೆ ಬಂತು. ಆ ಚಿಕ್ಕ ಹುಡುಗಿ ಅದನ್ನು ಹಿಡಿದು ನಿಂತುಕೊಂಡು ಅಳುತ್ತಾ ಇದ್ದುದು ಕಂಡಿತು. ಹುಡುಗಿ "ರೊಟ್ಟಿ ಅಪ್ಪ, ರೊಟ್ಟಿ" ಎಂದು ಅನ್ನುತ್ತ ಅಳುತ್ತಿತ್ತು.

ಅವನು ತನ್ನ ಕಾಲನ್ನು ನೋಡಿಕೊಂಡ. ಅಲ್ಲಿ ಕಾಲುಪಟ್ಟಿ ಹಿಡಿದು ಆ ಪುಟ್ಟ ಮಗು ನಿಂತಿದೆ. ಮನೆಯ ಯಜಮಾನ ಹಾಗೂ ವೃದ್ಧ ಮಹಿಳೆ ಕಿಟಕಿಯ ಮೂಲಕ ಅವನನ್ನು ನೋಡುತ್ತಿದ್ದರು. ಎಲಿಶ್ ಎಚ್ಚೆತ್ತುಕೊಂಡ. ಎತ್ತರದ ಧ್ವನಿಯಲ್ಲಿ ತನಗೆ ತಾನೇ ಹೇಳಿಕೊಂಡ: "ನಾಳೆ ಅವರ ಗದ್ದೆಯನ್ನು ಬಿಡಿಸಿಕೊಳ್ಳುತ್ತೇನೆ. ಅವರಿಗಾಗಿ ಒಂದು ಕುದುರೆ, ಸುಗ್ಗಿಯವರೆಗೆ ಸಾಕಾಗುವಷ್ಟು ಹಿಟ್ಟು ಹಾಗೂ ಮಕ್ಕಳಿಗಾಗಿ ಒಂದು ಆಕಳು ಖರೀದಿಸುತ್ತೇನೆ. ಇಲ್ಲದಿದ್ದರೆ ಸಮುದ್ರದಾಚೆಯಿರುವ ದೇವರ ದರ್ಶನವನ್ನು ನಾನು ಪಡೆಯುವ ಹೊತ್ತಿಗೆ ನನ್ನಲ್ಲಿಯ ದೇವರು ನನ್ನಲ್ಲೇ ಕಳೆದು ಹೋಗಿರುತ್ತಾನೆ!"

ಎಲಿಶ್ ನಿದ್ದೆ ಹೋದ. ಬೆಳಗಾಗುವವರೆಗೆ ನಿದ್ರಿಸಿದ. ಬೇಗನೇ ಎದ್ದು ಶ್ರೀಮಂತ ರೈತನ ಬಳಿ ಹೋಗಿ ಗದ್ದೆ ಮತ್ತು ಹುಲ್ಲುಮಾಳ ಎರಡನ್ನೂ ಬಿಡಿಸಿಕೊಂಡ. ಬರುವಾಗ ಒಂದು ಕುಡುಗೋಲು ತಂದು ಕಟಾವು ಮಾಡಲು ಯಜಮಾನನನ್ನು ಕಳಿಸಿ ತಾನು ಹಳ್ಳಿಗೆ ಹೋದ. ಒಬ್ಬರು ಒಂದು ಕುದುರೆ ಹಾಗೂ ಒಂದು ಚಕ್ಕಡಿ ಮಾರಲು ಇಟ್ಟಿದ್ದಾರೆಂದು ಕೇಳಿದ. ಮಾಲಿಕನೊಂದಿಗೆ ಚೌಕಾಶಿ ಮಾಡಿ ಅವುಗಳನ್ನು ಕೊಂಡುಕೊಂಡು ಬಂದ. ಒಂದು ಚೀಲ ಹಿಟ್ಟು ಖರೀದಿಸಿ ಗಾಡಿಯಲ್ಲಿಟ್ಟು ಆಕಳು ನೋಡಿ ಬರಲು ಹೋದ. ಅವನು ಅಲ್ಲಿಗೆ ಹೋಗುವಾಗ ಇಬ್ಬರು ಮಹಿಳೆಯರು ತನ್ನ ಬಗ್ಗೆ ಮಾತನಾಡ್ತಾ ಇದ್ದುದನ್ನು ಕೇಳಿದ. ಅವರು ಲಿಟಲ್ ರಶಿಯನ್ ಭಾಷೆಯಲ್ಲಿ ಮಾತನಾಡುತ್ತಿದ್ದರೂ ಅವರು ಏನು ಹೇಳುತ್ತಿದ್ದಾರೆಂಬುದು ಅವನಿಗೆ ತಿಳಿಯಿತು.

ಮೊದಲಿಗೆ ಅವರು ಅವನನ್ನು ಅರಿಯದಂತೆ ಕಂಡಿತು. ಅವನು ತುಂಬ ಸಾಧಾರಣ ಮನುಷ್ಯನೆಂದು ಅವರು ಭಾವಿಸಿದ್ದರು. ಕುಡಿಯಲು ನೀರು ಕೇಳಿ ಬಂದು ನಿಂತಿದ್ದಾನೆಂದು ಅಂದುಕೊಂಡರು. ಅವರಿಗಾಗಿ ಅವನು ಕೊಂಡು ತಂದಿರುವ ವಸ್ತುಗಳನ್ನು ನೋಡಿ, ಈ ಬೆಳಿಗ್ಗೆ ಒಂದು ಕುದುರೆ ಮತ್ತು ಒಂದು ಚಕ್ಕಡಿ ಅವನು ಏಕೆ ತಂದಿದ್ದಾನೆಂದು ಅವರು ಕೇಳಿದರು! ಜಗತ್ತಿನಲ್ಲಿ ಇಂಥವರು ಬಹಳ ಜನರು ಸಿಗುವುದಿಲ್ಲ. ಇಂಥ ಮನುಷ್ಯನನ್ನು ನೋಡುವುದೇ ಒಂದು ಭಾಗ್ಯ!

ಎಲಿಶ್ ಅವರ ಮಾತು ಕೇಳಿದ. ಅವರು ತನ್ನನ್ನು ಹೊಗಳುತ್ತಿದ್ದಾರೆಂದು ತಿಳಿದುಕೊಂಡ. ಅವನು ಆಕಳು ಖರೀದಿಸಲು ಹೋಗಲಿಲ್ಲ. ಪ್ರವಾಸಿಗೃಹಕ್ಕೆ ಹಿಂತಿರುಗಿದ. ಕುದುರೆಗೆ ಹಣ ಕೊಟ್ಟು, ಲಗಾಮು ಹಾಕಿ ಗುಡಿಸಲಿಗೆ ಸವಾರಿ ಮಾಡಿಕೊಂಡು ಹೋದ. ಗುಡಿಸಲಿನಲ್ಲಿಯ ಜನರು ಕುದುರೆಯನ್ನು ನೋಡಿ ಆಶ್ಚರ್ಯಚಕಿತರಾಗಿ ಅದನ್ನು ತಮಗಾಗಿ ತಂದಿದ್ದಾನೆಂದು ಭಾವಿಸಿದರು. ಆದರೆ ಹಾಗೆ ಕೇಳಲು ಅವರಿಗೆ ಧೈರ್ಯ ಬರಲಿಲ್ಲ. ಗೇಟ್ ತೆರೆಯಲು ಯಜಮಾನ ಎದ್ದು ಹೊರಗೆ ಬಂದ.

"ಅಜ್ಜ, ಎಲ್ಲಿಂದ ಈ ಕುದುರೆ ತಂದಿರುವಿರಿ?" ಎಂದು ಅವನು ಕೇಳಿದ. "ಯಾಕೆ, ಇದನ್ನು ನಾನು ಖರೀದಿಸಿದ್ದೇನೆ." ಎಲಿಶ್ ಹೇಳಿದ. ಯಜಮಾನ ಲಗಾಮು ಬಿಚ್ಚಿದ, ಚೀಲವನ್ನು ಹೊತ್ತುಕೊಂಡು ಹೋಗಿ ಉಗ್ರಾಣದಲ್ಲಿಟ್ಟ. ಆಮೇಲೆ ಸ್ವಲ್ಪ ಹುಲ್ಲು ಕತ್ತರಿಸಿ ತಂದು ಗೋದಲಿಯಲ್ಲಿ ಹಾಕಿದ. ಎಲ್ಲರೂ ಮಲಗಿದರು. ಎಲಿಶ್ ಮನೆಯ ಹೊರಗಡೆ ಹೋಗಿ ರಸ್ತೆಯ ಪಕ್ಕದಲ್ಲಿ ಕುಳಿತುಕೊಂಡ. ಆ ಸಂಜೆ ಅವನು ತನ್ನೊಂದಿಗೆ ತನ್ನ ಬ್ಯಾಗನ್ನು ಕೂಡ ತಂದ. ಎಲ್ಲರೂ ಮಲಗಿದ ಮೇಲೆ ಅವನು ಎದ್ದು ವಸ್ತುಗಳನ್ನು ಬ್ಯಾಗಿನಲ್ಲಿಟ್ಟು, ಕಾಲಿಗೆ ಲೈನಿನ್ ಪಟ್ಟಿಯನ್ನು ಸುತ್ತಿಕೊಂಡು, ಜೋಡು ಮೆಟ್ಟಿ ಎಫಿಮನನ್ನು ಹಿಂಬಾಲಿಸಿ ಹೊರಟು ನಿಂತನು.

೭

ಎಲಿಶ್ ಮೂರು ಮೈಲು ನಡೆದ ಮೇಲೆ ಮೆಲ್ಲನೆ ಬೆಳಕಾಗಲು ಪ್ರಾರಂಭಿಸಿತು. ಗಿಡದ ಕೆಳಗೆ ಕುಳಿತು, ಬ್ಯಾಗ್ ತೆಗೆದು, ಹಣವನ್ನು ಎಣಿಸಿದ. ಅವನ ಹತ್ತಿರ ಕೇವಲ

ಹದಿನೇಳು ರೂಬೆಲ್ ಮತ್ತು ಇಪ್ಪತ್ತು ಕೊಪೆಕ್ಸ್ ಹಣ ಮಾತ್ರ ಇತ್ತು.

"ಸರಿ. ಇಷ್ಟೇ ಹಣವನ್ನಿಟ್ಟುಕೊಂಡು ಸಮುದ್ರ ದಾಟಲು ಪ್ರಯತ್ನಿಸುವುದರಲ್ಲಿ ಅರ್ಥವಿಲ್ಲ. ದಾರಿಯಲ್ಲಿ ಭಿಕ್ಷೆ ಬೇಡುವುದು ಅಲ್ಲಿಗೆ ಹೋಗದಿರುವುದಕ್ಕಿಂತ ಹೆಚ್ಚು ಪಾಪ. ಸ್ನೇಹಿತ ಎಫಿಮ್ ನನ್ನನ್ನು ಬಿಟ್ಟೇ ಜೆರುಸಲೆಂಗೆ ಹೋಗುತ್ತಾನೆ. ಅವನು ನನ್ನ ಹೆಸರಿನಿಂದ ದೇವರ ಮೂರ್ತಿಯೆದುರು ಮೋಂಬತ್ತಿ ಇಡುತ್ತಾನೆ. ನನ್ನ ಮಟ್ಟಿಗೆ ಹೇಳುವುದಾದರೆ ಈ ಜೀವನದಲ್ಲಿ ಎಂದಿಗೂ ನನ್ನ ಪ್ರತಿಜ್ಞೆಯನ್ನು ಪೂರೈಸಲಾರೆ. ನಾನು ಕರುಣಾಮೂರ್ತಿಯಾದ ನನ್ನ ದೇವರಿಗೇ ಈ ಪ್ರತಿಜ್ಞೆಯನ್ನು ಮಾಡಿದ್ದೇನೆ. ಅವನು ಪಾಪಿಗಳನ್ನು ಕ್ಷಮಿಸುತ್ತಾನೆ. ಹೀಗಾಗಿ ನನ್ನನ್ನೂ ಕ್ಷಮಿಸದೇ ಇರಲಾರ."

ಎಲಿಶ್ ಮೇಲೆದ್ದ, ಭುಜದವರೆಗೆ ಬ್ಯಾಗನ್ನು ಜಗ್ಗಿ ಹಿಂತಿರುಗಿದ. ತನ್ನನ್ನು ಯಾರೂ ಗುರ್ತಿಸಕೂಡದೆಂದು, ಹಳ್ಳಿಗರು ತನ್ನನ್ನು ನೋಡಕೂಡದೆಂದು ಹಳ್ಳಿಯ ಸುತ್ತು ತಿರುಗಿ, ಗಟ್ಟಿಯಾದ ಹೆಜ್ಜೆ ಹಾಕುತ್ತಾ ಮನೆಯ ಕಡೆಗೆ ನಡೆದ. ಮನೆಯಿಂದ ಹೊರಟಾಗ ದಾರಿ ಬಹಳ ಕಷ್ಟಕರವೆಂದು ಅವನಿಗೆ ತೋರಿತ್ತು. ಎಫಿಮನೊಂದಿಗೆ ಹೆಜ್ಜೆ ಹಾಕುವುದು ತುಂಬಾ ಕಠಿಣವಾಗಿತ್ತು. ಆದರೆ ತನ್ನ ಪಯಣದಲ್ಲಿ ದೇವರು ಅವನ ಸಹಾಯಕ್ಕೆ ನಿಂತನು. ಅವನು ಈಗ ಬಹಳ ಕ್ಷಿಪ್ರವಾಗಿ ನಿರುತ್ಸಾಹ ಅನುಭವಿಸುತ್ತಾನೆ. ನಡೆಯೋದು ಅವನಿಗೆ ಮಕ್ಕಳಾಟದಂತೆ ತೋರಿತು. ತನ್ನ ಕೋಲನ್ನು ಬೀಸುತ್ತಾ ಅವನು ದಿನವೊಂದಕ್ಕೆ ನಲವತ್ತರಿಂದ ಐವತ್ತು ಮೈಲು ನಡೆದ.

ಎಲಿಶ್ ಮನೆ ತಲುಪಿದಾಗ ಸುಗ್ಗಿ ಮುಗಿದಿತ್ತು. ಅವನ ಕುಟುಂಬದ ಸದಸ್ಯರು ಅವನನ್ನು ನೋಡಿ ಖುಶಿಪಟ್ಟರು. ಯಾಕೆ ಹಾಗಾಯಿತೆಂದು ತಿಳಿಯಲು ಬಯಸಿದರು. ಅವನು ಹೇಗೆ ಮತ್ತು ಏಕೆ ಹಿಂದುಳಿದ? ಜೆರುಸಲೆಂ ತಲುಪದೆ ಯಾಕೆ ಹಿಂತಿರುಗಿದ? ಎಂದು ಕೇಳಿದರು. ಆದರೆ ಎಲಿಶ್ ಅವರಿಗೆ ಏನನ್ನೂ ಹೇಳಲಿಲ್ಲ.

"ನಾನು ಅಲ್ಲಿಗೆ ಬರೋದು ದೇವರಿಗೆ ಬೇಕಾಗಿದ್ದಿಲ್ಲ. ದಾರಿಯಲ್ಲಿ ನಾನು ಹಣ ಕಳೆದುಕೊಂಡೆ. ನನ್ನ ಸ್ನೇಹಿತನಿಗಿಂತ ಬಹಳ ಹಿಂದುಳಿದು ಬಿಟ್ಟೆ. ದೇವರಿಗಾಗಿ ನನ್ನನ್ನು ಕ್ಷಮಿಸಿರಿ!" ಎಂದು ಹೇಳಿದ.

ತನ್ನಲ್ಲಿ ಉಳಿದ ಹಣವನ್ನು ಎಲಿಶ್ ತನ್ನ ವೃದ್ಧ ಹೆಂಡತಿಗೆ ಕೊಟ್ಟ. ಆಮೇಲೆ ಮನೆಯ ವ್ಯವಹಾರದ ಬಗ್ಗೆ ಅವರನ್ನು ವಿಚಾರಿಸಿದ. ಎಲ್ಲವೂ ಚೆನ್ನಾಗಿಯೇ ನಡೆದಿತ್ತು. ಎಲ್ಲ ಕೆಲಸ-ಕಾರ್ಯವನ್ನು ಮಾಡಲಾಗಿದ್ದು, ಯಾವುದನ್ನೂ ನಿರ್ಲಕ್ಷಿಸಿರಲಿಲ್ಲ. ಎಲ್ಲರೂ ಶಾಂತಿಯಿಂದ ಬದುಕುತ್ತಿದ್ದರು.

ಎಫಿಮನ ಕುಟುಂಬದವರು ಎಲಿಶ್ ಹಿಂತಿರುಗಿ ಬಂದ ಸಮಾಚಾರ ತಿಳಿದು ಎಫಿಮನ ಬಗ್ಗೆ ಸುದ್ದಿ ತಿಳಿಯಲು ಬಂದರು. ಎಲಿಶ್ ಅವರಿಗೂ ಅದೇ ಉತ್ತರ ಕೊಟ್ಟ.

"ಎಫಿಮ್ ಬಹಳ ವೇಗವಾಗಿ ನಡೆಯುತ್ತಿದ್ದ. ಸಂತ ಪೀಟರ್‌ನ ದಿನಕ್ಕಿಂತ

ಮೂರು ದಿನ ಮುಂಚೆಯೇ ನಾವು ಪರಸ್ಪರ ಬೇರೆಯಾದೆವು. ನಾನು ಅವನನ್ನು ಪುನಃ ಸೇರಿಕೊಳ್ಳಲು ಬಹಳ ಪ್ರಯತ್ನಿಸಿದೆ. ಆದರೆ ಈ ಮಧ್ಯ ಬೇರೆ ಬೆಳವಣಿಗೆ ನಡೆಯಿತು. ನಾನು ಹಣ ಕಳೆದುಕೊಂಡೆ. ಪ್ರಯಾಣ ಮುಂದುವರಿಸಲು ಬೇರೆ ಉಪಾಯವೇ ಇರಲಿಲ್ಲ. ಹೀಗಾಗಿ ನಾನು ಹಿಂತಿರುಗಿದೆ."

ತುಂಬ ಸಂವೇದನಾಶೀಲನಾದ ಈ ಮನುಷ್ಯ ಮೂರ್ಖನಂತೆ ವರ್ತಿಸಿದ್ದುದು, ಮನೆಯಿಂದ ಹೊರಟು ತನ್ನ ಗುರಿ ತಲುಪದಿದ್ದುದು, ತನ್ನ ಎಲ್ಲಾ ಹಣವನ್ನು ದುಂದು ಮಾಡಿದ್ದುದು ಕಂಡು ಜನರು ವಿಸ್ಮಯಪಟ್ಟರು. ಕೆಲಕಾಲ ಈ ಬಗ್ಗೆ ಅವರು ಆಶ್ಚರ್ಯಚಕಿತರಾದರು. ಆಮೇಲೆ ಎಲ್ಲವನ್ನೂ ಮರೆತುಬಿಟ್ಟರು. ಎಲಿಶ್ ಕೂಡ ಅದನ್ನು ಮರೆತು ಮತ್ತೆ ಮನೆಗೆಲಸದಲ್ಲಿ ತೊಡಗಿದ. ಚಳಿಗಾಲ ಬರಲು ಮಗನ ಸಹಾಯದಿಂದ ಕಟ್ಟಿಗೆ ಕಡಿದು ಹಾಕಿದ. ಹೆಣ್ಣುಮಕ್ಕಳ ಜೊತೆಗೂಡಿ ಅವನು ತೆನೆ ಬಡಿದ. ಹಿತ್ತಲಮನೆಯ ಮೇಲಿನ ಹುಲ್ಲಿನ ಹೊದಿಕೆಯನ್ನು ದುರಸ್ತಿಗೊಳಿಸಿದ, ಜೇನುನೊಣಗಳನ್ನು ಮುಚ್ಚಳದಲ್ಲಿಟ್ಟ. ಶರತ್ಕಾಲದಲ್ಲಿ ತಾನು ಮಾರಿದ್ದ ಹತ್ತು ಜೇನುತಟ್ಟೆ ಮತ್ತು ಅಲ್ಲಿಗೆ ಬಂದಿದ್ದ ಎಲ್ಲಾ ಜೇನುನೊಣಗಳನ್ನು ತನ್ನ ನೆರೆಯವನಿಗೆ ಕೊಟ್ಟ. ಈ ಜೇನು ತಟ್ಟೆಗಳಿಂದ ಎಷ್ಟು ಜೇನುನೊಣಗಳು ಬಂದಿವೆಯೆಂದು ಅವನ ಹೆಂಡತಿ ಹೇಳಿರಲಿಲ್ಲ. ಆದರೆ ತಾನು ಮಾರಿದ ತಟ್ಟೆಗಳಿಗೆ ಎಷ್ಟು ಬಂದಿವೆ ಮತ್ತು ಮಿಕ್ಕಿದವುಗಳಿಗೆ ಎಷ್ಟು ಬಂದಿವೆಯೆಂಬುದನ್ನು ಎಲಿಶ್ ಗೊತ್ತುಪಡಿಸಿಕೊಂಡ. ಹತ್ತರ ಬದಲಿಗೆ ಹದಿನೇಳು ತಟ್ಟೆಗಳನ್ನು ತನ್ನ ನೆರೆಯವನಿಗೆ ಅವನು ಕೊಟ್ಟ. ಚಳಿಗಾಲಕ್ಕಾಗಿ ಎಲ್ಲ ಸಿದ್ಧತೆ ಮಾಡಿಕೊಂಡಾದ ಮೇಲೆ ಎಲಿಶ್ ಕೆಲಸಕ್ಕಾಗಿ ತನ್ನ ಮಗನನ್ನು ದೂರ ಅಟ್ಟಿದ. ತಾನು ಮರದ ತೊಗಟೆಯಿಂದ ಚಪ್ಪಲಿಯನ್ನು ಹೆಣೆಯತೊಡಗಿದ ಹಾಗೂ ಜೇನುತಟ್ಟೆಗಳಿಗಾಗಿ ಕಟ್ಟಿಗೆಯ ತುಂಡಿನ ಮೇಲೆ ತೂತು ಕೊರೆಯತೊಡಗಿದ.

೮

ಇಡೀ ಒಂದು ದಿನ ಎಲಿಶ್ ಬೇನೆಬಿದ್ದ ಜನರ ಜೊತೆ ಗುಡಿಸಲಿನಲ್ಲೇ ಕಳೆದ. ಎಫಿಮ್ ಅವನಿಗಾಗಿ ಕಾದ. ಎಲ್ಲಾದರೂ ಕುಳಿತುಕೊಳ್ಳುವ ಮೊದಲು ಅವನು ಸ್ವಲ್ಪ ದೂರ ಕ್ರಮಿಸಿದ. ಅವನು ಕಾದೇ ಕಾದ. ಜೋಂಪು ಹತ್ತಿತು, ಮತ್ತೆ ಎದ್ದು ಕುಳಿತ, ಮತ್ತೆ ಅವನಿಗಾಗಿ ಕಾದ. ಆದರೆ ಅವನ ಜತೆಗಾರ ಬರಲಿಲ್ಲ. ತನ್ನ ಕಣ್ಣು ನೋಯುವವರೆಗೆ ಅವನು ದಿಟ್ಟಿಸಿದ. ಗಿಡದ ಹಿಂದೆ ಸೂರ್ಯ ಮುಳುಗುತ್ತಿದ್ದ. ಆದರೆ ಎಲಿಶ್ ಮಾತ್ರ ಎಲ್ಲೂ ಕಾಣಲಿಲ್ಲ.

"ಪ್ರಾಯಶಃ ಅವನು ನನ್ನ ಹಿಂದೆ ಹಾಕಿ ಮುಂದೆ ಹೋಗಿರಬೇಕು ಅಥವಾ ಯಾರಾದರೂ ಅವನಿಗೆ ಲಿಫ್ಟ್ ಕೊಟ್ಟಿರಬೇಕು; ನಾನು ಮಲಗಿದಾಗ ನನ್ನನ್ನು ನೋಡದೆ ಅವನು ಮುಂದೆ ಹೋಗಿರಬೇಕು. ಆದರೆ ಅವನು ನನ್ನನ್ನು ನೋಡದೆ ಹೋಗಲು ಹೇಗೆ ಸಾಧ್ಯವಿದೆ? ನಾನು ಹಿಂತಿರುಗಿ ಹೋಗಲೆ? ಅವನು ಒಂದು ವೇಳೆ ನನಗಿಂತ ಮುಂದೆ ಇದ್ದರೆ ನಾವು ಕೊನೆಗೂ ಪರಸ್ಪರ ತಪ್ಪಿಸಿಕೊಳ್ಳುತ್ತೇವೆ. ಹಾಗಾದರೆ ಇನ್ನೂ

ಕೆಟ್ಟದ್ದಾಗುತ್ತದೆ. ನಾನು ಮುಂದೆ ಹೋಗುವುದೇ ವಾಸಿ. ರಾತ್ರಿ ಕಳೆಯಲು ತಂಗಿದಾಗ ಇಬ್ಬರ ಭೇಟಿಯಾದರೂ ಆಗಬಹುದು" ಎಂದು ಎಫಿಮ್ ವಿಚಾರಿಸಿದ.

ಅವನು ಒಂದು ಹಳ್ಳಿಗೆ ಬಂದು ತಲುಪಿದ. ತನ್ನ ಜತೆಗಾರನನ್ನು ಬಣ್ಣಿಸುತ್ತಾ ಈ ರೀತಿ ಕಾಣುವ ವೃದ್ಧನೇನಾದರೂ ಈ ಕಡೆಗೆ ಬಂದರೆ ತಾನು ಇಳಿದುಕೊಂಡ ಮನೆಗೆ ಕರೆತರುವಂತೆ ಕಾವಲುಗಾರನಿಗೆ ಹೇಳಿದ. ಆದರೆ ಆ ರಾತ್ರಿ ಎಲಿಶ್ ಬರಲಿಲ್ಲ. ದಾರಿಯ ಮೇಲೆ ಭೇಟಿಯಾದ ಎಲ್ಲರನ್ನೂ ಬೋಕ್ಕಲು ತಲೆಯ, ಗಿಡ್ಡ, ವೃದ್ಧ ಮನುಷ್ಯನನ್ನು ಎಲ್ಲಾದರೂ ಭೆಟ್ಟಿಯಾಗಿದ್ದೀರಾ? ಎಂದು ಕೇಳುತ್ತಾ ಎಫಿಮ್ ನಡೆದ. ಆದರೆ ಯಾರೂ ಅಂಥ ಪಯಣಿಗನನ್ನು ನೋಡಿರಲಿಲ್ಲ. ಒಬ್ಬನೆ ಹೋಗುತ್ತ ಎಫಿಮ್ ಅಂದುಕೊಂಡ "ನಾವು ಓಡೆಸಾದಲ್ಲಿ ಖಂಡಿತವಾಗಿ ಭೇಟಿಯಾಗ್ತೀವೆ ಅಥವಾ ಹಡಗಿನಲ್ಲಿಯಾದರೂ." ಅವನು ಈ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳಲಿಲ್ಲ. ನಿಲುವಂಗಿ ಧರಿಸಿದ ಉದ್ದ ಕೂದಲಿನ, ಪಾದ್ರಿ ಧರಿಸುವಂಥ ಟೊಪ್ಪಿಗೆ ಹಾಕಿಕೊಂಡ ಒಬ್ಬ ಯಾತ್ರಿಕ ದಾರಿಯಲ್ಲಿ ಅವನಿಗೆ ಎದುರಾದ. ಈ ಯಾತ್ರಿಕ ಮೌಂಟ್ ಅಥೋಸ್‌ಕ್ಕೆ ಹೋಗಿದ್ದ. ಈಗ ಎರಡನೆಯ ಬಾರಿಗೆ ಜೆರುಸಲೆಂಗೆ ಹೊರಟಿದ್ದಾನೆ. ಮರುದಿನ ಇಬ್ಬರು ಒಂದು ರಾತ್ರಿ ಒಂದೇ ಸ್ಥಳದಲ್ಲಿ ನಿಂತರು. ಇಬ್ಬರು ಕೂಡಿಯೇ ಯಾತ್ರೆಯನ್ನು ಮುಂದುವರಿಸಿದರು.

ಅವರು ಸುರಕ್ಷಿತವಾಗಿ ಓಡೆಸ್ಸಾಕ್ಕೆ ಬಂದು ತಲುಪಿದರು. ಅಲ್ಲಿ ಹಡಗಿಗಾಗಿ ಮೂರು ದಿನ ಕಾಯಬೇಕಾಗಿ ಬಂತು. ಬೇರೆ ಬೇರೆ ಭಾಗದಿಂದ ಬಂದ ಬಹುತೇಕ ಯಾತ್ರಿಕರ ಪರಿಸ್ಥಿತಿಯೂ ಇದೇ ಆಗಿತ್ತು. ಎಫಿಮ್ ಮತ್ತೆ ಎಲಿಶನ ಬಗ್ಗೆ ವಿಚಾರಿಸಿದ. ಆದರೆ ಎಲ್ಲರೂ ಅವನನ್ನು ಕಂಡಿಲ್ಲವೆಂದು ಹೇಳಿದರು.

ಎಫಿಮ್ ಒಂದು ಪರದೇಶದ ಪಾಸ್‌ಪೋರ್ಟ್ ಪಡೆದುಕೊಂಡ. ಅದಕ್ಕೆ ಐದು ರೂಬೆಲ್ ಹಣ ಕೊಟ್ಟ. ಜೆರುಸಲೆಂಗೆ ಹೋಗಿ ಬರುವ ಟಿಕೇಟ್‌ಗಾಗಿ ನಲವತ್ತು ರೂಬೆಲ್ ಕೊಟ್ಟ. ಪ್ರವಾಸದಲ್ಲಿ ತಿನ್ನಲು ಬ್ರೆಡ್ ಮತ್ತು ಮೀನು ತೆಗೆದುಕೊಂಡ.

ಒಬ್ಬ ಯಾತ್ರಿಕ ಚಾರ್ಜ್ ಕೊಡದೆ ಹೇಗೆ ತಾನು ಹಡಗಿನಲ್ಲಿ ಪ್ರಯಾಣ ಮಾಡಬಹುದು? ಎಂಬುದನ್ನು ಎಫಿಮನಿಗೆ ವಿವರಿಸಲು ಶುರುಮಾಡಿದ. ಆದರೆ ಎಫಿಮ್ ಕೇಳಲಿಲ್ಲ. " ಇಲ್ಲ, ನಾನು ಚಾರ್ಜ್ ಕೊಡಲು ಸಿದ್ಧವಾಗೇ ಇಲ್ಲಿಗೆ ಬಂದಿದ್ದೇನೆ ಮತ್ತು ನಾನು ಕೊಟ್ಟೇ ಕೊಡುತ್ತೇನೆ" ಎಂದು ಹೇಳಿದ. ಹಡಗು ಭರ್ತಿಯಾಗಿತ್ತು, ಯಾತ್ರಿಕರು ಹಡಗನ್ನೇರಿ ಕುಳಿತರು. ಎಫಿಮ್ ಮತ್ತು ಅವನ ಹೊಸ ಸ್ನೇಹಿತ ಕೂಡ ಹಡಗನ್ನೇರಿದರು. ಹಡಗು ಚಲಿಸಿತು.

ಅವರು ದಿನವೆಲ್ಲ ಸುಸೂತ್ರವಾಗಿ ಸಮುದ್ರಯಾನ ಮಾಡಿದರು. ರಾತ್ರಿಯ ಸುಮಾರಿಗೆ ಗಾಳಿ ಎದ್ದಿತು. ಮಳೆ ಬಂದೇ ಬಿಟ್ಟಿತು. ಹಡಗು ನೀರಿನ ಮೇಲೆ ಹೊಯ್ದಾಡಿತು. ಜನರು ಭಯಭೀತಗೊಂಡರು. ಮಹಿಳೆಯರು ಅತ್ತರು, ಚೀರಿದರು. ಕೆಲವು ಅಂಜುಬುರುಕ ಜನರು ಆಶ್ರಯಕ್ಕಾಗಿ ಹಡಗಿನ ತುಂಬ ಓಡಾಡಿದರು. ಎಫಿಮ್ ಕೂಡ ಭಯಪಟ್ಟ. ಆದರೆ ಅವನು ತೋರಿಸಿಕೊಡಲಿಲ್ಲ. ಟಾಂಬವ್‌ನಿಂದ ಬಂದ

ಕೆಲವು ವೃದ್ಧರ ಪಕ್ಕದಲ್ಲಿ ಕುಳಿತ. ಹಡಗಿನಲ್ಲಿ ಬಂದ ಮೇಲೆ ಅವನು ಯಾವ ಸ್ಥಳದಲ್ಲಿ ಕುಳಿತಿದ್ದನೋ ಈಗಲೂ ಅಲ್ಲಿಯೇ ಕುಳಿತಿದ್ದಾನೆ. ರಾತ್ರಿಯುದ್ದಕ್ಕೂ, ಮಾರನೆಯ ದಿನದುದ್ದಕ್ಕೂ ತಮ್ಮ ಚೀಲಗಳನ್ನು ತೋಳಿನಲ್ಲಿ ಒತ್ತಿ ಹಿಡಿದು ಅವರು ಅಲ್ಲೇ ಮೌನವಾಗಿ ಕುಳಿತರು. ಮೂರನೆಯ ದಿನ ಎಲ್ಲ ಶಾಂತವಾಯಿತು. ಐದನೆಯ ದಿನ ಅವರು ಕಾನ್‌ಸ್ಟಾಂಟಿನೋಪಲ್ ಬಂದರನ್ನು ತಲುಪಿದರು. ಈಗ ತುರ್ಕರ ಅಧೀನದಲ್ಲಿರುವ ಸಂತಸೂಫಿಯಾಳ ಚರ್ಚ್ ನೋಡಲೆಂದು ಕೆಲವು ಜನ ಯಾತ್ರಿಕರು ದಡದ ಮೇಲೆ ಬಂದರು. ಆದರೆ ಎಫಿಮ್ ಹಡಗಿನಲ್ಲಿಯೇ ಉಳಿದ. ಸ್ವಲ್ಪ ಬೆಳ್ಳಗಿನ ಬ್ರೆಡ್ ಖರೀದಿಸಿದ. ಅಲ್ಲಿ ಅವರು 24 ಗಂಟೆ ಉಳಿದರು. ಹಡಗು ಮತ್ತೆ ಸಮುದ್ರದೊಳಗೆ ಹೋಯಿತು. ಅವರು ಮತ್ತೆ ಸ್ಮಾರರ್ನಾದಲ್ಲಿ ಹಾಗೂ ಅಲೆಕ್ಸಾಂಡ್ರೆಟಾದಲ್ಲಿ ನಿಂತರು. ಕೊನೆಗೆ ಅವರು ಸುರಕ್ಷಿತವಾಗಿ ಜಾಫಾಕ್ಕೆ ಬಂದರು. ಅಲ್ಲಿ ಯಾತ್ರಿಕರೆಲ್ಲ ಹಡಗಿನಿಂದ ಕೆಳಗಿಳಿದರು. ಅಲ್ಲಿಂದ ಜೆರುಸಲೆಂಗೆ ಹೋಗಲು ನಾಲ್ಕು ಮೈಲು ರಸ್ತೆಯ ಮಾರ್ಗವಾಗಿ ಹೋಗಬೇಕಿತ್ತು. ಹಡಗಿನಿಂದ ಇಳಿಯುವಾಗ ಜನರು ಮತ್ತೆ ಭಯಪಟ್ಟುಕೊಂಡರು. ಹಡಗು ತುಂಬ ಎತ್ತರವಾಗಿತ್ತು. ಜನರನ್ನು ಚಿಕ್ಕ ದೋಣಿಯಲ್ಲಿ ಇಳಿಸಲಾಯಿತು. ದೋಣಿ ನೀರಿನ ಮೇಲೆ ತೊಟ್ಟಿಲು ತೂಗಿದ ಹಾಗೆ ತೂಗುತ್ತಿತ್ತು. ಗುರಿ ತಪ್ಪಿ ನೀರಿನಲ್ಲಿ ಬಿದ್ದರೆ ಗತಿಯೇನೆಂದು ಜನರು ಭಯಗೊಂಡರು. ಒಂದಿಬ್ಬರು ಒದ್ದೆಯಾದರು ಕೂಡ. ಆದರೆ ಕೊನೆಗೆ ಎಲ್ಲರೂ ಸುರಕ್ಷಿತವಾಗಿ ಇಳಿದರು.

ಅವರು ಕಾಲ್ನಡಿಗೆಯ ಮೇಲೆ ಹೋದರು. ಮಾರನೆಯ ದಿನ ಮಧ್ಯಾಹ್ನದ ಹೊತ್ತಿಗೆ ಅವರು ಜೆರುಸಲೆಂಗೆ ಬಂದು ತಲುಪಿದರು. ಅವರು ಪಟ್ಟಣದ ಹೊರಗಿರುವ ರಶಿಯನ್ ಹೊಟೇಲ್‌ನಲ್ಲಿ ನಿಂತರು. ಅಲ್ಲಿ ಅವರ ಪಾಸ್‌ಪೋರ್ಟ್‌ಗಳನ್ನು ತಪಾಸಣಾ ಮಾಡಲಾಯಿತು. ಊಟವಾದ ಮೇಲೆ ಎಫಿಮ್ ತನ್ನ ಸಹಯಾತ್ರಿಕನ ಜೊತೆಗೂಡಿ ಪವಿತ್ರ ಸ್ಥಳಗಳಿಗೆ ಭೇಟಿ ಕೊಟ್ಟನು. ಪವಿತ್ರ ಸಮಾಧಿಗೆ ಭೇಟಿ ಕೊಡುವ ಹೊತ್ತು ಅದಾಗಿರಲಿಲ್ಲ. ಆದರೆ ಅವರು ಚರ್ಚ್‌ಗೆ ಹೋದರು. ಎಲ್ಲಾ ಯಾತ್ರಿಕರು ಅಲ್ಲಿ ಸೇರಿಕೊಂಡರು. ಮಹಿಳೆಯರನ್ನು ಪುರುಷರಿಂದ ಪ್ರತ್ಯೇಕವಾಗಿ ಕೂಡ್ರಿಸಲಾಗಿತ್ತು. ವೃತ್ತಾಕಾರದಲ್ಲಿ, ಬರಿಗಾಲಲ್ಲಿ ಕೂಡ್ರಲು ಅವರಿಗೆ ತಿಳಿಸಲಾಗಿತ್ತು. ಒಬ್ಬ ಯತಿ ಒಂದು ಟವಲು ಹಿಡಿದುಕೊಂಡು ಅವರ ಪಾದ ತೊಳೆಯಲು ಬಂದ. ಅವರ ಪಾದಗಳನ್ನು ತೊಳೆದು, ಒರಿಸಿ ಮುದ್ದಿಸಿದ. ವರ್ತುಲದಲ್ಲಿ ಕುಳಿತ ಎಲ್ಲರಿಗೂ ಹೀಗೆಯೇ ಮಾಡಿದ. ಎಲ್ಲರೊಂದಿಗೆ ಎಫಿಮನ ಕಾಲುಗಳನ್ನೂ ಅವನು ತೊಳೆದು ಮುದ್ದಿಸಿದ. ಅವನು ಪ್ರಾತಃಸ್ಮರಣೆ ಹಾಗೂ ಸಾಯಂಕಾಲದ ಪ್ರಾರ್ಥನೆಯಲ್ಲಿ ಪಾಲ್ಗೊಂಡು ಪ್ರಾರ್ಥನೆ ಸಲ್ಲಿಸಿದ. ಸಮಾಧಿಗಳ ಹತ್ತಿರ ಮೋಂಬತ್ತಿ ಹೊತ್ತಿಸಿದ. ಅವರಿಗೆ ಚರ್ಚ್‌ನಲ್ಲಿ ನಡೆಯುವ ಪ್ರಾರ್ಥನೆಗಳಲ್ಲಿ ತನ್ನ ಪಾಲಕರ ಹೆಸರನ್ನು ಪ್ರಸ್ತಾಪಿಸಲು ಹಾಳೆಯ ಮೇಲೆ ತನ್ನ ಪಾಲಕರ ಹೆಸರು ಬರೆದು ಕೊಟ್ಟ. ಚರ್ಚ್‌ನಲ್ಲಿ ಆಹಾರ ಹಾಗೂ ಮದ್ಯವನ್ನು ಕೊಟ್ಟರು. ಮಾರನೆಯ ದಿನ ಈಜಿಪ್ಟಿನ ಮೇರಿಯ ದೇವಸ್ಥಾನಕ್ಕೆ ಹೋದರು. ಅವಳು

ಅಲ್ಲಿ ತಪಸ್ಸು ಮಾಡುತ್ತಾ ಕಾಲ ಕಳೆದಿದ್ದಳು. ಅಲ್ಲೂ ಕೂಡ ಅವರು ಮೋಂಬತ್ತಿ ಹೊತ್ತಿಸಿ ಪ್ರಾರ್ಥನೆ ಸಲ್ಲಿಸಿದರು. ಅಲ್ಲಿಂದ ಅವರು ಅಬ್ರಾಹಿಂನ ಆಶ್ರಮಕ್ಕೆ ಹೋದರು. ಅಬ್ರಾಹಿಂ ತನ್ನ ಮಗನನ್ನು ದೇವರಿಗೆ ಬಲಿಕೊಡಲು ನಿರ್ಧರಿಸಿದ್ದ ಸ್ಥಳವನ್ನು ಅವರು ವೀಕ್ಷಿಸಿದರು. ಮೇರಿ ಮ್ಯಾಗಡಲೆನ್‌ಳಿಗೆ ಏಸು ಕಾಣಿಸಿಕೊಂಡ ಸ್ಥಳಕ್ಕೆ ಅವರು ಭೇಟಿ ಕೊಟ್ಟರು. ಏಸುವಿನ ಸಹೋದರನಾದ ಜೇಮ್ಸ್‌ನ ಚರ್ಚ್‌ಗೆ ಹೋದರು. ಆ ಯಾತ್ರಿಕ ಎಫಿಮನಿಗೆ ಈ ಎಲ್ಲಾ ಸ್ಥಳಗಳನ್ನು ತೋರಿಸಿದ ಹಾಗೂ ಎಲ್ಲೆಲ್ಲಿ ಎಷ್ಟೆಷ್ಟು ಹಣ ಕೊಡಬೇಕೆಂಬುದನ್ನು ಹೇಳಿಕೊಟ್ಟ. ಅವರು ಮಧ್ಯಾಹ್ನ ಹೋಟೆಲ್‌ಗೆ ಹಿಂತಿರುಗಿ ಊಟ ಮಾಡಿದರು. ವಿಶ್ರಾಂತಿ ಪಡೆಯಲು ಮಲಗಲು ಅವರು ಸಿದ್ಧರಾಗುತ್ತಿದ್ದಂತೆ ಯಾತ್ರಿಕ ಚಿಟ್ಟನೆ ಚೀರಿ ತನ್ನ ಮೈಮೇಲಿನ ಬಟ್ಟೆಯಲ್ಲಿ ಕೈಯಾಡಿಸುತ್ತಾ ತಡಕಾಡಲಾರಂಭಿಸಿದ.

"ನನ್ನ ಪರ್ಸ್ ಕಳುವಾಗಿದೆ. ಅದರಲ್ಲಿ ಇಪ್ಪತ್ತು ರೂಬೆಲ್ ಹಣವಿತ್ತು; ಎರಡು ಹತ್ತು ರೂಬೆಲ್ ನೋಟಗಳು, ಮಿಕ್ಕಿದ್ದು ಚಿಲ್ಲರೆ ಇತ್ತು" ಎಂದು ಅವನು ಹೇಳಿದ. ಅವನು ನಿಟ್ಟುಸಿರು ಬಿಟ್ಟು ಬಹಳ ದುಃಖಿಸಿದ. ಆದರೆ ಯಾರಿಂದಲೂ ಸಹಾಯ ಬರಲಿಲ್ಲ. ಎಲ್ಲರೂ ಮಲಗಿದರು.

೯

ಎಫಿಮ್ ಮಲಗಿದ್ದಾಗ ಒಂದು ಪ್ರಲೋಭನೆ ಅವನ ಮನಸ್ಸಿನ ಮೇಲೆ ದಾಳಿ ಮಾಡಿತು.

"ಈ ಯಾತ್ರಿಕನ ಹಣವನ್ನು ಯಾರೂ ಕದ್ದಿಲ್ಲ. ಅವನ ಹತ್ತಿರ ಹಣವಿತ್ತೆಂದು ನಾನು ನಂಬಲಾರೆ. ಅವನು ಎಲ್ಲೂ ಯಾರಿಗೂ ಏನನ್ನೂ ಕೊಟ್ಟಿಲ್ಲ. ನನ್ನ ಕೈಯಿಂದಲೇ ಎಲ್ಲಾ ಕೊಡಿಸಿದ. ನನ್ನಿಂದ ಒಂದು ರೂಬೆಲ್ ಹಣ ಕೈಗಡ ಇಸಿದುಕೊಂಡಿದ್ದಾನೆ" ಎಂದು ವಿಚಾರಿಸಿದ. ಈ ವಿಚಾರ ಅವನ ತಲೆಯಲ್ಲಿ ಬಂದಿದ್ದೇ ತಡ, ಎಫಿಮ್ ತನ್ನನ್ನೇ ಬೈದುಕೊಂಡ. "ಒಬ್ಬ ಮನುಷ್ಯನ ಬಗ್ಗೆ ತೀರ್ಪು ಕೊಡಲು ನನಗೆ ಯಾವ ಹಕ್ಕಿದೆ? ಇದು ಪಾಪ. ನಾನು ಈ ಬಗ್ಗೆ ಚಿಂತಿಸುವುದು ಸರಿಯಲ್ಲ." ಅವನ ವಿಚಾರಲಹರಿ ಹರಿಯುತ್ತಿದ್ದಂತೆಯೇ ಅವನ ಲಕ್ಷ್ಯ ತಿರುಗಿ ಯಾತ್ರಿಕನ ಕಡೆಗೆ ಹೋಯಿತು. ಹಣದಲ್ಲಿ ಅವನಿಗೆ ತುಂಬ ಆಸಕ್ತಿ ಇರುವಂತೆ ತೋರುತ್ತದೆ. ತನ್ನ ಹಣ ಕಳುವಾಗಿದೆಯೆಂದು ಅವನು ಹೇಳಿದಾಗ ಅದು ಅಸಾಧ್ಯವಾದ ಮಾತು ಎಂದು ಅನಿಸಿತು. "ಅವನ ಹತ್ತಿರ ಹಣ ಇದ್ದಿರಲಿಲ್ಲ. ಅವನು ಇದೆಲ್ಲವನ್ನು ಸುಳ್ಳೆ ಹುಟ್ಟಿಸಿದ್ದಾನೆ" ಎಂದು ಎಫಿಮ್ ವಿಚಾರಿಸಿದ.

ಸಂಜೆಯ ಹೊತ್ತಿಗೆ ಅವರು ಎದ್ದರು. ಪುನರುತ್ಥಾನದ ದೊಡ್ಡ ಚರ್ಚ್‌ನಲ್ಲಿ ಮಧ್ಯರಾತ್ರಿಯಲ್ಲಿ ಜರುಗುವ ಧರ್ಮಸಮಾಜಕ್ಕೆ ಅವರು ಹೋದರು. ದೇವರ ಚರ್ಚ್ ಅಲ್ಲಿಯೇ ಇತ್ತು. ಆ ಯಾತ್ರಿಕ ಎಫಿಮನ ಹತ್ತಿರವೇ ಉಳಿದ. ಅವನು ಎಲ್ಲಿಗೇ

ಹೋಗಲಿ, ಯಾತ್ರಿಕನೂ ಅವನ ಜತೆಗೆ ಹೋದ. ಅವರು ಚರ್ಚ್‌ಗೆ ಬಂದರು. ಬಹಳ ಜನ ಯಾತ್ರಿಕರು ಅಲ್ಲಿದ್ದರು. ರಶಿಯನ್ನರು, ಗ್ರೀಕರು, ಅರ್ಮೆನಿಯಾದವರು, ಟರ್ಕರು ಹಾಗೂ ಸಿರಿಯಾದವರು ಅಲ್ಲಿ ಸೇರಿದ್ದರು. ಎಫಿಮ್ ಜನರ ಗುಂಪಿನೊಟ್ಟಿಗೆ ಪವಿತ್ರ ಗೇಟ್ ಪ್ರವೇಶಿಸಿದ. ಒಬ್ಬ ಯತಿ ಟರ್ಕರ ಕಾವಲುಗಾರನನ್ನು ದಾಟಿ ಶಿಲುಬೆಯಿಂದ ಏಸುನನ್ನು ಕೆಳಗಿಳಿಸಿ, ಅವನ ದೇಹಕ್ಕೆ ಲೇಪನ ಹಚ್ಚಿದ ಸ್ಥಳಕ್ಕೆ ಯಾತ್ರಿಕರನ್ನು ಕರೆದುಕೊಂಡು ಹೋದ. ಅಲ್ಲಿ ಒಂಭತ್ತು ಬೃಹತ್ ಕಂಬದಲ್ಲಿ ಮೋಂಬತ್ತಿಗಳು ಉರಿಯುತ್ತಿದ್ದವು. ಯತಿ ಎಫಿಮನನ್ನು ಬಲಕ್ಕೆ ತಿರುಗಿಸಿ ಗೊಲ್ಗೊಥಾದ ಪಾವಟಣಿಗೆಯವರೆಗೆ, ಶಿಲುಬೆ ಇರಿಸಿದ ಸ್ಥಳಕ್ಕೆ ಕರೆದುಕೊಂಡು ಹೋದ. ಅಲ್ಲಿ ಎಫಿಮ್ ಪ್ರಾರ್ಥಿಸಿದ. ಪಾತಾಳದವರೆಗೂ ಬಿರುಕು ಬಿಟ್ಟ ಸ್ಥಳಕ್ಕೆ, ಆಮೇಲೆ ಶಿಲುಬೆಗಳ ಮೇಲೆ ಏಸುವಿನ ರಕ್ತ ಹನಿ ಹನಿಯಾಗಿ ಸುರಿದ ಆ್ಯದಮ್‌ನ ಸಮಾಧಿಗೆ ಯತಿ ಅವರನ್ನು ಕರೆದುಕೊಂಡು ಹೋದ. ಆಮೇಲೆ ತಲೆಯ ಮೇಲೆ ಮುಳ್ಳಿನ ಕಿರೀಟ ಇಟ್ಟಾಗ ಏಸು ಕುಳಿತ ಕಲ್ಲನ್ನು ಹಾಗೂ ಚಾವಟಿಯಿಂದ ಹೊಡೆಯಲೋಸುಗ ಏಸುನನ್ನು ಕಟ್ಟಿ ಹಾಕಿದ ಮರದ ಕಂಬವನ್ನು ಅವರು ಎಫಿಮಗೆ ತೋರಿಸಿದರು. ಆಮೇಲೆ ಏಸುವಿನ ಪಾದಗಳಿಗಾಗಿ ಕಲ್ಲಿನ ಮೇಲೆ ಮಾಡಿದ ಎರಡು ರಂಧ್ರಗಳನ್ನು ಅವನು ನೋಡಿದ. ಅವರು ಅವನಿಗೆ ಇನ್ನೇನೋ ತೋರಿಸಲು ಕರೆದುಕೊಂಡು ಹೊರಟಾಗ, ಜನರಲ್ಲಿ ಗದ್ದಲ ಶುರುವಾಗಿ ದೇವರ ಚರ್ಚ್‌ನ ಕಡೆಗೆ ಎಲ್ಲರೂ ಓಡಿದರು. ಲ್ಯಾಟಿನ್ ಧರ್ಮಸಮಾಜ ಆಗತಾನೆ ಮುಗಿದು ರಶಿಯಾದವರ ಸಾರ್ವಜನಿಕ ಪೂಜೆ ಶುರುವಾಗುತ್ತಿತ್ತು. ಬಂಡೆಗಲ್ಲಿನ ಮೇಲೆ ಕೆತ್ತಲಾದ ಸಮಾಧಿಗೆ ಎಫಿಮ್ ಜನರ ಗುಂಪಿನೊಂದಿಗೆ ಹೋದ.

ಯಾತ್ರಿಕನಿಂದ ದೂರವಿರಲು ಅವನು ಪ್ರಯತ್ನಿಸಿದ. ಅವನ ವಿರುದ್ಧವಾಗಿ ಎಫಿಮ್ ಈಗಲೂ ತನ್ನ ಮನಸ್ಸಿನಲ್ಲಿ ಪಾಪವೆಸಗುತ್ತಿದ್ದಾನೆ. ಆದರೆ ಯಾತ್ರಿಕ ಅವನನ್ನು ಬಿಡುತ್ತಿಲ್ಲ. ಅವನೊಂದಿಗೆ ಚರ್ಚ್‌ನ ಹತ್ತಿರ ಜರುಗುವ ಧರ್ಮಸಮಾಜಕ್ಕೆ ಯಾತ್ರಿಕ ಹೋದ. ಅವರು ಮುಂದಿನ ಸಾಲಿನಲ್ಲಿರಲು ಪ್ರಯತ್ನಿಸಿದರು. ಆದರೆ ಅವರು ಬಹಳ ತಡವಾಗಿ ಬಂದಿದ್ದರು. ಅಲ್ಲಿ ಎಷ್ಟು ಜನರು ಸೇರಿದ್ದರೆಂದರೆ ಮುಂದೆ ಹೋಗುವುದಾಗಲಿ ಅಥವಾ ಹಿಂದೆ ಸರಿಯುವುದಾಗಲಿ ಸಾಧ್ಯವೇ ಇರಲಿಲ್ಲ. ಮುಂದಿನ ಸಾಲು ನೋಡುತ್ತಾ, ಪ್ರಾರ್ಥಿಸುತ್ತಾ ಆಗೊಮ್ಮೆ ಈಗೊಮ್ಮೆ ತನ್ನ ಪರ್ಸ್‌ನ್ನು ಮುಟ್ಟಿ ನೋಡಿಕೊಳ್ಳುತ್ತಾ ಎಫಿಮ್ ನಿಂತುಕೊಂಡ. ಅವನು ಸಂದಿಗ್ಧ ಸ್ಥಿತಿಯಲ್ಲಿದ್ದ. ಯಾತ್ರಿಕ ತನ್ನನ್ನು ಮೋಸಗೊಳಿಸುತ್ತಿದ್ದಾನೆಂದು ಒಮ್ಮೆ ಭಾವಿಸುತ್ತಿದ್ದ. ಯಾತ್ರಿಕ ನಿಜವೇ ಹೇಳಿದ್ದಿದ್ದರೆ, ಅವನ ಪರ್ಸ್ ನಿಜವಾಗಿಯೂ ಕಳುವಾಗಿದ್ದಿದ್ದರೆ ಅದು ತನ್ನ ಜೀವನದಲ್ಲೂ ಘಟಿಸಬಲ್ಲುದು ಎಂದುಕೊಂಡು ತನ್ನ ಪರ್ಸಿನ ಬಗ್ಗೆ ಹೆಚ್ಚಿನ ಕಾಳಜಿ ವಹಿಸಿದ.

## ೧೦

ಪವಿತ್ರ ಸಮಾಧಿ ಇರಿಸಿದ್ದ, ಮೇಲೆ ಮೂವತ್ತು ಮೋಂಬತ್ತಿ ಉರಿಯುತ್ತಿರುವ ಒಂದು ಚಿಕ್ಕ ಮಂದಿರದೊಳಗೆ ತೀಕ್ಷ್ಣವಾಗಿ ನೋಡುತ್ತಾ ಎಫಿಮ್ ನಿಂತ. ಜನರ ತಲೆಯ ಮೇಲಿನಿಂದ ನೋಡುತ್ತಾ ನಿಂತಾಗ ತಾನು ಆಶ್ಚರ್ಯಪಡುವಂಥ ದೃಶ್ಯವನ್ನು ಅವನು ಕಂಡ. ಪವಿತ್ರ ಜ್ವಾಲೆ ಉರಿಯುತ್ತಿರುವ ದೀಪಗಳ ಕೆಳಗೆ, ಎಲ್ಲರಿಗಿಂತ ಮೊದಲನೆಯ ಸಾಲಿನಲ್ಲಿ, ಬೂದಿ ಬಣ್ಣದ ಕೋಟು ಧರಿಸಿದ ಎಲಿಶ್‌ನ ತಲೆಯಂತೆ ಹೊಳೆಯುವ ತಲೆಯ ಒಬ್ಬ ವೃದ್ಧ ನಿಂತದ್ದನ್ನು ಎಫಿಮ್ ನೋಡಿದ.

"ಅವನಂತೇ ಇದ್ದಾನೆ. ಆದರೆ ಅವನು ಎಲಿಶ್ ಆಗಿರಲಿಕ್ಕಿಲ್ಲ. ಅವನು ನನಗಿಂತ ಮೊದಲು ಬಂದಿರಲು ಸಾಧ್ಯವೇ ಇಲ್ಲ. ಮೊದಲನೆಯ ಹಡಗು ನಮಗಿಂತ ಒಂದು ವಾರ ಮೊದಲು ಹೊರಟಿತ್ತು. ಅವನು ಆ ಹಡಗನ್ನು ಹಿಡಿದಿರಲು ಸಾಧ್ಯವೇ ಇಲ್ಲ. ಅವನು ನಮ್ಮ ಹಡಗಿನಲ್ಲಿ ಇರಲಿಲ್ಲ. ಯಾಕೆಂದರೆ ನಮ್ಮ ಹಡಗಿನಲ್ಲಿದ್ದ ಪ್ರತಿಯೊಬ್ಬ ಯಾತ್ರಿಕನನ್ನೂ ನಾನು ನೋಡಿದ್ದೇನೆ" ಎಂದು ವಿಚಾರಿಸಿದ.

ಎಫಿಮ್ ಹೀಗೆ ವಿಚಾರಿಸುತ್ತಿದ್ದಂತೆಯೇ ಗಿಡ್ಡ, ವೃದ್ಧ ಮನುಷ್ಯ ಪ್ರಾರ್ಥಿಸಲಾರಂಭಿಸಿದ. ಮೂರು ಬಾರಿ ಬಾಗಿದ–ಒಮ್ಮೆ ದೇವರ ಕಡೆಗೆ, ಒಮ್ಮೆ ಎರಡೂ ಕಡೆಗೆ– ಒಮ್ಮೆ ಸಹೋದರರ ಕಡೆಗೆ. ಅವನು ಬಲಕ್ಕೆ ತನ್ನ ತಲೆ ಹೊರಳಿಸುತ್ತಿದ್ದಂತೆಯೆ ಎಫಿಮ್ ಅವನನ್ನು ಗುರ್ತಿಸಿದ. ಅವನು ಎಲಿಶನೇ– ಅವನ ಕಪ್ಪಾದ ಗುಂಗುರು ಗಡ್ಡ ಕಪೋಲದ ಮೇಲೆ ಬೂದು ಬಣ್ಣಕ್ಕೆ ತಿರುಗುತ್ತಿತ್ತು. ಅವನ ಹುಬ್ಬು, ಕಣ್ಣು, ಮೂಗು– ಅವನ ಮುಖದ ಅಭಿವ್ಯಕ್ತಿ. ನಿಜ, ಅವನೇ ಇವನು!

ತನ್ನ ಸ್ನೇಹಿತನನ್ನು ಪುನಃ ಪತ್ತೆ ಹಚ್ಚಿದ್ದುದಕ್ಕಾಗಿ ಎಫಿಮನಿಗೆ ಬಹಳ ಖುಷಿಯಾಯಿತು. ಆದರೆ ಅವನು ತನಗಿಂತ ಮುಂದೆ ಇಲ್ಲಿಗೆ ಹೇಗೆ ಬಂದು ತಲುಪಿದ? ಎಂದು ಆಶ್ಚರ್ಯಪಟ್ಟನು. "ಸರಿಯಾಗಿ ಮಾಡಿದೆ, ಎಲಿಶ್! ಅವನು ಹೇಗೆ ಎಲ್ಲರನ್ನು ಹಿಂದೆ ಹಾಕಿ ಬಂದಿರಬಹುದು? ಅವನಿಗೆ ಯಾರಾದರೂ ದಾರಿ ತೋರಿಸಿರಬೇಕು. ಇಲ್ಲಿಂದ ಹೊರಗೆ ಬಂದ ಮೇಲೆ ಅವನನ್ನು ಹಿಡಿಯುತ್ತೇನೆ. ಸ್ಕಲ್ ಟೊಪ್ಪಿಗೆ ಧರಿಸಿದ ಈ ಯಾತ್ರಿಕನನ್ನು ಬಿಟ್ಟು ಬಿಡುತ್ತೇನೆ. ಪ್ರಾಯಶಃ ಮುಂದಿನ ಸಾಲಿಗೆ ಹೇಗೆ ಹೋಗಬಹುದೆಂದು ಅವನು ನನಗೆ ಹೇಳಬಹುದು" ಎಂದು ಅವನು ವಿಚಾರಿಸಿದ.

ಅವನು ಕಣ್ಮರೆಯಾಗದಿರಲೆಂದು ಎಫಿಮ್ ಅತ್ತ ನೋಡುತ್ತಲೇ ಇದ್ದ. ಧರ್ಮಸಮಾಜ ಮುಗಿದು ಜನರು ಚದುರತೊಡಗಿದರು. ಸಮಾಧಿಗೆ ಮುತ್ತಿಕ್ಕಲು ಧುಮುಕುತ್ತಾ ಎಫಿಮನನ್ನು ಬದಿಗೆ ಒತ್ತಿದರು. ತನ್ನ ಪರ್ಸ್ ಎಲ್ಲಿ ಕಳುವಾಗುತ್ತದೆಯೋ ಎಂಬ ಭಯ ಅವನನ್ನು ಮತ್ತೆ ಆಕ್ರಮಿಸಿತು. ತನ್ನ ಕೈಯಿಂದ ಪರ್ಸ್‌ನ್ನು ಒತ್ತಿಕೊಳ್ಳುತ್ತಾ ಮೊಳಕೈಯಿಂದ ಜನರನ್ನು ದೂಡುತ್ತಾ ಅಲ್ಲಿಂದ ಹೊರ ಬರುವ ಪ್ರಯತ್ನದಲ್ಲಿದ್ದ. ಅವನು ಬಯಲಿಗೆ ಬಂದು ಚರ್ಚ್‌ನ ಒಳಗೆ ಕೋಣೆಯಲ್ಲಿ ಕುಡಿಯುತ್ತಾ, ಮದ್ಯಪಾನ

ಮಾಡುತ್ತಾ, ಓದುತ್ತಾ ಮಲಗಿದ್ದ. ಎಲ್ಲ ರೀತಿಯ ಜನರನ್ನು ಕಂಡ. ಆದರೆ ಎಲಿಶ ಅವರ ಮಧ್ಯ ಎಲ್ಲಿಯೂ ಕಾಣಿಸಿಕೊಳ್ಳಲಿಲ್ಲ. ಹೀಗಾಗಿ ತನ್ನ ಸ್ನೇಹಿತನನ್ನು ಕಾಯದೆ ಅವನು ಹೋಟೆಲ್‌ಗೆ ಹಿಂತಿರುಗಿದ. ಆ ಸಂಜೆ ಸ್ಕಲ್ ಟೋಪಿಗೆ ಹಾಕಿಕೊಂಡ ಯಾತ್ರಿಕ ಬರಲಿಲ್ಲ. ತನ್ನ ರೂಬೆಲ್ ಕೊಡದೆ ಅವನು ಹೊರಟು ಹೋಗಿದ್ದ. ಎಫಿಮ್ ಒಬ್ಬನೇ ಉಳಿದ.

ಮಾರನೆಯ ದಿನ ಎಫಿಮ್ ಪವಿತ್ರ ಸಮಾಧಿಗೆ ತಿರುಗಿ ಹೋದ. ಹಡಗಿನಲ್ಲಿ ಭೇಟಿಯಾಗಿದ್ದ ಟಾಂಬೋವ್‌ನಿಂದ ಬಂದ ವೃದ್ಧನ ಜೊತೆ ಹೋದ. ಮುಂದಿನ ಸಾಲಿಗೆ ಹೋಗಲು ಅವನು ಪ್ರಯತ್ನಿಸಿದ. ಆದರೆ ಮತ್ತೆ ಹಿಂದಕ್ಕೆ ತಳ್ಳಲ್ಪಟ್ಟ. ಹೀಗಾಗಿ ಒಂದು ಕಂಬದ ಹತ್ತಿರ ನಿಂತು ಪ್ರಾರ್ಥನೆ ಮಾಡಿದ. ದೇವರ ಸಮಾಧಿಯ ತೀರ ಹತ್ತಿರ, ದೀಪದ ಕೆಳಗೆ ಪವಿತ್ರಸ್ಥಾನದ ಬಳಿ ಪಾದ್ರಿಯಂತೆ ತನ್ನ ಕೈಗಳನ್ನು ಚಾಚಿ, ಹೊಳೆಯುವ ಬಕ್ಕಲು ತಲೆಯ ಎಲಿಶ ನಿಂತಿರುವುದು ಕಂಡಿತು. "ಈ ಸಲ ನಾನು ಅವನನ್ನು ಕಳೆದುಕೊಳ್ಳಲಾರೆ" ಎಂದು ಎಫಿಮ್ ವಿಚಾರಿಸಿದ. ಅವನು ಮುಂದಿನ ಸಾಲಿಗೆ ಹೋದ. ಆದರೆ ಅವನು ಅಲ್ಲಿಗೆ ಹೋದಾಗ ಎಲಿಶ ಅಲ್ಲಿರಲಿಲ್ಲ. ಅವನು ಹೋಗಿಯೇ ಬಿಟ್ಟಿದ್ದ.

ಮತ್ತೆ ಮಾರನೆಯ ದಿನ ಎಫಿಮ್ ಪವಿತ್ರ ಸಮಾಧಿಯ ಕಡೆಗೆ ಹೋಗಿದ. ಕೈಗಳನ್ನು ಚಾಚಿ ಏನೋ ಕಂಡವನಂತೆ ಮೇಲೆ ನೋಡುತ್ತಾ ಎಲಿಶ ಎಲ್ಲರೆದುರು ನಿಂತಿದ್ದನ್ನು ಕಂಡ. "ಸರಿ, ಈ ಸಲ ಅವನು ನನ್ನಿಂದ ಪಾರಾಗಿ ಹೋಗಲಾರ! ನಾನು ಹೋಗಿ ಬಾಗಿಲ ಬಳಿ ನಿಲ್ಲುತ್ತೇನೆ. ಹಾಗಾದರೆ ನಾವು ಪರಸ್ಪರರು ತಪ್ಪಿಸಿಕೊಳ್ಳುವುದಿಲ್ಲ."

ಎಫಿಮ್ ಹೊರಗೆ ಹೋಗಿ ಮಧ್ಯಾಹ್ನ ದಾಟುವವರೆಗೆ ಬಾಗಿಲ ಬಳಿಯೇ ನಿಂತ, ಪ್ರತಿಯೊಬ್ಬ ವ್ಯಕ್ತಿಯೂ ಹೊರಗೆ ಬಂದ. ಆದರೆ ಎಲಿಶ ಮಾತ್ರ ಎಲ್ಲಿಯೂ ಕಾಣಿಸಿಕೊಳ್ಳಲಿಲ್ಲ.

ಎಫಿಮ್ ಆರು ವಾರ ಜೆರುಸಲೇಂನಲ್ಲಿ ಉಳಿದ. ಬೆತ್ಲಹೆಮ್, ಬೆಥನಿ, ಜೋರ್ಡಾನ್– ಎಲ್ಲ ಕಡೆ ಅವನು ಹೋದ. ಪವಿತ್ರ ಸಮಾಧಿಯ ಹತ್ತಿರವಿದ್ದ ಶವವಸ್ತ್ರವನ್ನು ತನ್ನ ಅಂತ್ಯ ಸಂಸ್ಕಾರಕ್ಕಾಗಿ ತೆಗೆದುಕೊಂಡ, ಜೋರ್ಡಾನ್‌ನಿಂದ ಒಂದು ಸೀಸೆ ಪವಿತ್ರ ನೀರು ಹಾಗೂ ಪವಿತ್ರ ಮಣ್ಣು ತೆಗೆದುಕೊಂಡ. ಪವಿತ್ರ ಜ್ಯೋತಿಯ ಹತ್ತಿರ ಹೊತ್ತಿಸಿದ್ದ ಒಂದು ಮೋಂಬತ್ತಿ ತೆಗೆದುಕೊಂಡ. ಪ್ರಾರ್ಥನೆಗೆ ಎಂಟು ಕಡೆ ಹೆಸರು ಬರೆಸಿದ. ಮನೆಗೆ ಹಿಂತಿರುಗಲು ಎಷ್ಟು ಬೇಕೋ ಅಷ್ಟು ಹಣ ಉಳಿಸಿಕೊಂಡು ಮಿಕ್ಕಿದ್ದನ್ನೆಲ್ಲ ಖರ್ಚು ಮಾಡಿದ. ನಂತರ ಅವನು ಮನೆಯ ಕಡೆಗೆ ಪ್ರಯಾಣ ಬೆಳೆಸಿದ. ಜಾಫ್ಫಾವರೆಗೆ ಕಾಲ್ನಡಿಗೆಯಲ್ಲಿ ಹೋದ. ಅಲ್ಲಿಂದ ಒಡೆಸ್ಸಾಕ್ಕೆ ನೌಕಾಯಾನ ಮಾಡಿದ. ಅಲ್ಲಿಂದ ತನ್ನ ಮನೆಗೆ ನಡೆದು ಹೋದ.

೧೧

ತಾನು ಬಂದ ದಾರಿಯಲ್ಲಿಯೇ ಎಫಿಮ್ ತನ್ನ ಮರು ಪ್ರಯಾಣ ಬೆಳೆಸಿದ. ಮನೆ ಸಮೀಪಿಸುತ್ತಿದ್ದಂತೆಯೇ ತನ್ನ ಅನುಪಸ್ಥಿತಿಯಲ್ಲಿ ಮನೆಯ ವ್ಯವಹಾರಗಳೆಲ್ಲ

ಹೇಗೆ ಸಾಗಿರಬಹುದೆಂಬ ವಿಚಾರ ಅವನಿಗೆ ಮತ್ತೆ ಬಂದಿತು. ಒಂದು ವರ್ಷದಲ್ಲಿ ಸಾಕಷ್ಟು ನೀರು ಹರಿಯುತ್ತದೆ ಎಂದು ಒಂದು ನಾಣ್ಣುಡಿ ಹೇಳುತ್ತದೆ. ಒಂದು ಮನೆಯನ್ನು ಕಟ್ಟಲು ಒಂದು ಜೀವಾವಧಿ ಸಮಯ ಬೇಕಾಗುತ್ತದೆ. ಆದರೆ ಅದನ್ನು ಧ್ವಂಸಗೊಳಿಸಲು ಹೆಚ್ಚು ಸಮಯ ಬೇಕಾಗುವುದಿಲ್ಲ. ತಾನಿಲ್ಲದೆ ತನ್ನ ಮಗ ಮನೆಯ ವ್ಯವಹಾರ ಹೇಗೆ ನಿಭಾಯಿಸಿಕೊಂಡಿರಬಹುದು? ಎಂಥೆಂಥ ಸಮಸ್ಯೆಗಳನ್ನು ಅವರು ಎದುರಿಸಿರಬೇಕು? ದನ-ಕರುಗಳು ಚಳಿಗಾಲವನ್ನು ಹೇಗೆ ದಾಟಿರಬೇಕು? ಮನೆಯ ಕಟ್ಟಡದ ಕೆಲಸ ಸರಿಯಾಗಿ ಪೂರ್ಣಗೊಂಡಿರಬಹುದೇ? ಹೀಗೆ ವಿಚಾರಿಸಿ ಕಳವಳಗೊಂಡ. ಬೇಸಿಗೆಯ ಮುಂಚೆ ಎಲಿಶನಿಂದ ಬೇರ್ಪಟ್ಟ ಜಿಲ್ಲೆಗೆ ಬಂದು ತಲುಪಿದಾಗ ಅಲ್ಲಿ ಬದುಕುತ್ತಿರುವ ಜನರು ಮೊದಲಿದ್ದವರೇ ಎಂದು ನಂಬಲು ಎಫಿಮಗೆ ಕಷ್ಟವಾಯಿತು. ವರ್ಷದ ಹಿಂದೆ ಅವರು ಹಸಿವೆಯಿಂದ ಸಾಯುತ್ತಿದ್ದರು. ಆದರೆ ಈಗ ಅವರು ಸುಖವಾಗಿದ್ದರು. ಬೆಳೆ ಚೆನ್ನಾಗಿತ್ತು. ಜನರು ತಮ್ಮ ಹಿಂದಿನ ಕಷ್ಟದ ಜೀವನವನ್ನು ಮರೆತಿದ್ದರು.

ಒಂದು ಸಂಜೆ, ಎಲಿಶ್ ಹಿಂದೆ ಉಳಿದುಕೊಂಡ ಸ್ಥಳಕ್ಕೆ ಎಫಿಮ್ ಬಂದು ತಲುಪಿದ. ಅವನು ಹಳ್ಳಿಯನ್ನು ಪ್ರವೇಶಿಸುತ್ತಿದ್ದಂತೆಯೇ ಬಿಳಿಯ ಬಟ್ಟೆ ಧರಿಸಿದ ಪುಟ್ಟ ಹುಡುಗಿಯೊಂದು ಮನೆಯಿಂದ ಹೊರಗೆ ಓಡಿ ಬಂದು "ಅಪ್ಪ, ಅಪ್ಪ, ನಮ್ಮ ಮನೆಗೆ ಬನ್ನಿ" ಎಂದು ಕರೆದಳು.

ಎಫಿಮ್ ಮುಂದೆ ಹೋಗಬೇಕೆಂದ. ಆದರೆ ಹುಡುಗಿ ಅವನನ್ನು ಹೋಗಗೊಡಲಿಲ್ಲ. ಅವನ ಕೋಟು ಹಿಡಿದು ನಗುತ್ತಾ ತನ್ನ ಮನೆಯ ಕಡೆಗೆ ಎಳೆದಳು. ಅಲ್ಲಿ ಮಹಿಳೆಯೋರ್ವಳು ಮುಖಮಂಟಪದಲ್ಲಿ ಹುಡುಗನೊಂದಿಗೆ ಬಂದು ನಿಂತು ಎಫಿಮಗೆ ಒಳಗೆ ಬರುವಂತೆ ಸನ್ನೆ ಮಾಡಿದಳು. "ಒಳಗೆ ಬನ್ನಿ, ಅಜ್ಜ. ನಮ್ಮೊಂದಿಗೆ ರಾತ್ರಿ ಊಟ ಮಾಡಿ, ಇಲ್ಲಿಯೇ ರಾತ್ರಿ ಕಳೆಯಿರಿ" ಅಂದಳು. ಎಫಿಮ್ ಒಳಗೆ ಹೋದ. ತಾನು ಎಲಿಶನ ಬಗ್ಗೆ ಕೇಳಬಹುದು. ನೀರು ಕುಡಿಯಲೋಸುಗ ಅವನು ಇದೇ ಮನೆಯನ್ನು ಹೊಕ್ಕಿದ್ದ ಎಂದು ಎಫಿಮ್ ವಿಚಾರಿಸಿದ.

ಅವನು ಹೊತ್ತು ತಂದಿದ್ದ ಬ್ಯಾಗ್ ಕೆಳಗಿಳಿಸಲು ಮಹಿಳೆ ನೆರವಾದಳು. ಮುಖ ತೊಳೆಯಲು ಅವನಿಗೆ ನೀರು ಕೊಟ್ಟಳು. ಅವನನ್ನು ಟೇಬಲ್ ಬಳಿ ಕೂಡ್ರಿಸಿ ಹಾಲು, ಮೊಸರು, ಕೇಕ್ ತಂದು ಅವನ ಮುಂದಿಟ್ಟಳು. ಎಫಿಮ್ ಅವಳಿಗೆ ಧನ್ಯವಾದ ಹೇಳಿದ. ಯಾತ್ರಿಕರಿಗೆ ಕರುಣೆ ತೋರಿಸುವ ಅವಳನ್ನು ಕೊಂಡಾಡಿದ. ಮಹಿಳೆ ತನ್ನ ಗೋಣು ಅಲುಗಾಡಿಸಿದಳು.

"ಯಾತ್ರಿಕರನ್ನು ಆಮಂತ್ರಿಸಲು ನಮಗೆ ಸರಿಯಾದ ಕಾರಣವಿದೆ. ಜೀವನವೆಂದರೇನು ಎಂದು ನಮಗೆ ತೋರಿಸಿಕೊಟ್ಟವನು ಒಬ್ಬ ಯಾತ್ರಿಕನೇ. ನಾವು ದೇವರನ್ನು ಮರೆತು ಬದುಕುತ್ತಿದ್ದೆವು. ಅದಕ್ಕಾಗಿ ದೇವರು ಸಾಯುವಂತೆ ನಮ್ಮನ್ನು ಶಿಕ್ಷಿಸಿದ. ಹೋದ ಬೇಸಿಗೆಯಲ್ಲಿ ನಾವು ಎಂಥ ದುಃಸ್ಥಿತಿ ತಲುಪಿದ್ದೇವೆಂದರೆ ತಿನ್ನಲು ಏನೂ ಇರಲಿಲ್ಲ. ಅನಾರೋಗ್ಯ ಬೇರೆ ಬೆನ್ನು ಬಿದ್ದಿತು. ನಾವು ಸತ್ತೇ ಹೋಗಬೇಕಿತ್ತು.

ಆದರೆ ದೇವರು ನಿಮ್ಮಂಥ ಒಬ್ಬ ವೃದ್ಧ ವ್ಯಕ್ತಿಯನ್ನು ನಮ್ಮ ಬಳಿ ಕಳಿಸಿಕೊಟ್ಟ. ಒಂದು ದಿವಸ ಕುಡಿಯಲು ನೀರು ಕೇಳಿ ಅವನು ನಮ್ಮ ಹತ್ತಿರ ಬಂದ: ನಾವು ದುಃಸ್ಥಿತಿಯಲ್ಲಿದ್ದುದು ಕಂಡ; ನಮ್ಮ ಮೇಲೆ ಕರುಣೆ ತೋರಿ ನಮ್ಮ ಜೊತೆ ಉಳಿದು ಬಿಟ್ಟ. ನಮಗೆ ಆಹಾರ ಕೊಟ್ಟ, ನಮ್ಮ ಕಾಲ ಮೇಲೆ ನಾವು ನಿಲ್ಲುವಂತೆ ಮಾಡಿದ. ನಮ್ಮ ಗದ್ದೆ ಬಿಡಿಸಿಕೊಟ್ಟ, ಒಂದು ಚಕ್ಕಡಿ ಹಾಗೂ ಒಂದು ಕುದುರೆ ಖರೀದಿಸಿ ಕೊಟ್ಟ." ಈ ಹೊತ್ತಿಗೆ ವೃದ್ಧ ಮಹಿಳೆ ಮನೆಯೊಳಗೆ ಬಂದು ತನ್ನ ಸೊಸೆಯನ್ನು ತಡೆದು ತಾನು ಎಲಿಶನ ಬಗ್ಗೆ ಹೇಳಲಾರಂಭಿಸಿದಳು:

"ಅವನು ಮನುಷ್ಯನೋ ಅಥವಾ ಭಗವಂತ ಕಳಿಸಿದ ದೇವತೆಯೋ? ನಮಗೆ ಗೊತ್ತಿಲ್ಲ. ಅವನು ನಮ್ಮೆಲ್ಲರನ್ನೂ ಪ್ರೀತಿಸಿದ, ಎಲ್ಲರ ಮೇಲೆ ಕರುಣೆ ತೋರಿದ. ಆದರೆ ತನ್ನ ಹೆಸರು ಹೇಳದೆ ಹೊರಟು ಹೋದ. ನಾವು ಯಾರ ಹೆಸರಿನಲ್ಲಿ ಪ್ರಾರ್ಥನೆ ಸಲ್ಲಿಸಬೇಕು? ಅಂತಾ ಗೊತ್ತಿಲ್ಲ. ಎಲ್ಲವೂ ನನ್ನ ಕಣ್ಮುಂದೆ ನಡೆಯುತ್ತಿದೆ ಎಂಬಂತೆ ಭಾಸವಾಗುತ್ತಿದೆ. ಅಲ್ಲಿ ನಾನು ಸಾವಿಗಾಗಿ ಕಾಯುತ್ತಾ ಬಿದ್ದುಕೊಂಡಿದ್ದೆ. ಆಗ ಬೊಕ್ಕಲು ತಲೆಯ ವೃದ್ಧ ಮನುಷ್ಯ ಒಳಗೆ ಬಂದ. ನೋಡಲು ಅವನು ವಿಶೇಷವಾಗಿ ಕಾಣುತ್ತಿರಲಿಲ್ಲ. ಕುಡಿಯಲು ನೀರು ಕೇಳಿದ. ನಾನು ಪಾಪಿ. ಈ ವ್ಯಕ್ತಿ ಏನನ್ನೋ ಅಪೇಕ್ಷಿಸಿ ಇಲ್ಲಿಗೆ ಬಂದಿದ್ದಾನೆಂದುಕೊಂಡೆ. ಅವನು ನಮ್ಮನ್ನು ನೋಡುತ್ತಿದ್ದಂತೆಯೇ ಇದೇ ಸ್ಥಳದಲ್ಲಿ ತನ್ನ ಬ್ಯಾಗ್ ಇಟ್ಟು ಅದನ್ನು ತೆಗೆದ."

'ಇಲ್ಲೇ' ಎಂದಳು ಪುಟ್ಟ ಹುಡುಗಿ. "ಇಲ್ಲ ಅಜ್ಜಿ. ಅವರು ಮೊದಲು ಮನೆಯ ನಟ್ಟ ನಡುವೆ ಬ್ಯಾಗನ್ನು ಇಟ್ಟರು. ಆಮೇಲೆ ಅದನ್ನು ಎತ್ತಿ ಬೆಂಚ್ ಮೇಲಿಟ್ಟರು" ಅಂದಳು ಹುಡುಗಿ.

ಆ ಯಾತ್ರಿಕ ಅವರಿಗೆ ಏನು ಹೇಳಿದ ಹಾಗೂ ಅವರಿಗಾಗಿ ಏನು ಮಾಡಿದ ಎಂಬುದನ್ನು ಸ್ಮರಿಸಲು, ಚರ್ಚಿಸಲು ಪ್ರಾರಂಭಿಸಿದರು.

ರಾತ್ರಿ ಹೊತ್ತು ಯಜಮಾನ ಕುದುರೆಯ ಮೇಲೆ ಕುಳಿತು ಮನೆಗೆ ಬಂದ. ಅವನೂ ಎಲಿಶನ ಬಗ್ಗೆ ಹೇಳಲಾರಂಭಿಸಿದ. ಅವನು ಹೇಗೆ ತಮ್ಮೊಂದಿಗೆ ಇದ್ದ ಎಂಬುದನ್ನು ವಿವರಿಸತೊಡಗಿದ. "ಅವರು ಬರದೆ ಹೋಗಿದ್ದಿದ್ದರೆ ನಾವು ನಮ್ಮ ಪಾಪದಲ್ಲೇ ಸತ್ತು ಹೋಗಿರುತ್ತಿದ್ದೆವು. ದೇವರು ಹಾಗೂ ಮನುಷ್ಯರನ್ನು ಶಪಿಸುತ್ತಾ ನಿರಾಸೆಯಿಂದ ನಾವು ಸತ್ತಿರುತ್ತಿದ್ದೆವು. ಆದರೆ ಅವರು ನಮ್ಮ ಕಾಲ ಮೇಲೆ ನಾವು ಪುನಃ ನಿಲ್ಲುವಂತೆ ಮಾಡಿದರು. ಅವರಿಂದಾಗಿ ನಾವು ದೇವರನ್ನು ಅರಿತೆವು ಮತ್ತು ಮನುಷ್ಯರಲ್ಲಿ ಒಳ್ಳೆಯತನ ಇದೆ ಎಂಬ ಮಾತಿನಲ್ಲಿ ವಿಶ್ವಾಸ ಇಟ್ಟೆವು. ದೇವರು ಅವರನ್ನು ಹರಸಲಿ! ಪ್ರಾಣಿಗಳಂತೆ ಬದುಕುತ್ತಿದ್ದ ನಮ್ಮನ್ನು ಮನುಷ್ಯರನ್ನಾಗಿ ಮಾಡಿದ ಮಹಾನ್ ವ್ಯಕ್ತಿ ಅವರು."

ಆಹಾರ ಹಾಗೂ ನೀರು ಕೊಟ್ಟ ಮೇಲೆ ಎಫಿಮನಿಗೆ ಮಲಗಲು ಸ್ಥಳ ತೋರಿಸಿದರು; ಅವರೂ ಮಲಗಿದರು.

ಎಫಿಮ್ ಮಲಗಿದ್ದರೂ ಅವನಿಗೆ ನಿದ್ದೆ ಬರಲಿಲ್ಲ. ತನ್ನ ಮನಸ್ಸಿನಿಂದ ಎಲಿಶನನ್ನು ತೆಗೆದು ಹಾಕಲು ಅವನಿಗೆ ಸಾಧ್ಯವಾಗಲಿಲ್ಲ. ಜೆರುಸಲೇಂನಲ್ಲಿ ಮುಂದಿನ ಸಾಲಿನಲ್ಲಿ ಅವನನ್ನು ತಾನು ನೋಡಿದ್ದು ನಿಜವೆ? ಎಂದು ಮನದಲ್ಲಿಯೇ ವಿಚಾರಿಸಿದ.

"ಆ ರೀತಿಯಲ್ಲಿ ಅವನು ನನಗಿಂತ ಮುಂಚೆ ಅಲ್ಲಿಗೆ ಹೇಗೆ ಹೋದನೋ? ದೇವರು ನನ್ನ ಭಕ್ತಿಯನ್ನು ಸ್ವೀಕರಿಸಿದನೋ ಇಲ್ಲವೋ? ಗೊತ್ತಿಲ್ಲ. ಆದರೆ ಅವನ ಪ್ರಾರ್ಥನೆಯನ್ನು ನಿಶ್ಚಿತವಾಗಿ ಸ್ವೀಕರಿಸಿದ್ದಾನೆ" ಎಂದು ಎಫಿಮ್ ಅಂದುಕೊಂಡ. ಮಾರನೆಯ ದಿನ ಬೆಳಗ್ಗೆ ಎಫಿಮ್ ಅಲ್ಲಿಂದ ಬೀಳ್ಕೊಂಡ. ಅವರು ಅವನ ಬ್ಯಾಗಿನಲ್ಲಿ ಆಹಾರ ಇಟ್ಟು ಕೆಲಸಕ್ಕೆ ಹೋದರು. ಅವನು ಪಯಣ ಮುಂದುವರಿಸಿದ.

೧೨

ಎಫಿಮ್ ಮನೆಯಿಂದ ಹೋಗಿ ಒಂದು ವರ್ಷ ಕಳೆದಿತ್ತು. ಒಂದು ಸಂಜೆ ಮನೆಗೆ ಬಂದು ತಲುಪಿದ. ವಸಂತ ಕಾಲ ಮತ್ತೆ ಪ್ರಾರಂಭವಾಗಿತ್ತು. ಅವನ ಮಗ ಮನೆಯಲ್ಲಿ ಇರಲಿಲ್ಲ. ಅವನು ಹೆಂಡದ ಮನೆಗೆ ಹೋಗಿದ್ದ. ತಿರುಗಿ ಬಂದಾಗ ಅವನು ಕೊಂಚ ಹೆಚ್ಚೇ ಕುಡಿದಿದ್ದ. ಎಫಿಮ್ ಅವನನ್ನು ಪ್ರಶ್ನಿಸತೊಡಗಿದ. ತನ್ನ ತಂದೆಯ ಅನುಪಸ್ಥಿತಿಯಲ್ಲಿ ಈ ಯುವಕ ಕೆಟ್ಟದ್ದಾಗಿ ವರ್ತಿಸಿದ್ದುದು ಸ್ಪಷ್ಟವಾಗಿತ್ತು. ಎಲ್ಲ ಹಣವನ್ನು ವಿನಾಕಾರಣ ಖರ್ಚು ಮಾಡಿದ್ದ, ಮನೆಯ ಕೆಲಸವನ್ನು ನಿರ್ಲಕ್ಷಿಸಿದ್ದ. ತಂದೆ ಮಗನಿಗೆ ಗದರಿಸಿದ. ಆಗ ಮಗ ಒರಟಾಗಿ ಉತ್ತರಿಸತೊಡಗಿದ : "ನೀವು ಇಲ್ಲೇ ಇದ್ದು ಇವನ್ನೆಲ್ಲ ನೋಡಿಕೊಳ್ಳಬೇಕಿತ್ತು. ನೀವು ಎಲ್ಲ ಹಣ ತೆಗೆದುಕೊಂಡು ಹೋಗಿರುವಿ. ಈಗ ನನ್ನಿಂದ ಲೆಕ್ಕ ಕೇಳುತ್ತೀರಾ!" ಎಂದ. ವೃದ್ಧ ತಂದೆಗೆ ಸಿಟ್ಟು ಬಂದಿತು.

ಬೆಳಗ್ಗೆ ಎದ್ದು ಹಳ್ಳಿಯ ಮುಖಂಡನಿಗೆ ತನ್ನ ಮಗನ ನಡತೆಯ ಬಗ್ಗೆ ದೂರು ಕೊಡಲು ಹೋದ. ಎಲಿಶನ ಮನೆಯ ಮುಂದಿನಿಂದ ಹಾದು ಹೋಗುತ್ತಿದ್ದಾಗ ಅವನ ಸ್ನೇಹಿತನ ಹೆಂಡತಿ ಮುಖಮಂಟಪದಲ್ಲಿ ನಿಂತು ಎಫಿಮಗೆ ನಮಸ್ಕರಿಸಿದಳು. "ಹೇಗಿದ್ದೀರಿ? ನೀವು ಸುರಕ್ಷಿತವಾಗಿ ಜೆರುಸಲೇಂಗೆ ಹೋಗಿ ತಲುಪಿದಿರಾ?" ಎಂದು ಕೇಳಿದಳು. ವೃದ್ಧ ಮಹಿಳೆಗೆ ಮಾತನಾಡುವುದು ಬಹಳ ಪ್ರೀತಿಯ ಕೆಲಸವಾಗಿತ್ತು.

"ಹೌದು. ಅವರು ಹಿಂತಿರುಗಿ ಬಂದಿದ್ದಾರೆ. ಬಹಳ ದಿನವಾಯಿತು. ನಂಬುವಕಕೆ ಮುಗಿದ ಸ್ವಲ್ಪ ಸಮಯದಲ್ಲೇ ಅಂತಾ ಕಾಣುತ್ತೆ, ಅವರು ತಿರುಗಿ ಬಂದದ್ದು. ದೇವರು ಅವರನ್ನು ತಿರುಗಿ ಕಳಿಸಿದ್ದುದಕ್ಕೆ ನಾವೆಲ್ಲಾ ತುಂಬಾ ಹರ್ಷಪಟ್ಟೆವು! ಅವರ ಅನುಪಸ್ಥಿತಿಯಲ್ಲಿ ನಾವು ಮಂಕಾಗಿದ್ದೆವು. ನಾವು ಅವರಿಂದ ಹೆಚ್ಚಿನ ಕೆಲಸ ಅಪೇಕ್ಷಿಸುವುದಿಲ್ಲ. ಅವರದ್ದು ಈಗ ಕೆಲಸ ಮಾಡುವ ವಯಸ್ಸಲ್ಲ. ಆದರೆ ಅವರೇ ನಮ್ಮ ಮನೆಯ ಯಜಮಾನರು. ಅವರು ಮನೆಯಲ್ಲಿದ್ದರೆ ಅದುವೇ ನಮಗೆ ಹಬ್ಬದ ವಾತಾವರಣ. ನನ್ನ ಮಗ ಎಷ್ಟು ಸಂತೋಷವಾಗಿದ್ದ! "ಅಪ್ಪ ದೂರ ಹೋದಾಗ ಸೂರ್ಯನ ಕಿರಣವೇ ಇಲ್ಲದಂತಾಗಿತ್ತು" ಅಂದನು. ಅವರ ಅನುಪಸ್ಥಿತಿಯಲ್ಲಿ ಎಲ್ಲವೂ

ಮಂಕಾಗಿತ್ತು. ನಾವು ಅವರನ್ನು ತುಂಬ ಪ್ರೀತಿಸುತ್ತೇವೆ ಹಾಗೂ ಅಷ್ಟೇ ಅವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತೇವೆ" ಎಂದಳು.

"ನಿಮ್ಮ ಪತಿ ಮನೆಯಲ್ಲಿ ಇದ್ದಾರೆಯೆ?" ಎಂದು ಎಫಿಮ್ ಕೇಳಿದ. "ಇದ್ದಾರೆ. ಅವರು ಜೇನುನೊಣಗಳೊಂದಿಗಿದ್ದಾರೆ. ಭ್ರಮರಗಳನ್ನು ಜೇನುಗೂಡಿನಲ್ಲಿಡುತ್ತಿದ್ದಾರೆ. ಇವು ಹೆಚ್ಚಿನ ಸಂಖ್ಯೆಯಲ್ಲಿ ಭ್ರಮರಗಳನ್ನು ಹುಟ್ಟಿಸುತ್ತಿವೆಯೆಂದು ಅವರು ಹೇಳುತ್ತಾರೆ. ದೇವರು ಜೇನುನೊಣಗಳಿಗೆ ಬಹಳ ಶಕ್ತಿ ಕೊಟ್ಟಿದ್ದಾನೆ. ನನ್ನ ಪತಿ ಇಂಥದ್ದನ್ನು ನೋಡಿರಲಿಲ್ಲ. ನಮ್ಮ ಪಾಪಕ್ಕೆ ತಕ್ಕ ಪ್ರತಿಫಲ ದೇವರು ನೀಡುತ್ತಿಲ್ಲ. ಒಳಗೆ ಬನ್ನಿ, ನಿಮ್ಮನ್ನು ಪುನಃ ನೋಡಿ ಅವರು ಸಂತೋಷಪಡಬಹುದು" ಎಂದು ಹೇಳಿದಳು.

ಎಫಿಮ್ ಅಂಗಳದ ಮೂಲಕ ಹಾದು ಮಧುಮಕ್ಷಿಕಾ ಗೃಹಕ್ಕೆ ಹೋದ. ಕೈಚೀಲ ಹಾಕಿಕೊಳ್ಳದ, ಬೂದಿ ಬಣ್ಣದ ಕೋಟ್ ಧರಿಸಿದ ಎಲಿಶ್ ಅಲ್ಲಿ ಕಂಡನು. ಜೆರುಸಲೆಂನಲ್ಲಿ ಪವಿತ್ರ ಸಮಾಧಿಯ ಹತ್ತಿರ ಕಂಡಂತೆ ಕೈಗಳನ್ನು ಚಾಚಿ, ಥಳಥಳಿಸುವ ಬೊಕ್ಕಲು ತಲೆ ಬಿಟ್ಟುಕೊಂಡು, ಆಕಾಶದೆಡೆ ನೋಡುತ್ತಾ ಬರ್ಚ್ ವೃಕ್ಷದ ಕೆಳಗೆ ನಿಂತಿದ್ದನು. ಪವಿತ್ರ ಸ್ಥಳದಲ್ಲಿ ಜ್ವಾಲೆ ಉರಿಯುವಂತೆ, ಸೂರ್ಯನ ಕಿರಣ ಅವನ ತಲೆಯ ಮೇಲೆ ಬರ್ಚ್‌ಗಿಡಗಳ ಸಂದಿಯಿಂದ ಹಾದು ಬಿದ್ದಿತು. ಬಂಗಾರದ ಭ್ರಮರಗಳು ಪ್ರಭಾವಳಿಯ ಹಾಗೆ ಅವನ ತಲೆಯ ಸುತ್ತ ಹಾರಿದವು. ಆದರೆ ಅವು ಅವನಿಗೆ ಕಚ್ಚಲಿಲ್ಲ.

ಎಫಿಮ್ ನಿಂತ. ವೃದ್ಧ ಮಹಿಳೆ ತನ್ನ ಪತಿಯನ್ನು ಕರೆದು "ನಿಮ್ಮ ಸ್ನೇಹಿತರು ಬಂದಿದ್ದಾರೆ" ಎಂದು ಕೂಗಿದಳು. ಎಲಿಶ್ ಹರ್ಷಭರಿತ ಮುಖದಿಂದ ಸುತ್ತಲೂ ನೋಡಿದ. ತನ್ನ ಗಡ್ಡದ ಮೇಲೆ ಕುಳಿತ ಜೇನುನೊಣಗಳನ್ನು ಹಗುರವಾಗಿ ಆರಿಸುತ್ತಾ ಎಫಿಮನ ಹತ್ತಿರ ಬಂದ.

" ನಮಸ್ಕಾರ ಗೆಳೆಯ, ನಮಸ್ಕಾರ. ನೀನು ಜೆರುಸಲೆಂಗೆ ಸುರಕ್ಷಿತವಾಗಿ ತಲುಪಿದೆಯೆ?" ಎಂದು ಕೇಳಿದ.

"ನನ್ನ ಕಾಲುಗಳು ಅಲ್ಲಿಗೆ ನಡೆದು ಹೋದವು. ಜೋರ್ಡನ್ ನದಿಯಿಂದ ನಿನಗಾಗಿ ನೀರು ತಂದಿದ್ದೇನೆ, ನನ್ನ ಮನೆಗೆ ಬಂದು ಹೋಗು. ಆದರೆ ದೇವರು ನನ್ನ ಪ್ರಾರ್ಥನೆ ಸ್ವೀಕರಿಸಿದನೋ..."

"ಸರಿ, ದೇವರನ್ನು ಅಭಿನಂದಿಸಬೇಕು. ಕ್ರೈಸ್ತ ನಿನ್ನನ್ನು ಹರಸಲಿ!" ಎಂದು ಎಲಿಶ್ ಹೇಳಿದ.

ಎಫಿಮ್ ಕೆಲಕಾಲ ಮೌನವಾದ, ಆಮೇಲೆ ಹೇಳಿದ : "ನನ್ನ ಪಾದಗಳು ಅಲ್ಲಿದ್ದವು. ಆದರೆ ನಿಜವಾಗಿ ಅಲ್ಲಿ ನನ್ನ ಆತ್ಮವಿತ್ತೋ, ಬೇರೆಯವರ ಆತ್ಮವಿತ್ತೊ..."

"ಅದು ದೇವರ ವ್ಯವಹಾರ ಗೆಳೆಯಾ, ಅದು ದೇವರ ಕೆಲಸ" ಎಲಿಶ್ ಮಧ್ಯ ಪ್ರವೇಶಿಸಿದ. "ನಾನು ಹಿಂತಿರುಗಿ ಬರುತ್ತಿದ್ದಾಗ ನೀನು ಉಳಿದುಕೊಂಡ ಮನೆಯ ಹತ್ತಿರ ನಿಂತು ಬಂದೆ..." ಎಲಿಶ್ ಆಶ್ಚರ್ಯಚಕಿತನಾಗಿ ಹಾಗೂ ಅವಸರವಾಗಿ ಹೇಳಿದ:

"ಅದು ದೇವರ ಕೆಲಸ, ಮಿತ್ರನೆ. ಅದು ದೇವರ ಕೆಲಸ. ಮನೆಯೊಳಗೆ ಬಾ. ನಿನಗೆ ಜೇನುತುಪ್ಪ ಕೊಡುತ್ತೇನೆ" ಎಂದು ಎಲಿಶ್ ಮಾತು ಬದಲಿಸಿದ. ಮನೆಯ ವ್ಯವಹಾರದ ಬಗ್ಗೆ ಮಾತನಾಡಿದ.

ಎಫಿಮ್ ನಿಟ್ಟುಸಿರು ಬಿಟ್ಟ. ಆ ಮನೆಯಲ್ಲಿನ ಜನರ ಕುರಿತಾಗಲಿ, ತಾನು ಜೆರುಸಲೇಂನಲ್ಲಿ ಅವನನ್ನು ಕಂಡಿದ್ದರ ಕುರಿತಾಗಲಿ ಕೇಳಲಿಲ್ಲ. ದೇವರ ಹರಕೆಯನ್ನು ತೀರಿಸುವ ಅತ್ಯುತ್ತಮ ಮಾರ್ಗವಾವುದು ಎಂಬುದನ್ನು ಈಗ ಅವನು ಅರ್ಥ ಮಾಡಿಕೊಂಡ. ದೇವರ ಇಚ್ಛೆಯನ್ನು ಪೂರ್ಣಗೊಳಿಸುವುದೆಂದರೆ, ಪ್ರತಿಯೊಬ್ಬ ವ್ಯಕ್ತಿ ತಾನು ಬದುಕಿರುವಾಗ ಬೇರೆಯವರನ್ನು ಪ್ರೀತಿಸಬೇಕು ಮತ್ತು ಬೇರೆಯವರಿಗೆ ಒಳ್ಳೆಯದನ್ನು ಮಾಡಬೇಕು.

***

## ಒಂದೂವರೆ ಇಂಚು ಮೇಲೆ

ಹಿಂದೀ ಮೂಲ: ನಿರ್ಮಲ್ ವರ್ಮಾ ಅನು : ಡಿ ಎಸ್. ಶ್ರೀನಾಥ್

ಒಂದು ವೇಳೆ ನೀವು ಬಯಸಿದರೆ ಈ ಟೇಬಲ್‌ಗೆ ಬರಬಹುದು. ಸಾಕಷ್ಟು ಸ್ಥಳಾವಕಾಶ ಇದೆ. ಅಲ್ಲ, ಒಬ್ಬ ಮನುಷ್ಯನಿಗೆ ಸ್ಥಳವಾದರೂ ಎಷ್ಟು ಬೇಕು?........ ಇಲ್ಲ..... ನನಗ್ಯಾವುದೇ ತೊಂದರೆಯಾಗಲ್ಲ. ಖಂಡಿತ, ನೀವೊಂದು ವೇಳೆ ಬಯಸಿದರೆ, ಮೌನ ತಾಳಬಲ್ಲಿರಿ, ನಾನು ಮೌನಿಯಾಗಿರಲು ಬಯಸುತ್ತೇನೆ ..... ಮನುಷ್ಯ, ಒಂದೇ ಸಮಯದಲ್ಲಿ ಮಾತನಾಡಬಲ್ಲ, ಮೌನಿಯಾಗಿರಲೂ ಬಲ್ಲ. ಇದನ್ನು ಬಹಳಷ್ಟು ಕಡಿಮೆ ಸಂಖ್ಯೆಯಲ್ಲಿ, ಜನ ಅರ್ಥ ಮಾಡಿಕೊಳ್ಳುತ್ತಾರೆ. ನಾನು ಅನೇಕ ವರ್ಷಗಳಿಂದ ಇದನ್ನು ಮಾಡುತ್ತ ಬಂದಿದ್ದೇನೆ, ಖಂಡಿತ ನೀವಲ್ಲ.... ನೀವಿನ್ನೂ ಯುವಕರು. ನಿಮ್ಮ ವಯಸ್ಸಿಗೆ ಮೌನವಾಗಿರುವುದು ಅಂದರೆ ಮೌನವಾಗಿರುವುದು, ಮಾತನಾಡುವುದು ಅಂದರೆ ಮಾತನಾಡುವುದು. ಎರಡೂ ವಿಷಯಗಳು ಒಮ್ಮೆಲೆ ಸಂಭವಿಸುವುದು ಸಾಧ್ಯವಿಲ್ಲ. ನೀವು ಚಿಕ್ಕ ಮಗ್‌ನಲ್ಲಿ ಕುಡಿಯುತ್ತಿದ್ದೀರಿ? ನಿಮಗೆ ಬಹುಶ; ಇನ್ನೂ ಚಟ ಅಂಟಿಕೊಂಡಿಲ್ಲ. ನಿಮ್ಮನ್ನು ನೋಡುತ್ತಲೇ ನಾನು, ನೀವು ಈ ಊರಿನವರಲ್ಲವೆಂದು ತಿಳಿದೆ. ಈ ವೇಳೆಯಲ್ಲಿ ಇಲ್ಲಿಗೆ ಬರುವವರೆಲ್ಲರನ್ನು ಬಲ್ಲೆ. ನಾನು ಅವರೊಂದಿಗೆ ನೀವು ಏನನ್ನೂ ಮಾತನಾಡಲಾರಿರಿ. ಅವರು ಈ ಮೊದಲೇ ತುಂಬಾ ಕುಡಿದಿರುತ್ತಾರೆ. ಅವರಿಲ್ಲಿಗೆ ಬರುವುದು, ತಮ್ಮ ಕೊನೆಯ ಬೀರ್‌ಗಾಗಿ-ಬೇರೆ ಮಾರ್ಗಗಳು ಮುಚ್ಚಿ ಬಿಡುತ್ತವೆ. ಅವರು ಮತ್ತೆಲ್ಲೂ ಹೋಗಲಾರರು. ಅವರು ಶೀಘ್ರವೇ ಖತಮ್ ಆಗಿ ಬಿಡುತ್ತಾರೆ- ಮೇಜಿನ ಮೇಲೆ, ಹೊರಗಿನ ರಸ್ತೆಯ ಮೇಲೆ, ಟ್ರಾಮ್‌ನಲ್ಲಿ, ಅದೆಷ್ಟೋ ವೇಳೆ ಅವರನ್ನು ಹೊತ್ತುಕೊಂಡು ಹೋಗಿ ಅವರ ಮನೆಗೆ ತಲುಪಿಸಬೇಕಾಗುತ್ತದೆ. ಮತ್ತೆ ಖಂಡಿತ, ಮಾರನೆಯ ದಿನ ಅವರು ನನ್ನನ್ನು ಗುರುತಿಸುವುದೂ ಇಲ್ಲ. ನೀವು ಅನ್ಯಥಾ ಭಾವಿಸದಿರಿ. ನಾನು ನಿಮ್ಮೆಡೆಗೆ ಬೆರಳು ಮಾಡಿರಲಿಲ್ಲ. ನಿಮ್ಮನ್ನು ನಾನಿಲ್ಲಿ ಮೊದಲ ಬಾರಿಗೆ ನೋಡಿದ್ದೇನೆ ನೀವು ಬಂದು ಮೌನವಾಗಿ ಬೇರೆ ಟೇಬಲ್‌ನಲ್ಲಿ ಕೂತಿರಿ! ಇದು ನನಗೆ ಕೆಡುಕೆನಿಸಿತು. ಇಲ್ಲ, ನೀವು ಹೆದರಬೇಡಿ..... ನಾನು ನನ್ನನ್ನು ನಿಮ್ಮ ಮೇಲೆ ಹೇರಲ್ಲ, ನಾವು ಪರಸ್ಪರ ಒಟ್ಟಿಗೆ ಕುಳಿತೂ ನಮ್ಮ ನಮ್ಮ ಬೀರನ್ನು

ಒಂಟಿಯಾಗಿ ಕುಡಿಯ ಬಲ್ಲೆವು. ನನ್ನ ವಯಸ್ಸಿಗೆ ಇದು ಸ್ವಲ್ಪ ಕಷ್ಟ. ಯಾಕೆಂದರೆ ಪ್ರತಿಯೊಬ್ಬ ವ್ಯಕ್ತಿ ಸ್ವಲ್ಪ ಭಯಗ್ರಸ್ತನಾಗಿರುತ್ತಾನೆ...... ಕ್ರಮೇಣ ಮಹತ್ವದೊಂದಿಗೆ ವೃದ್ಧರಾಗುವುದು ತುಂಬಾ 'ಗ್ರೇಟ್!' ಇದು ಎಲ್ಲರಿಗೂ ಸಾಧ್ಯವಿಲ್ಲ. ಅದು ತನ್ನಷ್ಟಕ್ಕೆ ಬರುವುದಿಲ್ಲ. ವೃದ್ಧರಾಗುವುದು ಒಂದು ಕಲೆ. ಇದನ್ನು ಸಾಕಷ್ಟು ಶ್ರಮದಿಂದ ಕಲಿಯಬೇಕಾಗುತ್ತದೆ. ಏನು ಹೇಳಿದಿರಿ, ನೀವು? ನನ್ನ ವಯಸ್ಸೆ? ಸ್ವಲ್ಪ ಅಂದಾಜು ಹಾಕಿ! ಅರೇ ಇಲ್ಲ ಸ್ವಾಮಿ–ನೀವು ನನ್ನನ್ನು ವ್ಯರ್ಥವಾಗಿ ಖುಷಿ ಪಡಿಸಲು ಪ್ರಯತ್ನಿಸುತ್ತಿದ್ದೀರಿ. ಹಾಗಂತ ನೀವು ನನ್ನನ್ನು ಖಂಡಿತ ಖುಷಿಗೊಳಿಸಿದ್ದೀರಿ. ಒಂದು ವೇಳೆ ಈ ಖುಷಿಗಾಗಿ ನಾನು ಮತ್ತೊಂದು ಬೀರನ್ನು ತೆಗೆದುಕೊಂಡರೆ ನಮ್ಮ ಆಕ್ಷೇಪಣೆ ಇಲ್ಲ ತಾನೇ? ಮತ್ತೆ ನೀವು? ನೀವು ತೆಗೆದುಕೊಳ್ಳುವುದಿಲ್ಲವೇ?ಇಲ್ಲ..... ನಾನು ಹಟ ಮಾಡಲ್ಲ. ಪ್ರತಿಯೊಬ್ಬರಿಗೂ ತಮ್ಮ ಜೀವನ ಮತ್ತು ಮದ್ಯವನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವಿರಬೇಕು......ಎರಡನ್ನು ಕೇವಲ ಒಮ್ಮೆ ಮಾತ್ರ ಆರಿಸಿಕೊಳ್ಳಲು ಸಾಧ್ಯ. ಒಮ್ಮೆ ಕುಡಿದಿದ್ದನ್ನು ಅಥವಾ ಒಮ್ಮೆ ಬದುಕಿದ್ದನ್ನು. ನಂತರ ನಾವು ಕೇವಲ ಪುನರುಚ್ಚರಿಸುತ್ತಿರುತ್ತೇವೆ, ಅಷ್ಟೆ. ನೀವು ಪುನರ್ ಜನ್ಮವನ್ನು ನಂಬುತ್ತೀರ? ಅಂದರೆ, ಸಾವಿನ ನಂತರದ್ದು? ನೀವು ಯಾವ ಧರ್ಮವನ್ನೂ ನಂಬಲ್ಲ ಅಂತ ನೀವು ಹೇಳಲ್ಲವೆಂಬ ಭರವಸೆ ನನಗಿದೆ. ನಾನು ಕ್ಯಾಥೋಲಿಕ್, ಸಾವಿನ ನಂತರವೂ ಮನುಷ್ಯ ಪೂರ್ಣವಾಗಿ ಸಾಯಲ್ಲ......ನಾವು ಮೊದಲು ಒಂದು ಬದುಕನ್ನು ಪೂರ್ಣಗೊಳಿಸುತ್ತೇವೆ. ನಂತರ ಎರಡನೆಯದು. ಆಮೇಲೆ ಮೂರನೆಯದು. ನಿಮ್ಮ ಈ ನಂಬಿಕೆ ನನಗೆ ತುಂಬಾ ಕುತೂಹಲವೆನಿಸುತ್ತದೆ. ಸಾಮಾನ್ಯವಾಗಿ ರಾತ್ರಿ ವೇಳೆ ನಾನು ಈ ಸಮಸ್ಯೆಯ ಬಗ್ಗೆ ಯೋಚಿಸುತ್ತೇನೆ..... ನನ್ನ ವಯಸ್ಸಿಗೆ ಸುಲಭವಾಗಿ ನಿದ್ರೆ ಬರುವುದಿಲ್ಲವೆಂದು ನಿಮಗೆ ತಿಳಿದಿದೆ. ನಿದ್ರೆಗೆ ಸ್ವಲ್ಪ ಬೇಜಾವಾಬ್ದಾರಿತನ ಬೇಕು. ಸ್ವಲ್ಪ ಆಯಾಸ ಬೇಕು. ಒಂದು ವೇಳೆ ನಿಮ್ಮ ಬಳಿ ಈ ಎರಡೂ ಇಲ್ಲದಿದ್ದರೆ, ನೀವು ಅದನ್ನು ಒಂದೂವರೆ ಚಟಾಕು ಬೀರ್ ಕುಡಿದು ಪ್ರತಿಫಲ ಪಡೆಯಬಹುದು....ಹೀಗಾಗಿ ನಾನು ನಿತ್ಯ ನಡು ರಾತ್ರಿ ಇಲ್ಲಿಗೆ ಬರುತ್ತೇನೆ. ಕಳೆದ ಹದಿನೈದು ವರ್ಷಗಳಿಂದ ಚಾಚೂ ತಪ್ಪದಂತೆ. ನಾನು ಸ್ವಲ್ಪ ನಿದ್ರಿಸುತ್ತೇನೆ. ಆದರೆ ಮೂರು ಗಂಟೆಯ ಹೊತ್ತಿಗೆ ನನ್ನ ನಿದ್ರೆ ಹಾರಿ ಹೋಗುತ್ತದೆ.....ಆಮೇಲೆ ನಾನು ಮನೆಯಲ್ಲಿ ಒಂಟಿಯಾಗಿ ಇರಲಾರೆ. ರಾತ್ರಿಯ ಮೂರುಗಂಟೆ..... ಅದು ಭಯಾನಕ ಗಳಿಗೆ. ನಾನು ನಿಮಗೆ ಇದನ್ನು ಅನುಭವದಿಂದ ಹೇಳುತ್ತಿದ್ದೇನೆ. ಎರಡು ಗಂಟೆಯಾದಾಗ. ಇನ್ನೂ ರಾತ್ರಿಯೆನಿಸುತ್ತದೆ. ನಾಲ್ಕು ಗಂಟೆಗೆ ಬೆಳಕು ಹರಿಯಲಾರಂಭಿಸುತ್ತದೆ. ಆದರೆ ಮೂರು ಗಂಟೆಗೆ. ನೀವು ಅತ್ತಲೂ ಇಲ್ಲ. ಇತ್ತಲೂ ಇಲ್ಲವೆಂದು ನಿಮಗನಿಸುತ್ತದೆ. ನನಗೆ ಸದಾ. ಸಾವು ಬರುವ ಗಳಿಗೆ ಎಂದರೆ ಇದೇ ಅಂತ ಅನಿಸುತ್ತೆ. ನೀವೇನಂದಿರಿ? ಇಲ್ಲ ಸ್ವಾಮಿ. ನಾನು ಸರ್ವಥಾ ಒಂಟಿಯಾಗಿರುವುದಿಲ್ಲ. ಪೆನಶನ್ ತೆಗೆದುಕೊಳ್ಳುವವರ ಅವರದೇಯಾದ ಆಸಕ್ತಿಯಿರುತ್ತೆದೆಂಬುದು ನಿಮಗೆ ಗೊತ್ತಿದೆ. ನನ್ನ ಬಳಿ ಒಂದು ಚೆಕ್ಕಿದೆ –ಅದೆಷ್ಟೋ

ಕುಡಿಯುವುದು. ಕುಡಿಯದಿರುವುದು ಒಂದೇ. ಹೌದು. ಸರಿಯಾದ ಅಂತರವೆಂದರೆ ಒಂದೂವರೆ ಇಂಚು.

ಬೆಂಕಿಕಡ್ಡಿಯಂತೆ ಉರಿವುದನ್ನು ನೋಡುವಷ್ಟು ಪ್ರಜ್ಞೆ ಖಂಡಿತ ನಿಮ್ಮಲ್ಲಿರಬೇಕು..... ಬೆಂಕಿ ಕಡ್ಡಿಯ ಬೆಂಕಿ ನಿಮ್ಮ ಬೆರಳುಗಳಿಗೆ ತಾಗುತ್ತಲೇ ಅದನ್ನು ಬಿಟ್ಟುಬಿಡಬೇಕು. ಅದಕ್ಕೂ ಮೊದಲು ಬಿಡಬಾರದು. ನಂತರವು ಸಲ್ಲ. ಎಲ್ಲಿಯವರೆಗೆ ಹಿಡಿದಿಟ್ಟುಕೊಳ್ಳಬೇಕು. ಯಾವಾಗ ಬಿಡಬೇಕು ಎಂಬ ರಹಸ್ಯ ಕುಡಿತದಲ್ಲಿ ಅಡಗಿದೆ. ಆದರೆ ಒಂದೂವರೆ ಇಂಚಿಗಿಂತ ಮೇಲಕ್ಕೆ ಹೋಗದ ಹೊರತು ನಮಗೆ ಅದು ಅರ್ಥವಾಗಲ್ಲ- ತೊಂದರೆಯೆಂದರೆ ಇದೇ... ಆಮೇಲೆ ಅದರ ಉಪಯೋಗವಿಲ್ಲ. ಗುರುತು ಹಿಡಿಯುವುದರಿಂದ ಆಚೆ ಹೋದಾಗಲೇ ಗುರುತು ಸಿಗುವದೆಂಬ ವಿಷಯ ತಿಳಿದು ಬಹುಶ: ನೀವು ನಗಬಹುದು. ನೀವು ನಕ್ಕು ನನ್ನ ಮಾತನ್ನು ಅಲ್ಲಗಳೆದರೆ ನನಗೆ ಕೆಡುಕೆನಿಸುವುದಿಲ್ಲ...... ಅದೆಷ್ಟೋ ವಿಷಯಗಳನ್ನು ತಿಳಿಯದಿರುವುದೇ. ನನ್ನನ್ನು ಸುರಕ್ಷಿತವಾಗಿಟ್ಟುಕೊಳ್ಳುವ ಮಾರ್ಗವೆಂದು ನಾನು ಆಗಾಗ್ಗೆ ಪ್ರಯತ್ನಿಸುತ್ತಿರುತ್ತೇನೆ. ನೀವು ಕ್ರಮೇಣ ಈ ಆಸೆಯೊಂದಿಗೆ ಬದುಕಲು ಕಲಿಯುತ್ತೀರಿ...... ಉದಾಹರಣೆಗೆ ನೀವು ನಿಮ್ಮ ಹೆಂಡತಿಯೊಂದಿಗೆ ಇರಲು ಕಲಿಯುವಂತೆ... ಒಂದೇ ಮನೆಯಲ್ಲಿ ವರ್ಷಗಟ್ಟಲೆ..... ಆದಾಗ್ಯೂ. ಅವಳು ನಿಮ್ಮದೇ ರೀತಿಯ ಆಟವನ್ನು ಆಡುತ್ತಿದ್ದಾಳೆಂಬ ಅನುಮಾನವಿರುತ್ತದೆ. ಒಮ್ಮೊಮ್ಮೆ ನೀವು ಈ ಸಂಶಯದಿಂದ ಬಿಡುಗಡೆ ಹೊಂದಲು ಎರಡನೆಯ ಅಥವಾ ಮೂರನೆಯ ಹೆಣ್ಣನ್ನು ಪ್ರೀತಿಸಲು ಪ್ರಾರಂಭಿಸುತ್ತೀರಿ. ಇದು ನಿರಾಸೆಗೊಳ್ಳುವ 'ಪ್ರಾರಂಭ' ಯಾಕೆಂದರೆ ಎರಡನೆಯ ಹೆಣ್ಣಿನ ಅವಳದೇಯಾದ ರಹಸ್ಯವೂ ಇರುತ್ತದೆ. ಹಾಗೆಯೇ ಮೂರನೆಯ ಹೆಣ್ಣಿನ ಅವಳದೇಯಾದ ರಹಸ್ಯವೂ ಇರುತ್ತದೆ. ಇದು ಚದುರಂಗದಾಟದಂತೆ..... ನೀವು ಒಂದು ದಾಳ ನಡೆಸುತ್ತೀರಿ. ಇದರಿಂದಾಗಿ ನಿಮ್ಮ ವಿರೋಧಿಗಳೆದುರು ಕೊನೆಯೇ ಇಲ್ಲದ ಸಾಧ್ಯತೆಗಳು ತೆರೆದುಕೊಳ್ಳುತ್ತವೆ. ಒಂದು ಆಟ ಸೋತ ನಂತರ ನೀವು ಮತ್ತೊಂದು ಆಟದಲ್ಲಿ ಗೆಲ್ಲುವ ಆಸೆ ತಾಳುತ್ತೀರಿ. ಎರಡನೆಯ ಆಟದಲ್ಲಿ ತನ್ನದೇಯಾದ ಸಾಧ್ಯತೆಗಳಿವೆ ಎಂಬುದನ್ನು ನೀವು ಮರೆತುಬಿಡುತ್ತೀರಿ- ಮೊದಲನೆಯ ಆಟದಂತೆ ಕೊನೆಯಿಲ್ಲದ ಹಾಗೂ ರಹಸ್ಯಮಯ ಸಾಧ್ಯತೆಗಳು. ನೋಡಿ..... ನೀವು ಜೀವನದಲ್ಲಿ ಅದೆಷ್ಟೋ ಹೆಣ್ಣುಗಳ ಸಂಪರ್ಕಕ್ಕೆ ಬಂದರೂ. ವಾಸ್ತವವಾಗಿ ನಿಮ್ಮ ಸಂಪರ್ಕ ಒಂದು ಹೆಣ್ಣಿನೊಂದಿಗೆ ಮಾತ್ರವೇ ಎಂದು ಅದಕ್ಕೇ ನಾನು ಹೇಳುವುದು..... ಏನೆಂದಿರಿ ನೀವು? ಇಲ್ಲ. ನಾನು ಮನೆಯಲ್ಲಿ ಒಂಟಿಯಾಗಿ ವಾಸಿಸುತ್ತಿದ್ದೇನೆಂದು ಈ ಮೊದಲೆ ನಿಮಗೆ ಹೇಳಿರುವೆ ನನ್ನ ಬೆಕ್ಕನ್ನು ಹೊರತುಪಡಿಸಿ. ಹೌದು ಸ್ವಾಮಿ. ನಾನು ವಿವಾಹಿತ..... ನನ್ನ ಹೆಂಡತಿ ಈಗ ಬದುಕಿಲ್ಲ.... ಇದು ನನ್ನ ಸಂದೇಹ. ನೀವು ಸ್ವಲ್ಪ ಆಶ್ಚರ್ಯಚಕಿತರಾಗುತ್ತಿದ್ದೀರಿ. ಸಂದೇಹವೆಂದು ನಾನ್ಯಾಕೆ ಹೇಳುತ್ತಿದ್ದೇನೆಂದರೆ. ನಾನು ಅವಳು ಸಾಯುವುದನ್ನು ನೋಡಲಿಲ್ಲ. ನೀವು ನಿಮ್ಮ ಕಣ್ಣಾರೆ ಯಾರಾದರೂ ಸಾಯುವುದನ್ನು ನೋಡದಿದ್ದರೆ.

ನಿಮ್ಮ ಕೈಯಾರೆ ಹೂಳದಿದ್ದರೆ, ಅವರು ಬದುಕಿಲ್ಲವೆಂದು ನೀವು ಕೇವಲ ಅಂದಾಜು ಮಾಡಬಹುದು. ಬಹುಶ; ನಿಮಗೆ ನಗು ಬರಬಹುದು. ಆದರೆ ನನಗನ್ನಿಸುತ್ತೆ, ನೀವು ಖುದ್ದಾಗಿ ನಿಮ್ಮ ಪರಿಚಿತರು ಸಾಯುವುದನ್ನು ನೋಡದಿದ್ದಾಗ, ಅವರಿನ್ನೂ ಬದುಕಿದ್ದಾರೆಂಬ ಅಸ್ಪಷ್ಟ ಆಸೆ ಇದ್ದೇ ಇರುತ್ತದೆ...... ನೀವು ಬಾಗಿಲು ತೆರೆದಾಗ, ಅವಳು ಟವಲ್‌ಗೆ ಕೈ ಒರೆಸುತ್ತಾ ನಿಮ್ಮೆದುರಿಗೆ ಬಂದು ನಿಲ್ಲುತ್ತಾಳೆ. ಖಂಡಿತ, ಇದು ಭ್ರಮೆ. ಹೀಗಾಗುವುದಿಲ್ಲ. ಅದಕ್ಕೆ ಬದಲಾಗಿ, ಈಗ ಬೆಕ್ಕು ಬರುತ್ತದೆ–ಬಾಗಿಲ ಹಿಂದೆ ಹೊಸ್ತಿಲ ಮೇಲೆ ತಲೆಯೂರಿ ತನ್ನ ಕಣ್ಣುಗಳ ಬಣ್ಣವನ್ನು ಬದಲಾಯಿಸುವ ಬೆಕ್ಕು ಬರುತ್ತದೆ. ಕಾಲ ಬಹಳಷ್ಟನ್ನು ಒಣಗಿಸಿಬಿಡುತ್ತದೆ ಎಂದು ಜನ ಆಡಿಕೊಳ್ಳುವುದನ್ನು ನಾನು ಕೇಳಿದ್ದೇನೆ..... ನೀವೂ ಹೀಗೇ ಯೋಚಿಸುತ್ತೀರಾ? ನನಗೆ ಗೊತ್ತಿಲ್ಲ..... ಆದರೆ ಅದು ಉಪಯೋಗಿಸುವಷ್ಟು ಒಣಗಿಸುವುದಿಲ್ಲವೆಂದು ಒಮ್ಮೊಮ್ಮೆ ನನಗನ್ನಿಸುತ್ತದೆ– ಅಂಧಕಾರದ ಮೂಲೆಗಳಲ್ಲಿ ಅಥವಾ ಜಮಖಾನೆಯ ಕೆಳಗೆ, ಹೊರಗೆ ಯಾರಿಗೂ ಕಾಣಿಸದಂತೆ...... ಆದರೆ ಅದರ ಅಂಗೈಗಳು ಸದಾ ಹೊರಗಿರುತ್ತವೆ, ಯಾವುದೇ ಅಪರಿಚಿತ ಗಳಿಗೆಯಲ್ಲಿ ಅದು ನಿಮ್ಮನ್ನು ಹಿಡಿದಿಟ್ಟುಕೊಳ್ಳಬಲ್ಲದು. ಬಹುಶ; ನಾನು ಹಾದಿ ತಪ್ಪುತ್ತಿರುವೆ..... ಬೀರ್ ಕುಡಿಯುವ ಸುಖ ಇದು. ನೀವು ಹಾದಿ ತಪ್ಪಿಸುತ್ತು ಹಾಕಲಾರಂಭಿಸುತ್ತೀರಿ..... ಒಂದೇ ವೃತ್ತದ ಸುತ್ತ ಮುತ್ತ... ರೌಂಡ್ ಆ್ಯಂಡ್ ರೌಂಡ್. ಮಕ್ಕಳು ವೃತ್ತಾಕಾರದಲ್ಲಿ ಕೂತಿದ್ದು, ಒಬ್ಬ ಟೋಪಿ ಹಿಡಿದು ಸುತ್ತು ಹಾಕುವ ಟೋಪಿ ಆಟವನ್ನು ನೀವು ಬಲ್ಲಿರಿ. ನಿಮ್ಮ ದೇಶದಲ್ಲಿ ಆಡಲಾಗುತ್ತಿದೆಯೇ? ವಾಹ್... ನೋಡೀರಲ್ಲ.. ನಾವು ಎಷ್ಟೇ ಬೇರೆಯಾದರೂ, ಮಕ್ಕಳಾಟ ಎಲ್ಲೆಡೆಯಲ್ಲಿಯೂ ಒಂದೇ ತೆರನಾಗಿರುತ್ತವೆ. ಆ ದಿನಗಳಲ್ಲಿ ನಮ್ಮೆಲ್ಲರ ಪರಿಸ್ಥಿತಿಯು ಸುಮಾರಾಗಿ ಹಾಗೆಯೇ ಇತ್ತು.... ಯಾವಾಗ, ಯಾರ ಹಿಂದೆ ಬಲೆ ಬೀಸುತ್ತದೆಯೆಂದು ನಮ್ಮಲ್ಲಿ ಯಾರಿಗೂ ತಿಳಿದಿರಲಿಲ್ಲ. ಪ್ರತಿಯೊಬ್ಬರೂ ಭಯಗೊಂಡ ಮಗುವಿನಂತೆ ಪದೇ ಪದೇ ಹಿಂದಕ್ಕೆ ತಿರುಗಿ , ತನ್ನ ಹಿಂದೆ ಟೋಪಿ ಇಲ್ಲವಲ್ಲವೆಂದು ನೋಡಿಕೊಳ್ಳುತ್ತಿದ್ದರು..... ಹೌದು, ಆ ದಿನಗಳಲ್ಲಿಯೇ ಇಲ್ಲಿಗೆ ಜರ್ಮನ್ನರು ಬಂದಿದ್ದರು. ಆ ದಿನಗಳಲ್ಲಿ ನೀವು ತುಂಬಾ ಚಿಕ್ಕವರಿರಬೇಕು. ನನಗೂ ಹೆಚ್ಚು ವಯಸ್ಸಾಗಿರಲಿಲ್ಲ. ಯುದ್ಧದಿಂದಾಗಿ, ಬೆಳಿಗ್ಗೆಯಿಂದ ಸಂಜೆಯವರೆಗೆ ಕೆಲಸದಲ್ಲಿ ಮಗ್ನರಾಗಿರಬೇಕಿತ್ತು. ನಾನು ಒಂದು ಯುವ ಎತ್ತಿನಂತೆ ದೃಢವಾಗಿದ್ದೆ. ಒಂದು ವಯಸ್ಸಿನಲ್ಲಿ ಪ್ರತಿಯೊಬ್ಬರೂ ಒಂದು ಸರಾಸರಿ ಸುಖದ ವೃತ್ತದಲ್ಲಿರಲು ಕಲಿಯುತ್ತಾರೆ..... ಅದರಿಂದ ಹೊರತು ಪಡಿಸಿ ನೋಡುವ ಅವಕಾಶ, ಸಮಯ ಅವನಿಗಿರುವದಿಲ್ಲ. ಖುದ್ದಾಗಿ ಅದರ ವೃತ್ತದಲ್ಲಿ ಸಿಕ್ಕಿಹಾಕಿಕೊಂಡು ಅನುಭವಿಸುವವರೆಗೆ..... ಯಾವದನ್ನು ನಾವು ಸುಖವೆಂದು ಹೇಳುತ್ತೇವೆಯೋ, ಅದೊಂದು ವಿಶೇಷ ಕ್ಷಣವೆಂಬುದು ಸಾಮಾನ್ಯವಾಗಿ ನಿಮಗೆ ತಿಳಿದಿರಬೇಕು– ಹಾಗಂತ ಅದು ಗಟ್ಟಿ– ಆದರೆ ಆ ಕ್ಷಣದಿಂದ ಹಾದು ಹೋದ ಮೇಲೆ ಅದು ತುಂಬಾ ನಿಸ್ಸಾರ ಮತ್ತು ಸ್ವಲ್ಪ ಹ್ಯಾಂಗೋವರ್‌ನಂತೆ ಅಸ್ಪಷ್ಟವಾಗಿ

ತೋರುತ್ತದೆ. ಆದರೆ ಯಾವದನ್ನು ನಾವು ದು;ಖ ಅಥವಾ ತೊಂದರೆ ಅಥವಾ ಕಷ್ಟವೆಂದು ಹೇಳುತ್ತೇವೋ. ಅದಕ್ಕೆ ಯಾವುದೇ ವಿಶೇಷ ಸಮಯವಿರುವುದಿಲ್ಲ....... ಅಂಪರೆ. ಅದು ಅದೇ ರೀತಿಯಾಗಿ ದುರ್ಘಟನೆಯ ಸಮಯದಂದು ಅನುಭವಕ್ಕೆ ಬರುವದಿಲ್ಲ. ಅಂಥ ದುರ್ಘಟನೆಯ ಸಮಯದಲ್ಲಿ ನಾವು ಎಚ್ಚರ ತಪ್ಪಿದಂತಾಗಿ ಬಿಡುತ್ತೇವೆ. ನಾವು ಅದರಿಂದ ಹುಟ್ಟುವ ಯಾತನೆಗೆ. ಅದನ್ನು ಸರಿಯಾಗಿ ಫಿಟ್" ಮಾಡುವಂಥ ಯಾವುದೇ ಸಿದ್ಧ ಫ್ರೇಮನ್ನು ಹುಡುಕಲಾರೆವು. ದುರ್ಘಟನೆಯೊಂದು ನಡೆಯುವುದು ಒಂದು ವಿಚಾರ.....ಅದರ ಸರಿಯಾದ ಪರಿಣಾಮವನ್ನು ಜೀವಮಾನವಿಡಿ ಅನುಭವಿಸುವದು ಅಥವಾ ಅನುಭವಿಸಲು ಯೋಗ್ಯರಾಗುವುದು. ಇದು ಮತ್ತೊಂದು ವಿಚಾರ. ಇದು ಅಸಂಭವ......ಹೀಗಾಗುವುದಿಲ್ಲ. ನಾನು ಹೇಳುವುದೇನೆಂದರೆ......ನಮ್ಮನ್ನು, ಪದೇ ಪದೇ ಮತ್ತೊಬ್ಬರ ಪರಿಸ್ಥಿತಿಯಲ್ಲಿಟ್ಟುಕೊಂಡು, ಅವರು ಅನುಭವಿಸಿದ್ದ ಕಷ್ಟವನ್ನು ಕಲ್ಪಿಸಿಕೊಳ್ಳುವದು..... ಅದು ಸ್ವಲ್ಪ ಕಡಿಮೆಯಾಗಬಹುದು ಅಥವಾ ಸ್ವಲ್ಪ ಹೆಚ್ಚಾಗಬಹುದು... ಆದರೆ ಮತ್ತೊಬ್ಬರು ಅನುಭವಿಸಿದಷ್ಟು ಅದು ಇರಲಾರದು ಅಥವಾ ಅಂಥದ್ದು ಇರಲಾರದು... ಇಲ್ಲ.. ಇಲ್ಲ... ನೀವು ತಪ್ಪು ತಿಳಿಯಬೇಡಿ. ನಾನು ನನ್ನ ಹೆಂಡತಿ ಕಷ್ಟ ಅನುಭವಿಸಿದ್ದನ್ನು ನೋಡಲಿಲ್ಲ. ನಾನು ಮನೆಗೆ ಹೋದಾಗ ಅವರು ಅವಳನ್ನು ಹಿಡಿದುಕೊಂಡು ಹೋಗಿದ್ದರು. ಏಳು ವರ್ಷದ ವೈವಾಹಿಕ ಬದುಕಿನಲ್ಲಿ, ನಾನು ಖಾಲಿ ಮನೆಗೆ. ನುಗ್ಗಿದ್ದ ಮೊದಲ ವೇಳೆ ಅದಾಗಿತ್ತು. ಬೆಕ್ಕು? ಇಲ್ಲ. ಆ ದಿನಗಳಲ್ಲಿ ಅದು ನನ್ನೊಂದಿಗಿರಲಿಲ್ಲ. ನಾನು ಅದನ್ನು ಅನೇಕ ವರ್ಷಗಳ ನಂತರ ಸಾಕಲು ಪ್ರಾರಂಭಿಸಿದ್ದೆ. ನೆರೆಮನೆಯ ಜನ ತಮ್ಮ ಮನೆಯ ಕಿಟಕಿಗಳಿಂದ ಇಣುಕಿ ಖಂಡಿತ ನನ್ನನ್ನು ಗಮನಿಸುತ್ತಿದ್ದರು. ಇದು ಸಹಜವೂ ಆಗಿತ್ತು. ನಾನು. ಅವರ ಸಂಬಂಧಿಕರನ್ನು ಗೆಸ್ಟಾಪೋ ಪೋಲೀಸರು ಹಿಡಿದುಕೊಂಡು ವ್ಯಾನಿನಲ್ಲಿ ಕರೆದೊಯ್ಯುತ್ತಿದ್ದುದನ್ನು, ನನ್ನ ಕಣ್ಣಾರೆ ಕಿಟಕಿಯಿಂದ ಇಣುಕಿ ನೋಡುತ್ತಿದ್ದೆ. ಆದರೆ. ನಾನೊಂದು ದಿನ ಮರಳಿ ಮನೆಗೆ ಬಂದಾಗ ಹೆಂಡತಿಯ ಕೋಣೆ ಖಾಲಿ ಇರುವುದೆಂಬ ಕಲ್ಪನೆಯನ್ನು ನಾನೆಂದೂ ಮಾಡಿರಲಿಲ್ಲ. ನೋಡಿ...... ನಾನು ನಿಮ್ಮಲ್ಲಿ ಒಂದು ವಿಷಯ ಕೇಳಲು ಬಯಸ್ತಿನಿ- ನಾವು. ಯಾತನೆ ಅಥವಾ ದುರ್ಘಟನೆಯ ಬಗ್ಗೆ ಕೇಳಿದಾಗ ಅಥವಾ ಇವುಗಳ ಬಗ್ಗೆ ಪತ್ರಿಕೆಯಲ್ಲಿ ಓದಿದಾಗ ಇವು ನಮ್ಮೊಂದಿಗೇ ಘಟಿಸಬಹುದು ಅಥವಾ ಘಟಿಸಬಹುದಿತ್ತು ಎಂಬ ವಿಚಾರ ನಮಗೆಂದೂ ಬರುವದಿಲ್ಲವಲ್ಲ- ಇದು ವಿಚಿತ್ರವಲ್ಲವೇ? ಇಲ್ಲ. ಇವೆಲ್ಲಾ ಬೇರೆಯವರಿಗೇ ಸಂಬಂಧಿಸಿದ್ದು ಅಂತ ನಮಗೆ ಸದಾ ಅನ್ನಿಸುತ್ತದೆ......ಆಹಾ.....ನೀವು ಮತ್ತೊಂದು ಬೀರ್ ಸೇವಿಸುತ್ತಿದ್ದೀರಿ ಎಂಬುವದನ್ನು ನೋಡಿ ನನಗೆ ಖುಷಿಯಾಯಿತು. ನೀವು ಖಾಲಿ ಗ್ಲಾಸ್ ಎದುರು ರಾತ್ರಿಯಲ್ಲಾ ಕೂರಲಾರಿರಿ...... ಏನೆಂದಿರಿ ನೀವು? ನೀವು ಈ ಪ್ರಶ್ನೆಯನ್ನು ಖಂಡಿತ ಕೇಳುತ್ತೀರೆಂದು ನನಗೆ ಗೊತ್ತಿತ್ತು. ಒಂದು ವೇಳೆ ನೀವು ಕೇಳದಿದ್ದರೆ ಸ್ವಲ್ಪ ಆಶ್ಚರ್ಯವಾಗುತ್ತಿತ್ತು. ಇಲ್ಲ, ಸ್ವಾಮಿ....... ಪ್ರಾರಂಭದಲ್ಲಿ ನನಗೂ ಏನೂ ಅರ್ಥವಾಗಲಿಲ್ಲ. ಅಂಥ ದುರ್ಘಟನೆಯ

ಸಂದರ್ಭದಲ್ಲಿ ಮನುಷ್ಯ ದಿಕ್ಕುತಪ್ಪಿದಂತಾಗಿ ಬಿಡುತ್ತಾನೆಂದು ನಿಮಗೆ ಹೇಳಿರಲಿಲ್ಲವೆ..... ಅವನು ಸರಿಯಾಗಿ ತನ್ನ ಯಾತನೆಯ ಅಂದಾಜನ್ನೂ ಮಾಡಲಾರ. ನನ್ನ ಹೆಂಡತಿಯ ವಸ್ತುಗಳೆಲ್ಲವೂ ಸುತ್ತ- ಮುತ್ತ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು-ಬಟ್ಟೆಗಳು, ಪುಸ್ತಕಗಳು. ಹಳೆಯ ಪತ್ರಿಕೆಗಳು, ಅಲ್ಮೆರಾಗಳು ಮತ್ತು ಮೇಜುಗಳ ಖಾನೆಗಳು ತೆರೆದುಕೊಂಡಿದ್ದವು. ಅವುಗಳ ಒಳಗಿದ್ದ ಚಿಕ್ಕ-ಪುಟ್ಟ ವಸ್ತುಗಳು ನೆಲದ ಮೇಲೆ ಉಲ್ಟಾ ಪಲ್ಟಾ ಬಿದ್ದಿದ್ದವು. ಕ್ರಿಸ್‌ಮಸ್ ಉಡುಗೊರೆಗಳು ಹೊಲಿಗೆ ಯಂತ್ರ, ಹಳೆಯ ಫೋಟೋ ಅಲ್ಬಮ್‌ಗಳು..... ವಿವಾಹದ ನಂತರ ಅದೆಷ್ಟು ವಸ್ತುಗಳು ತನ್ನಷ್ಟಕ್ಕೆ ತಾನೇ ಜಮಾಯಿಸಿ ಕೊಳ್ಳುತ್ತದೆಯೆಂದು ನಿಮಗೆ ತಿಳಿದಿದೆ. ಅವರು ಪ್ರತಿಯೊಂದು ವಸ್ತುವನ್ನು ಕೂಲಂಕಷವಾಗಿ ಪರೀಕ್ಷಿಸಿದ್ದರು. ಮೂಲೆಯನ್ನು ಬಿಡದಂತೆ ತಡಕಾಡಿದ್ದರೆಂದು ತೋರುತ್ತಿತ್ತು..... ಅವರ ಕೈಯಿಂದ ಪಾರಾಗದ ವಸ್ತುಗಳೇ ಇರಲಿಲ್ಲ. ಅಂದು ರಾತ್ರಿ ನಾನು ನನ್ನ ಕೋಣೆಯಲ್ಲಿ ಕೂತಿದ್ದೆ. ನನ್ನ ಹೆಂಡತಿಯ ಹಾಸಿಗೆ ಶೂನ್ಯವಾಗಿತ್ತು. ತಲೆದಿಂಬಿನಡಿಯಲ್ಲಿ ಅವಳ ಕರ್ಚೀಫು. ಮ್ಯಾಚ್‌ಬಾಕ್ಸ್ ಮತ್ತು ಸಿಗರೇಟಿನ ಪ್ಯಾಕಿತ್ತು. ನಿದ್ರಿಸುವುದಕ್ಕೂ ಮೊದಲು ಅವಳು ಸದಾ ಸಿಗರೇಟ್ ಸೇದುತ್ತಿದ್ದಳು. ಪ್ರಾರಂಭದಲ್ಲಿ ಅವಳ ಈ ಅಭ್ಯಾಸ ನನಗೆ ಕೆಡುಕೆನಿಸಿತ್ತು, ಆದರೆ ಕ್ರಮೇಣ ಅಭ್ಯಾಸವಾಯಿತು. ಮಂಚದ ಬಳಿ ತಿಪಾಯಿಯ ಮೇಲೆ ಅವಳ ಪುಸ್ತಕವಿತ್ತು, ಅದನ್ನು ಅವಳು ಆ ದಿನಗಳಲ್ಲಿ ಓದುತ್ತಿದ್ದಳು..... ಯಾವ ಪುಟವನ್ನು ಕಳೆದ ರಾತ್ರಿ ಓದಿ ಮುಗಿಸಿದ್ದಳೋ, ಅಲ್ಲಿ ಗುರುತಿಗಾಗಿ ತನ್ನ ಕ್ಲಿಪ್ ಸಿಗಿಸಿದ್ದಳು. ಕ್ಲಿಪ್‌ನಲ್ಲಿ ಅವಳ ತಲೆಗೂದಲುಗಳ ಗಂಧವಿತ್ತು..... ವರ್ಷಗಳ ನಂತರವೂ ಹೇಗೆ ನಮಗೆ ಚಿಕ್ಕ ಚಿಕ್ಕ ಮಾಹಿತಿಗಳು ನೆನಪಿನಲ್ಲಿರುತ್ತವೆಂಬುದು ನಿಮಗೆ ತಿಳಿದಿದೆ. ಇದು ಬಹುಶಃ ವಾಸ್ತವವೂ ಹೌದು. ವಿವಾಹಕ್ಕೂ ಮೊದಲು ನಾವು ಸದಾ ಅನುಭವ ಪೂರ್ಣ ವಸ್ತುಗಳ ಬಗ್ಗೆಯೇ ಯೋಚಿಸುತ್ತೇವೆ. ಆದರೆ ವಿವಾಹದ ನಂತರ ಇಂಥ ವಸ್ತುಗಳು ತುಂಬಾ ಕಾಲ ಜೊತೆಯಲ್ಲಿದ್ದುದರಿಂದಾಗಿ ಕೈಜಾರಿ ಹೋಗುತ್ತವೆ ಕೆಲವು ಚಿಕ್ಕ ಪುಟ್ಟ ಅಭ್ಯಾಸಗಳು, ಮೇಲುನೋಟಕ್ಕೆ ಸಮತಳವಾಗಿ ಕಾಣುವ ದಿನಚರಿಗಳು ಹಾಗೂ ದಿನನಿತ್ಯದ ಪರಸ್ಪರ ಭೇದ ಭಾವನೆಗಳು ಉಳಿದು ಬಿಡುತ್ತವೆ- ಇವುಗಳನ್ನು ನಾಚಿಕೆಯಿಂದಾಗಿ ಇನ್ನೊಬ್ಬರೆದುರು ನಾವೆಂದೂ ಹೇಳಲಾರೆವು, ಆದರೆ ಇವುಗಳಿಲ್ಲದೆ ಎಲ್ಲಾ ಶೂನ್ಯವೆಂದು ತೋರುತ್ತದೆ. ಅಂದು ರಾತ್ರಿ ನಾನು ಒಂಟಿಯಾಗಿ ಕೋಣೆಯಲ್ಲಿ ನನ್ನ ಹೆಂಡತಿಯ ವಸ್ತುಗಳೊಂದಿಗೆ ಕೂತಿದ್ದೆ.....ಆಗ ಬಹುಶಃ ನಾನು ನಾನಾಗಿರಲಿಲ್ಲ. ನನಗೇನೂ ತಿಳಿಯುತ್ತಿರಲಿಲ್ಲ. ಅವಳು ತನ್ನ ಕೋಣೆಯಲ್ಲಿರಲಿಲ್ಲ...... ಇದೊಂದು ವಾಸ್ತವಿಕತೆ ಮಾತ್ರವಾಗಿತ್ತು. ನಾನದನ್ನು ಅರ್ಥ ಮಾಡಿಕೊಳ್ಳುತ್ತಿದ್ದೆ. ಆದರೆ ಅವರು ಅವಳನ್ನು ಹಿಡಿದುಕೊಂಡು ಹೋಗಿದ್ದರು. ಈ ಭಯಾನಕ ರಹಸ್ಯ ನನ್ನ ಹಿಡಿತಕ್ಕೆ ಸಿಗುತ್ತಿರಲಿಲ್ಲ. ಅಲ್ಲ, ನನ್ನ ಪತ್ನಿಯೇ ಯಾಕೆ? ನಾನು ಅಂದು ರಾತ್ರಿ ಪದೇ ಪದೇ ನನ್ನಲ್ಲಿ ಈ ಪ್ರಶ್ನೆಯನ್ನು ಕೇಳಿಕೊಳ್ಳುತ್ತಲಿದ್ದೆ. ಏಳು ವರ್ಷಗಳ ವೈವಾಹಿಕ ಬದುಕಿನಲ್ಲಿ ಮೊದಲ ಬಾರಿಗೆ ನನಗೆ ನನ್ನ ಹೆಂಡತಿಯ ಬಗ್ಗೆ ಸಂದೇಹವುಂಟಾಗಿತ್ತು...... ಅವಳು

ಯಾವುದನ್ನೋ ನನ್ನಿಂದ ಮರೆಮಾಚಿದ್ದಾಳೆ. ನನಗೆ ಸಂಬಂಧಿಸದ ವಿಷಯದ ಬಗ್ಗೆ....... ನಂತರ ನನಗೆ ಗೆಸ್ಟಾಪೋ ಪೊಲೀಸರು ಅದೆಷ್ಟೋ ದಿನಗಳಿಂದ ಅವಳನ್ನು ಹೊಂಚು ಹಾಕಿ ಕಾಯುತ್ತಿದ್ದರೆಂಬ ವಿಷಯ ತಿಳಿಯಿತು. ಅವಳ ಹತ್ತಿರ ಕೆಲವು ಕಾನೂನುಬಾಹಿರ ಪಾಂಪ್ಲೆಟ್‌ಗಳು, ಚೀಟಿಗಳಿದ್ದವು- ಅವುಗಳನ್ನು ಆ ದಿನಗಳಲ್ಲಿ ಅಜ್ಞಾತವಾಗಿ ಜನರಿಗೆ ಹಂಚಲಾಗುತ್ತಿತ್ತು- ಜರ್ಮನ್ ಅಧಿಕಾರಿಗಳ ದೃಷ್ಟಿಯಲ್ಲಿ ಇದು ದೊಡ್ಡ ಅಪರಾಧವಾಗಿತ್ತು. ಪೊಲೀಸರು ಇವನ್ನೆಲ್ಲಾ ನನ್ನ ಹೆಂಡತಿಯ ಕೋಣೆಯಲ್ಲಿ ವಶಪಡಿಸಿಕೊಂಡಿದ್ದರು........ನನಗೇ ಅವುಗಳ ಬಗ್ಗೆ ಗೊತ್ತಿರಲಿಲ್ಲವೆಂಬ ವಿಷಯ ತಿಳಿದು ನಿಮಗೆ ಸಾಕಷ್ಟು ಕುತೂಹಲವೆನಿಸಬಹುದು. ಹಿಂದಿನ ರಾತ್ರಿಯವರೆಗೆ ನಾವಿಬ್ಬರೂ ಒಂದೇ ಕೋಣೆಯಲ್ಲಿ ವಾಸಿಸುತ್ತಿದ್ದೆವು. ಪ್ರೀತಿಸುತ್ತಿದ್ದೆವು. ನಿದ್ರಿಸುತ್ತಿದ್ದೆವು ..... ಇದೇ ಕೋಣೆಯಲ್ಲಿ ಅವಳ ರಹಸ್ಯದ, ನಾನು ಭಾಗಿಯಾಗದ ವಸ್ತುಗಳಿದ್ದವು. ಅವರು ನನ್ನ ಹೆಂಡತಿಯ ಬಗ್ಗೆ ನನಗಿಂತ ಹೆಚ್ಚು ಚೆನ್ನಾಗಿ ತಿಳಿದಿದ್ದರು ಎಂಬ ವಿಷಯ ನಿಮಗೆ ಕುತೂಹಲವೆನಿಸುವುದಿಲ್ಲವೆ? ಸ್ವಲ್ಪ ತಾಳಿ..... ನಾನು ನನ್ನ ಗ್ಲಾಸನ್ನು ಬರಿದು ಮಾಡುವೆ. ಆ ಮೇಲೆ ನಿಮಗೆ ಕಂಪನಿ ಕೊಡುವೆ. ಸ್ವಲ್ಪ ಹೊತ್ತಿನ ನಂತರ ಅವರು ನಿಲ್ಲಿಸಿ ಮತ್ತೆ...... ಇಲ್ಲ, ಇಷ್ಟು ಬೇಗನೆ ಅಲ್ಲ. ನೆಮ್ಮದಿಯಿಂದ ಕುಡಿಯುವುದರಲ್ಲಿ ತೃಪ್ತಿಯಿದೆ. ನಮ್ಮ ಭಾಷೆಯಲ್ಲಿ ಒಂದು ಗಾದೆಯಿದೆ....... ನಾವು ಮನಸಾರೆ ಕುಡಿಯಬೇಕು, ಯಾಕೆಂದರೆ ನೀವು ನೂರು ವರ್ಷಗಳ ನಂತರ ಈ ಜಗತ್ತಿನಲ್ಲಿ ಇರುವುದಿಲ್ಲ. ನೂರು ವರ್ಷ.......ಇದು ದೀರ್ಘ ಕಾಲ ಅಂತ ನೀವು ಯೋಚಿಸುವುದಿಲ್ಲವೇ? ನಮ್ಮಲ್ಲಿ ಯಾರೊಬ್ಬರೂ ಇಷ್ಟೊಂದು ವರ್ಷದವರೆಗೆ ಬದುಕಿರುತ್ತಾರೆಂಬ ಬಗ್ಗೆ ನನಗೆ ಅನುಮಾನವಿದೆ. ಮನುಷ್ಯ ಬದುಕುತ್ತಾನೆ..... ತಿನ್ನುತ್ತಾನೆ .... ಕುಡಿಯುತ್ತಾನೆ..... ಒಂದು ದಿನ ಅಕಸ್ಮಾತ್ ಗೊಟಕ್! ಇಲ್ಲ ಸ್ವಾಮಿ , ಭಯಾನಕ ವಸ್ತು ಸಾಯಬಾರದು. ಲಕ್ಷಾಂತರ ಜನ ನಿತ್ಯ ಸಾಯ್ತಾರೆ, ಅದಕ್ಕಾಗಿ ನೀವು 'ಅಯ್ಯೋ' ಎಂದೂ ಅನ್ನಲಾರಿರಿ. ಸತ್ತ ವ್ಯಕ್ತಿ ತನ್ನ ರಹಸ್ಯವನ್ನು ಸದಾಕಾಲಕ್ಕೂ ತನ್ನೊಂದಿಗೆ ಒಯ್ದರೂ ನಾವೇನೂ ಮಾಡಲಾರೆವು. ಇದು ಭಯಾನಕ! ಒಂದು ರೀತಿಯಲ್ಲಿ ಅವನು ನಮ್ಮಿಂದ ಮುಕ್ತನಾಗಿ ಬಿಡುತ್ತಾನೆ. ಅಂದು ರಾತ್ರಿ ನಾನು ನನ್ನ ಮನೆಯ ಒಂದು ಕೋಣೆಯಿಂದ ಮತ್ತೊಂದು ಕೋಣೆಗೆ ಸುತ್ತು ಹಾಕುತ್ತಿದ್ದೆ...... ಪೊಲೀಸರ ನಂತರ ನಾನು ನನ್ನ ಹೆಂಡತಿಯ ವಸ್ತುಗಳ ಬಗ್ಗೆ ಎರಡನೆಯ ಬಾರಿ ತಲಾಶ್ ಮಾಡುತ್ತಿದ್ದ ವ್ಯಕ್ತಿಯಾಗಿದ್ದೆ ಎಂಬುವದನ್ನು ತಿಳಿದು ನಿಮಗೆ ಬಹುಶಃ ನಗು ಬರಬಹುದು.... ಒಂದೊಂದು ವಸ್ತುವನ್ನೂ ತಿರುಗಾ-ಮುರುಗಾ ಮಾಡಿ ಗಮನವಿಟ್ಟು ಪರೀಕ್ಷಿಸಿದ್ದೆ. ಅವಳೊಂದಿಗೆ ನಾನೂ ಭಾಗಿಯಾಗಿದ್ದೆ ಎಂಬುವದಕ್ಕೆ ಅವಳು ಯಾವದೇ ಗುರುತನ್ನು ಬಿಟ್ಟು ಹೋಗುವುದಿಲ್ಲ ಎಂಬ ಬಗ್ಗೆ ನನಗೆ ನಂಬಿಕೆಯಾಗುತ್ತಿರಲಿಲ್ಲ. ಅವಳ ಮದುವೆಯ ಉಡುಪುಗಳು, ಡ್ರೆಸಿಂಗ್ ಟೇಬಲ್‌ನ ಖಾನೆಯೊಳಗಿದ್ದ ಕೆಲವು ಪತ್ರಗಳು-ಇವನ್ನು ನಾನು ಮದುವೆಗೆ ಮೊದಲು ಅವಳಿಗೆ ಬರೆದಿದ್ದೆ- ಕೆಲವು ಪಕ್ಷಿಗಳ ರೆಕ್ಕೆ ಪುಕ್ಕಗಳು, ಕಲ್ಲುಗಳು- ಸ್ವಲ್ಪ

ನೋಡಿ, ಏಳು ವರ್ಷಗಳ ವೈವಾಹಿಕ ಜೀವನದ ನಂತರ ಅಂದು ರಾತ್ರಿ ನಾನು ನನ್ನ ಹೆಂಡತಿಯ ವಸ್ತುಗಳನ್ನು, ನಾನು ಅವಳ ಪತಿಯಾಗಿರದೆ ಯಾರೋ ಗೂಢಚಾರ ನೋಡುವಂತೆ, ತಡವರಿಸಿ ನೋಡುತ್ತಿದ್ದೆ, ಇನ್ನು ನಾನು ಅವಳಲ್ಲಿ ಏನೂ ಕೇಳುವುದಿಲ್ಲ ವೆಂಬ ನಂಬಿಕೆ ಪದೇ ಪದೇ ನನಗಾಗುತ್ತಿತ್ತು. ಅವಳು ಅವರ ಕೈಯಿಂದ ಪಾರಾಗಿ ಬರಲಾರಳು ಎಂಬುದು ನನಗೆ ತಿಳಿದಿತ್ತು. ಅವರು ಯಾರು ಯಾರನ್ನು ಹಿಡಿದುಕೊಂಡು ಹೋಗುತ್ತಿದ್ದರೋ, ಅಂಥವರಲ್ಲಿ ಯಾರೊಬ್ಬರೂ ಮರಳಿ ಬಂದಿದ್ದನ್ನು ನಾನು ನೋಡಿರಲಿಲ್ಲ. ಸಾವು ಅವಳ ಅತಿ ಸಮೀಪದಲ್ಲಿದೆ ಎಂದು ಆ ರಾತ್ರಿ ಈ ವಸ್ತುವು ಅಷ್ಟೊಂದು ಭೀತಿಗೊಳಿಸಿರಲಿಲ್ಲ! ಆದರೆ ಈ ವಸ್ತು, ನಾನೆಂದೂ ಅವಳ ಬಗ್ಗೆ ಪೂರ್ಣ ವಾಸ್ತವಾಂಶವನ್ನು ತಿಳಿಯಲಾರೆನೆಂಬ ಬಗ್ಗೆ ಭೀತಿಗೊಳಿಸಿತ್ತು.....ಸಾವು ಸದಾ ಕಾಲಕ್ಕೂ ಅವಳ ರಹಸ್ಯಕ್ಕೆ ಬೀಗ ಹಾಕುವುದು, ಅವಳು ತನ್ನ ಹಿಂದೆ ಯಾವುದೇ ಸುಳಿವನ್ನೂ ಬಿಟ್ಟು ಹೋಗುವುದಿಲ್ಲ..... ಮಾರನೆಯ ದಿನ ರಾತ್ರಿ ಅವರು ನಮ್ಮ ಮನೆಯ ಬಾಗಿಲನ್ನು ತಟ್ಟಿದರು. ನಾನು ಸಿದ್ಧನಾಗಿ ಅವರನ್ನೇ ಕಾಯುತ್ತಾ ಕೂತಿದ್ದೆ. ಅವರು ಬರುವರೆಂಬುದು ನನಗೆ ತಿಳಿದಿತ್ತು. ಒಂದು ವೇಳೆ ನನ್ನ ಹೆಂಡತಿ ಅವರೆದುರು ಎಲ್ಲವನ್ನೂ ಒಪ್ಪಿಕೊಂಡಿದ್ದರೆ, ಬಹುಶಃ ಅವರು ನನ್ನ ಬಳಿ ಬರುವ ಅಗತ್ಯವುಂಟಾಗುತ್ತಿರಲಿಲ್ಲ. ನನ್ನ ಹೆಂಡತಿ ಒಂದು ಶಬ್ದವನ್ನೂ ಹೇಳುವುದಿಲ್ಲವೆಂಬುದೂ ನನಗೆ ತಿಳಿದಿತ್ತು. ನಾನು ಅವಳ 'ರಹಸ್ಯಗಳಿಗೆ' ಅಪರಿಚಿತನಾಗಿದ್ದು, ಅವಳ ಅಭ್ಯಾಸಗಳನ್ನು ಚೆನ್ನಾಗಿ ತಿಳಿದಿದ್ದೆ. ಅವಳಿಗೆ ಮೌನಿಯಾಗಿರುವುದು ತಿಳಿದಿತ್ತು..... ಯಾತನೆ, ಎಷ್ಟೇ ಭಯಾನಕವಾಗಿರಲಿ...ಇಲ್ಲ ಸ್ವಾಮಿ, ನಾನು ಅವಳ ಯಾತನೆಗಳನ್ನು ನನ್ನ ಕಣ್ಣಾರೆ ನೋಡಲಿಲ್ಲ, ಆದರೆ ನಾನು ಸ್ವಲ್ಪ ಅಂದಾಜು ಮಾಡಬಲ್ಲೆ, ಮೊದಲ ಪ್ರಶ್ನೆಯಾಗಿ ಅವರು ನನ್ನನ್ನು ಕೇಳಿದ್ದು ತುಂಬಾ ಸ್ಪಷ್ಟವಾಗಿತ್ತು-ನಾನು ಶ್ರೀಮತಿಯ.... ಪತಿಯೇ? ನಾನು ಅವರ ಈ ಪ್ರಶ್ನೆಗೆ ಉತ್ತರವನ್ನು 'ಹೂಂ' ಎಂದಷ್ಟೇ ಕೊಡಲು ಸಾಧ್ಯವಾಯಿತು, ಉಳಿದ ಪ್ರಶ್ನೆಗಳು ನನ್ನ ಸಾಮರ್ಥ್ಯಕ್ಕೆ ಹೊರತಾಗಿದ್ದವು. ಆದರೆ ಅವರು ನನ್ನನ್ನು ಸುಲಭವಾಗಿ ಬಿಡುವವರಾಗಿರಲಿಲ್ಲ, ನಾನು ನನ್ನ ಹೆಂಡತಿಯ ಚಟುವಟಿಕೆಗಳ ಬಗ್ಗೆ ಅಜ್ಞಾನಿ ಎಂದಿದ್ದಕ್ಕೆ ಗಹಗಹಿಸಿ ನಕ್ಕರು. ಹಿಂಸೆಯಿಂದ ತಪ್ಪಿಸಿಕೊಳ್ಳಲು ಹೀಗೆನ್ನುತ್ತಿದ್ದೇನೆಂದು ಯೋಚಿಸಿದರು, ಅವರು ನನ್ನನ್ನು ಬೇರೊಂದು ಸೆಲ್‌ಗೆ ಕರೆದೊಯ್ದರು....ನನಗೆ ನನ್ನ ಹೆಂಡತಿಯ ಬಗ್ಗೆ ಏನೇನು ತಿಳಿದಿದೆ? ಅವಳೆಲ್ಲಿಗೆ ಹೋಗುತ್ತಿದ್ದಳು? ಯಾರು ಯಾರನ್ನು ಸಂಧಿಸುತ್ತಿದ್ದಳು? ಯಾರು ಅವಳಿಗೆ ಚೀಟಿ ಕೊಟ್ಟರು?- ಇಡೀ ವಾರ ಅವರು ನನ್ನೊಂದಿಗೆ ಇವೇ ಪ್ರಶ್ನೆಗಳನ್ನು ಭಿನ್ನ ಭಿನ್ನ ರೂಪದಲ್ಲಿ ಕೇಳುತ್ತಿದ್ದರು. ನನ್ನಿಂದ ಹೇಗಾದರೂ ಮಾಡಿ ಉತ್ತರ ಪಡೆಯಬೇಕೆಂದು ಅವರು ಮಾಡುತ್ತಿದ್ದ 'ವಿಧಾನ'ಗಳನ್ನು ನಾನು ನಿಮಗೆ ಹೇಳಲಾರೆ. ನಾನು ನಿಮಗೆಷ್ಟೇ ವಿವರಣೆಯೊಂದಿಗೆ ವಿವರಿಸಿದರೂ ನೀವು ತೃಣಮಾತ್ರವು ಅಂದಾಜು ಮಾಡಲಾರಿರಿ..... ನಾನು ನನ್ನ ಪ್ರಜ್ಞೆಯನ್ನು ಕಳೆದುಕೊಳ್ಳುವವರೆಗೂ ಅವರು ನನ್ನನ್ನು ಹೊಡೆಯುತ್ತಿದ್ದರು.

ಆದರೆ ಅವರಲ್ಲಿ ಅಪಾರ ಧೈರ್ಯವಿತ್ತು.....ಅವರೂ ನನ್ನ ಪ್ರಜ್ಞೆ ಮತ್ತೆ ಬರುವವರೆಗೂ ಕಾದು, ಮತ್ತೆ ಅದೇ ಕ್ರಮವನ್ನು ಪ್ರಾರಂಭಿಸುತ್ತಿದ್ದರು. ಅದೇ ಹಳೆಯ ಪ್ರಶ್ನೆಗಳು, ಅವೇ ಕೊನೆಯಿಲ್ಲದ ಯಾತನೆ-ಹಿಂಸೆ.....ನಾನು ನನ್ನ ಹೆಂಡತಿಯೊಂದಿಗೆ ಅನೇಕ ವರ್ಷಗಳಿಂದ ಒಂದೇ ಮನೆಯಲ್ಲಿ ವಾಸಿಸುತ್ತಿದ್ದಾಗ್ಯೂ, ಅವಳ ಗುಪ್ತ- ಚಟುವಟಿಕೆಗಳ ಬಗ್ಗೆ ಅಜ್ಞಾನಿಯೆಂಬ ನನ್ನ ಮಾತನ್ನು ಅವರು ನಂಬುತ್ತಲೇ ಇರಲಿಲ್ಲ. ನಾನು ಅವರಿಗೆ ಮೋಸ ಮಾಡುತ್ತಿದ್ದೇನೆ, ಅವರ ಕಣ್ಣಿಗೆ ಮಣ್ಣೆರಚುತ್ತಿದ್ದೇನೆಂದು ಅವರು ತಿಳಿಯುತ್ತಿದ್ದರು. ಇಲ್ಲಿ ಸ್ವಾಮಿ, ಅವರು ನನ್ನನ್ನು ಥಳಿಸುತ್ತಿದ್ದ ಬಗ್ಗೆ ನನಗೆ ಯಾತನೆಯೆನಿಸುತ್ತಿರಲಿಲ್ಲ. ಆದರೆ ಅವರ ಪ್ರಶ್ನೆಗಳಿಗೆ ಉತ್ತರಿಸಲು ನನ್ನ ಬಳಿ ಏನೂ ಇರಲಿಲ್ಲವೆಂಬುದೇ ನನಗೆ ತೀವ್ರ ಯಾತನೆಯನ್ನುಂಟು ಮಾಡುತ್ತಿತ್ತು. ಬಹುಶಃ ಪ್ರತಿಯೊಬ್ಬ ಹೆಣ್ಣು ತನ್ನ ಗಂಡನೊಂದಿಗೆ ವ್ಯವಹರಿಸುವಂಥ ಕೆಲವು ಸಾಮಾನ್ಯ ಸಂಗತಿಗಳಷ್ಟೇ ನನ್ನ ಬಳಿ ಇದ್ದವು.....ದಿನನಿತ್ಯದ ಬದುಕಿನೊಂದಿಗೆ ಅವಳು ಇನ್ನೊಂದು ಬದುಕನ್ನು ನಡೆಸುತ್ತಿದ್ದಾಳೆಂಬ ಕಲ್ಪನೆಯನ್ನೇ ನಾನು ಮಾಡಲು ಸಾಧ್ಯವಿರಲಿಲ್ಲ..... ನನ್ನಿಂದ ಬೇರೆಯಾಗಿ, ನನ್ನಿಂದ ಹೊರಗೆ, ನನ್ನಿಂದ ಅಸ್ಪೃಶ್ಯಳಾಗಿ- ನನಗೆ ಸಂಬಂಧಿಸದ ಆ ಬದುಕು..... ಒಂದು ವೇಳೆ ಅವರು ಅವಳನ್ನು ಬಂಧಿಸದಿದ್ದರೆ, ನಾನು ಅರಿತುಕೊಂಡ ಹಾಗೇ ನನ್ನ ಹೆಂಡತಿ ಇದ್ದಾಳೆಂದು ನಾನು ತಿಳಿಯುತ್ತಿದ್ದೆ. ಈ ವಿಷಯ ನಿಮಗೆ ಹಾಸ್ಯಾಸ್ಪದವೆನಿಸುವುದಿಲ್ಲವೇ? ಅವು ಯುದ್ಧದ ಕೊನೆಯ ದಿನಗಳಾಗಿದ್ದು, ಗೆಸ್ಟಾಪೋ ತಮ್ಮ ಬೇಟೆಯನ್ನು ಬೇಗನೇ ತಮ್ಮ ಕೈತಪ್ಪಿ ಹೋಗಲು ಬಿಡುತ್ತಿರಲಿಲ್ಲ. ಇದು ನಿಮಗೆ ಗೊತ್ತಿದೆ.....ನನ್ನ ಹೆಂಡತಿ ಕೊನೆಯವರೆಗೂ ಏನನ್ನೂ ಒಪ್ಪಿಕೊಳ್ಳಲಿಲ್ಲ. ಅವರು ಅವಳ ಆಸೆಯನ್ನು ಬಿಟ್ಟಿದ್ದರು. ಆದರೆ ಅವರು ನನ್ನನ್ನು ಎಳೆಯ ಪ್ರಾಣಿಯೆಂದು ತಿಳಿಯುತ್ತಿದ್ದರು. ಅವರು ಬಹುಶಃ ನನ್ನನ್ನು ಸಾಯಿಸಲು ಬಯಸುತ್ತಿರಲಿಲ್ಲ, ಆದರೆ ಅವರು ಕೊಡುತ್ತಿದ್ದ ಹಿಂಸೆಯಲ್ಲಿ ಯಾವುದನ್ನೂ ಕಡಿಮೆ ಮಾಡಲಿಲ್ಲ. ಅವರೇ ದಣಿದಾಗ ಅಥವಾ ನಾನೇ ಪ್ರಜ್ಞೆ ಕಳೆದುಕೊಂಡಾಗ ಮಾತ್ರ ಅವರು ನನ್ನನ್ನು ಬಿಡುತ್ತಿದ್ದರು. ನಾನೂ ಏನನ್ನೂ ಒಪ್ಪಿಕೊಳ್ಳಲಿಲ್ಲ-ಇದು ನನ್ನ ಸಾಹಸ ಕಾರ್ಯವಾಗಿರಲಿಲ್ಲ- ನನ್ನ ಬಳಿ ಒಪ್ಪಿಕೊಳ್ಳಲು ಏನೂ ಇರಲಿಲ್ಲವೆಂಬುದೇ ವಾಸ್ತವವಾಗಿತ್ತು. ಮೊದಲ ರಾತ್ರಿ ನಾನು ನನ್ನ ಹೆಂಡತಿಯನ್ನು ಕೋಣೆಯಲ್ಲಿ ಕಾಣದಿದ್ದಾಗ ನನಗೆ ತುಂಬಾ ದುಃಖವಾಗಿತ್ತೆಂಬ ವಿಷಯ ನಿಮಗೆ ತಿಳಿದಿದೆ. ಅವಳು ನನ್ನನ್ನು ಅಂಧಕಾರದಲ್ಲಿಟ್ಟು ಮೋಸ ಮಾಡಿದ್ದಾಳೆಂದು ನನಗನ್ನಿಸಿತ್ತು. ನನ್ನ ಹೆಂಡತಿಯೇ ನನ್ನನ್ನು ನಂಬಿಕೆಗೆ ಪಾತ್ರನೆಂದು ತಿಳಿಯಲಿಲ್ಲವಲ್ಲವೆಂಬ ವಿಷಯ ಪದೇ ಪದೇ ನನ್ನನ್ನು ಇರಿಯುತ್ತಿತ್ತು. ಆದರೆ ನಂತರ, ಗೆಸ್ಟಾಪೋಗಳೆದುರು ಹಿಂಸೆ ಮತ್ತು ಕಷ್ಟವನ್ನು ಅನುಭವಿಸುವಾಗ- ಅವಳು ನನಗೇನೂ ಹೇಳಲಿಲ್ಲವೆಂದು ಅವಳ ಬಗ್ಗೆ ಕೃತಜ್ಞನಾಗುತ್ತಿದ್ದೆ. ಅವಳು ಒಂದು ರೀತಿಯಲ್ಲಿ ನನ್ನನ್ನು ಪಾರು ಮಾಡಿದ್ದಳು. ಒಂದು ವೇಳೆ ನನ್ನ ಹೆಂಡತಿಯ ರಹಸ್ಯಗಳು ನನಗೆ ತಿಳಿದಿದ್ದರೆ ನಾನು ಮೌನ ವಹಿಸುವ ಧೈರ್ಯ ತಾಳುತ್ತಿದ್ದೆನೆ ಎಂಬ

ಬಗ್ಗೆ ನಾನಿವತ್ತೂ ನಿರ್ಣಯಿಸಲು ಸಾಧ್ಯವಾಗುತ್ತಿಲ್ಲ. ಸ್ವಲ್ಪ ಯೋಚಿಸಿ. ನನ್ನ ಯಾತನೆ ಅದೆಷ್ಟು ಹೆಚ್ಚುತ್ತಿತ್ತು–ನನ್ನೆದುರು ಒಪ್ಪಿಕೊಳ್ಳುವ ಮಾರ್ಗ ತೆರೆದಿದ್ದರೆ........ ನೀವು ವಿವಶತೆಯಿಂದಾಗಿ ಅನೇಕ ಯಾತನೆಯನ್ನು ಸಹಿಸಬಲ್ಲಿರಿ. ಆದರೆ ನೀವು ಯಾವದೇ ಕ್ಷಣ ಆ ಯಾತನೆಯಿಂದ ಬಿಡುಗಡೆಗೊಳ್ಳುತ್ತಿರಿ ಎಂಬುದು ನಿಮ್ಮ ಗಮನಕ್ಕೆ ಬಂದಾಗ– ಅದಕ್ಕಾಗಿ ನೀವು ನಿಮ್ಮ ಹೆಂಡತಿ, ತಂದೆ, ಸಹೋದರನೊಂದಿಗೆ ವಿಶ್ವಾಸಘಾತುಕತನ ಮಾಡಬೇಕಾಗಿ ಬಂದಾಗ್ಯೂ–ನೀವು ಯಾತನೆಯ ಒಂದು ಗಡಿಯನ್ನು ದಾಟಿದಾಗ, ನೀವು ಆ ಮಾರ್ಗವನ್ನು ಆರಿಸಿಕೊಳ್ಳಲಾರಿರಿ ಎಂದು ಹೇಳಲು ಸಾಧ್ಯವಿಲ್ಲ. ಆರಿಸಿಕೊಳ್ಳುವ ಹಿಂಸೆಗಿಂತ ದೊಡ್ಡ ಹಿಂಸೆ ಬೇರೊಂದಿಲ್ಲ. ನಿರ್ಣಯಿಸುವ ಈ ಯಾತನೆಯಿಂದ ನನ್ನನ್ನು ಪಾರುಮಾಡಲೋಸುಗವೇ ನನ್ನ ಹೆಂಡತಿಯು ತನ್ನ ರಹಸ್ಯವನ್ನು ನನಗೆಂದೂ ಹೇಳಲಿಲ್ಲವೆಂದು ಒಮ್ಮೊಮ್ಮೆ ನನಗನ್ನಿಸುತ್ತದೆ. ನೋಡಿ...... ಪ್ರೀತಿಯಲ್ಲಿ ಯಾವುದೇ ಮುಚ್ಚುಮರೆಯಿಲ್ಲ, ಅದು ಕನ್ನಡಿಯಷ್ಟು ಸ್ವಚ್ಛವೆಂದು ಹೇಳಲಾಗುತ್ತದೆ. ಇದಕ್ಕಿಂತ ಮಿಗಿಲಾದ ಭ್ರಮೆ ಮತ್ತೊಂದಿಲ್ಲ ಅಂತ ನನಗನ್ನಿಸುತ್ತದೆ. ಪ್ರೀತಿಸುವ ಅರ್ಥ, ನಮ್ಮನ್ನು, ನಾವು ತೆರೆದಿಡುವುದಷ್ಟೇ ಅಲ್ಲ. ಇತರರನ್ನು ನಿಮ್ಮ 'ಅಪಾಯ'ಗಳಿಂದ ದೂರವಿಡಲೋಸುಗ, ನಾವು ನಮ್ಮಲ್ಲೇ ಕೆಲವು ವಿಷಯಗಳನ್ನು ಬಚ್ಚಿಟ್ಟುಕೊಳ್ಳುವುದೂ ಆಗಿದೆ........ ಪ್ರತಿಯೊಂದು ಹೆಣ್ಣಿಗೂ ಈ ವಿಷಯ ತಿಳಿದಿದೆ. ಅವಳು ಪುರುಷನನ್ನು ಹೆಚ್ಚು ಪ್ರೀತಿಸುವ ಸಾಮರ್ಥ್ಯ ಹೊಂದಿರುವುದರಿಂದ, ಅವಳು ತನ್ನಲ್ಲಿ ಕೆಲವು ವಿಷಯಗಳನ್ನು ಬಚ್ಚಿಟ್ಟುಕೊಳ್ಳುವ ಧೈರ್ಯವೂ ಇರುತ್ತದೆ. ನೀವು ಹೀಗೆ ಯೋಚಿಸುವುದಿಲ್ಲವೇ? ನಾನು ತಪ್ಪು ಮಾಡುತ್ತಿರುವ ಸಾಧ್ಯತೆಯಿದೆ.....ಆದರೆ ರಾತ್ರಿ ನನಗೆ ನಿದ್ರೆ ಬಾರದಿದ್ದಾಗ, ಇದನ್ನೆಲ್ಲಾ ಯೋಚಿಸಿ ನನಗೆ ಸಮಾಧಾನವಾಗುತ್ತದೆ. ಅಂದರೆ...... ಹೋಗಲಿ ಬಿಡಿ, ನನಗೆ ಹೇಳಲು ಬರುವುದಿಲ್ಲ. ನಾನು ನಿಮ್ಮನ್ನು ನನ್ನ ಟೇಬಲ್ ಬಳಿ ಕರೆದಾಗ, ನಾನು ನಿಮಗೆ ತಿಳಿ ಹೇಳುವೆನೆಂಬ ಆಸೆಯಿಂದ ಕರೆದಿರಲಿಲ್ಲ, ಏನಂದಿರಿ ನೀವು? ಇಲ್ಲ ಸ್ವಾಮಿ... ಆಮೇಲೆ ನಾನು ನನ್ನ ಹೆಂಡತಿಯನ್ನು ಮತ್ತೆ ನೋಡಲಿಲ್ಲ. ಒಂದು ಮಧ್ಯಾಹ್ನ ನಾನು ಮನೆಗೆ ಮರಳಿ ಬರುತ್ತಿರುವಾಗ ನನ್ನ ದೃಷ್ಟಿ ಆ ಪೋಸ್ಟರ್ ಮೇಲೆ ಬಿದ್ದಿತ್ತು. ಆ ದಿನಗಳಲ್ಲಿ ಸಾಮಾನ್ಯವಾಗಿ ಆ ಪೋಸ್ಟರ್‌ಗಳನ್ನು ಮೂರನೆ ನಾಲ್ಕನೆ ದಿನಗಳಂದು ನಗರದ ಗೋಡೆಗಳ ಮೇಲೆ ಅಂಟಿಸಲಾಗುತ್ತಿತ್ತು........ ಒಂದಿನ ರಾತ್ರಿ ಗುಂಡು ಹೊಡೆದು ಸಾಯಿಸಲ್ಪಟ್ಟ ಮುವತ್ತು- ನಲ್ವತ್ತು ಜನರ ಹೆಸರು ಆ ಪೋಸ್ಟರ್‌ಗಳಲ್ಲಿರುತ್ತಿತ್ತು.... ನನ್ನ ದೃಷ್ಟಿ ನನ್ನ ಹೆಂಡತಿಯ ಹೆಸರ ಮೇಲೆ ಬಿದ್ದಾಗ ಕೆಲವು ಕ್ಷಣ ವಿಚಿತ್ರವೆನಿಸಿತು– ಆ ಚಿಕ್ಕ ಹೆಸರಿನ ಹಿಂದೆ ನನ್ನ ಹೆಂಡತಿಯ ಮುಖ ಇರಲು ಸಾಧ್ಯವೇ?.... ನಾನು ನಿಮಗೆ ಹೇಳಿರಲಿಲ್ಲವೆ. ಎಲ್ಲಿಯವರೆಗೆ ನೀವು ನಿಮ್ಮ ಕಣ್ಣಾರೆ ಯಾರಾದರೂ ಸಾಯುವುದನ್ನು ನೋಡದಿರೆ ಈಗ ಅವರು ಬದುಕಿಲ್ಲವೆಂಬ ಬಗ್ಗೆ ನಿಮಗೆ ನಂಬಿಕೆಯುಂಟಾಗುವುದಿಲ್ಲ..... ಒಂದು ಅಸ್ಪಷ್ಟ ಆಸೆ ಕಾಡುತ್ತಿರುತ್ತದೆ, ನೀವು ಬಾಗಿಲು ತೆರೆದೊಡನೆಯೇ......ಆದರೆ ನೋಡಿ. ನಾನು ನನ್ನ

ಮಾತನ್ನು ಪುನರುಚ್ಚರಿಸುತ್ತಿದ್ದೇನೆ. ಒಂದು ಒಂದೇ ವೃತ್ತದ ಸುತ್ತ–ಮುತ್ತ ಸುಳಿದಾಡಲು ಪ್ರಾರಂಭಿಸುತ್ತೀರಿ. ಇದು ಬೀರ್ ಕುಡಿದ ಸುಖ......ರೌಂಡ್ ಆ್ಯಂಡ್ ರೌಂಡ್ ಆ್ಯಂಡ್ ರೌಂಡ್. ನೀವು ಹೊರಡಲನುವಾದಿರಾ? ಸ್ವಲ್ಪ ತಾಳಿ....ನನ್ನ ಬೆಕ್ಕಿಗಾಗಿ ಏನಾದರೂ ಕೊಳ್ತೀನಿ......... ಪಾಪ, ನನ್ನ ದಾರಿ ಕಾಯುತ್ತಾ ಅದು ಹಸಿವೆಯಿಂದ ಕೂತಿರಬಹುದು..... ಬೇಡ.....ಬೇಡ....ನೀವು ನನ್ನೊಂದಿಗೆ ಬರುವ ಅಗತ್ಯವಿಲ್ಲ. ನನ್ನ ಮನೆ ಹೆಚ್ಚು ದೂರವಿಲ್ಲ, ನಾನು ಕುಡಿಯುವ ಎಲ್ಲೆ ನನಗೆ ಗೊತ್ತಿದೆ. ನಾನು ನಿಮಗೆ ಹೇಳಿರಲಿಲ್ಲವೆ..... ಕೇವಲ ಒಂದೂವರೆ ಇಂಚು ಮೇಲೆ........

***

# ಕನಕದಾಸರು

ಡಾ. ಬಸವರಾಜ ನಾಯ್ಕರ

ಭಾರತವು ಅನೇಕ ಧರ್ಮಗಳ ತವರುಮನೆಯೆಂದು ಸುಪ್ರಸಿದ್ಧವಾಗಿದೆ. ಈ ದೇಶದಲ್ಲಿ ಅನೇಕ ಧರ್ಮಗಳು ಆಚರಣೆಯಲ್ಲಿದ್ದರೂ ಅವೆಲ್ಲವುಗಳ ತಿರುಳು ಒಂದೇ ಆಗಿದೆ. ಮಾನವ ಮತ್ತು ದೇವನ ನಡುವಿನ ಸಂಬಂಧವನ್ನು ಬೆಸೆಯುವುದೇ ಎಲ್ಲ ಧರ್ಮಗಳ ಏಕೈಕ ಗುರಿಯಾಗಿದೆ. ದೇವನನ್ನು ತಿಳಿಯುವುದಕ್ಕೆ ಅಥವಾ ಅವನೊಂದಿಗೆ ಸಂಬಂಧವನ್ನು ಸಾಧಿಸಲಿಕ್ಕೆ ಮೂರು ಮಾರ್ಗಗಳಿವೆ; ಜ್ಞಾನ ಮಾರ್ಗ, ಭಕ್ತಿ ಮಾರ್ಗ ಮತ್ತು ಕರ್ಮಮಾರ್ಗ. ಬೇರೆ ಬೇರೆ ಹಿಂದುಗಳು ಇವುಗಳಲ್ಲಿ ತಮಗೆ ಸರಿಯೆನಿಸುವ ಯಾವುದಾದರೊಂದು ಮಾರ್ಗವನ್ನು ಅನುಸರಿಸುತ್ತಾರೆ. ಜ್ಞಾನಮಾರ್ಗದಲ್ಲಿ ದೇವನನ್ನು ತತ್ವಶಾಸ್ತ್ರೀಯ ದೃಷ್ಟಿಯಿಂದ ತಿಳಿದುಕೊಳ್ಳುವುದು ಮುಖ್ಯವಾದರೆ, ಕರ್ಮಮಾರ್ಗದಲ್ಲಿ ಕೆಲವು ವಿಶಿಷ್ಟ ವಿಧಿ–ವಿಧಾನಗಳನ್ನು ಅಥವಾ ಯಜ್ಞಯಾಗಗಳನ್ನು ನೆರವೇರಿಸುವುದು ಮುಖ್ಯವಾಗುತ್ತದೆ. ಇವೆರಡೂ ಮಾರ್ಗಗಳಿಂದ ಭಿನ್ನವಾದ ಭಕ್ತಿಮಾರ್ಗದಲ್ಲಿ ದೇವನಲ್ಲಿ ಅಚಲ ಶ್ರದ್ಧೆಯನ್ನಿರಿಸಿ ಆಳವಾದ ಭಕ್ತಿಯಿಂದ ಅವನನ್ನು ಆರಾಧಿಸುವುದೇ ಮುಖ್ಯವಾಗಿದೆ.

ಭಾರತದಲ್ಲಿ ಪ್ರಚಲಿತದಲ್ಲಿದ್ದ ಭಕ್ತಿಮಾರ್ಗವು ವೇದೋಪನಿಷತ್ತುಗಳಷ್ಟೇ ಪುರಾತನವಾಗಿದೆ. ವೇದೋಪನಿಷತ್ತುಗಳಲ್ಲಿ ಸಾಧು–ಸಂತರ ಮತ್ತು ಋಷಿ–ಮುನಿಗಳು ಸ್ತೋತ್ರ ಮತ್ತು ಪ್ರಾರ್ಥನೆಗಳ ಮೂಲಕ ದೇವನ ಬಗೆಗಿದ್ದ ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿದ್ದಾರೆ. ಕಾಲಕ್ರಮೇಣ ಭಕ್ತಿಮಾರ್ಗದಲ್ಲಿ ಶಿವಭಕ್ತಿ ಮತ್ತು ವಿಷ್ಣುಭಕ್ತಿಗಳೆಂಬ ಕವಲುಗಳುಂಟಾದವು. ತಮಿಳುನಾಡಿನ ನಾಮನ್ಮಾರತೇರಗಳು ಆಳ್ವಾರರ ತಿರುವಾಯ್‌ಮೋಳಿಗಳಲ್ಲಿ ಕ್ರಮವಾಗಿ ಈ ಶಿವಭಕ್ತಿ ಮತ್ತು ವಿಷ್ಣುಭಕ್ತಿಗಳು ಪ್ರಕಟವಾದವು. ಆಳ್ವಾರರಲ್ಲಿ ಒಬ್ಬಳಾದ ಅಂಡಾಳಳೆಂಬ ಕವಯಿತ್ರಿ ಶ್ರೀಕೃಷ್ಣನ ಬಗೆಗಿದ್ದ ಗೋಡಿಕೆಮರ ಭಕ್ತಿಯನ್ನು ಚಿತ್ರಿಸಿದಳು. ಭಾರತದಲ್ಲಿ ಒಂಬತ್ತು ಮತ್ತು ಹತ್ತನೆಯ ಶತಮಾನಗಳು ಭಕ್ತಿಯುಗವೆಂದು ಸುಪ್ರಸಿದ್ಧವಾಗಿವೆ. ತಮಿಳಿನ ಸಂತಕವಿಗಳು ವೇದೋಪನಿಷತ್ತುಗಳಲ್ಲಿ ಕಂಡುಬರುವ ದೇವರು ಮತ್ತು ಅವರ ವಿವಿಧ ಅವತಾರಗಳನ್ನು ಅರ್ಥೈಸಿ ಅವುಗಳಿಂದ ಪ್ರೇರಣೆ ಪಡೆದರು. ಇಂಥ ಮೂಲಗಳಿಂದ ಪ್ರೇರಣೆ ಪಡೆದ ಶ್ರೀ

ರಾಮಾನುಜಾಚಾರ್ಯರು ತಮ್ಮ ವಿಶಿಷ್ಟಾದ್ವೈತವೆಂಬ ಸಿದ್ಧಾಂತವನ್ನು ರೂಪಿಸಿಕೊಂಡು ಅದರಲ್ಲಿ ಭಕ್ತಿಗೆ ಬಹಳ ಪ್ರಾಮುಖ್ಯವನ್ನು ಕೊಟ್ಟರು. ಅವರ ಸಮಕಾಲೀನರಾದ ಶ್ರೀ ರಮಾನಂದತೀರ್ಥರು ಉತ್ತರ ಭಾರತದಲ್ಲಿ ಭಕ್ತಿ ಚಳುವಳಿಯನ್ನೇ ಪ್ರಾರಂಭಿಸಿದರು. ಶ್ರೀ ರಮಾನಂದರಿಂದ ಪ್ರೇರಣೆ ಪಡೆದ ಸಂತಕಬೀರರು ನಿರ್ಗುಣ ಬ್ರಹ್ಮೋಪಾಸನೆಯನ್ನು ಅಳವಡಿಸಿಕೊಂಡು. ಮೂರ್ತಿಪೂಜೆಯನ್ನು ಮತ್ತು ತೀರ್ಥಯಾತ್ರೆಗಳನ್ನು ನಿರರ್ಥಕ ಆಚರಣೆಗಳೆಂದು ಖಂಡಿಸಿದರು.

ಹದಿನಾರನೆಯ ಶತಮಾನದಲ್ಲಿದ್ದ ತುಳಸೀದಾಸರು ಶ್ರೀ ರಮಾನಂದರ ಬೋಧನೆಯಿಂದ ಪ್ರೇರಣೆ ಪಡೆದು. ಸಗುಣ ಬ್ರಹ್ಮೋಪಾಸನೆಯನ್ನು ಅಳವಡಿಸಿಕೊಂಡು ತಮ್ಮ ಸುಪ್ರಸಿದ್ಧ ರಾಮಚರಿತ ಮಾನಸವೆಂಬ ಮಹಾಕಾವ್ಯವನ್ನು ರಚಿಸಿದರು. ಅನಂತರ ಸಂತ ಮೀರಾಬಾಯಿ ಮತ್ತು ಸೂರದಾಸರು ಈ ಭಕ್ತಿ ಸಂಪ್ರದಾಯವನ್ನು ಮುಂದುವರಿಸಿದರು. ಗುಜರಾತಿನ ನರಸಿಂಹ ಮೆಹತಾ ಅವರು ಭಕ್ತಿ ಸಾಹಿತ್ಯದ ಸಂಪಾದಕರಾಗಿದ್ದರು. ಆಂಧ್ರಪ್ರದೇಶದ ಶ್ರೀಪತಿಪಂಡಿತ. ಮಲ್ಲಿಕಾರ್ಜುನ ಪಂಡಿತ. ಶಿವಲೆಂಕಮಂಚ ಪಂಡಿತ. ಪಾಲ್ಕುರಿಕೆ ಸೋಮನಾಥ. ಕೃಷ್ಣಮಾಚಾರ್ಯ ಮತ್ತು ಪೋತನ ಮುಂತಾದವರು ತೆಲುಗಿನಲ್ಲಿ ಹೇರಳವಾದ ಭಕ್ತಿಸಾಹಿತ್ಯವನ್ನು ರಚಿಸಿದರು. ಕೇರಳದಲ್ಲಿ ಚೆರುಶ್ಶೇರಿ ಮತ್ತು ಎಳುತ್ತಚ್ಚನ್ ಅವರು ಮಲೆಯಾಳಿ ಭಾಷೆಯಲ್ಲಿ ಭಕ್ತಿಸಾಹಿತ್ಯವನ್ನು ರಚಿಸಿದರು. ಅದೇ ರೀತಿ ಕಾಶ್ಮೀರಿ ಭಾಷೆಯಲ್ಲಿ ಲಾಲ್ ದೇಡ್ ಅಥವಾ ಲಲ್ಲೇಶ್ವರಿ. ಪಂಜಾಬಿ ಭಾಷೆಯಲ್ಲಿ ಗುರುನಾನಕ. ಬಾಂಗ್ಲಾ ಭಾಷೆಯಲ್ಲಿ ಚಂಡಿದಾಸ. ಚೈತನ್ಯ ಮತ್ತು ಜಯದೇವ. ಮತ್ತು ಅಸಾಮಿ ಭಾಷೆಯಲ್ಲಿ ಶಂಕರದೇವ ಮುಂತಾದ ಮಹನೀಯರು ಹೇರಳವಾದ ಭಕ್ತಿಸಾಹಿತ್ಯವನ್ನು ರಚಿಸಿ ಅದನ್ನು ಶ್ರೀಮಂತಗೊಳಿಸಿದ್ದಾರೆ.

ಕರ್ನಾಟಕದಲ್ಲಿಯಾದರೂ ಭಕ್ತಿಸಾಹಿತ್ಯದ ಸುಗ್ಗಿಯೇ ಆಗಿಹೋಯಿತು. ಅದರಲ್ಲಿಯೂ ವಿಶೇಷವಾಗಿ ಹನ್ನೆರಡನೆಯ ಶತಮಾನದಲ್ಲಿ ಸಮಾಜದ ವಿವಿಧ ಸ್ತರಗಳಿಂದ ಬಂದ ಶರಣ ಶರಣೆಯರು ವಿಪುಲವಾದ ವಚನ ಸಾಹಿತ್ಯವನ್ನು ರಚಿಸಿ ಭಕ್ತಿ ಸಾಹಿತ್ಯಕ್ಕೆ ಅತ್ಯಮೂಲ್ಯ ಕಾಣಿಕೆಯನ್ನು ನೀಡಿದರು. ಬಸವೇಶ್ವರ. ಅಲ್ಲಮಪ್ರಭು. ಸಿದ್ಧರಾಮ. ಅಂಬಿಗರ ಚೌಡಯ್ಯ. ಮಡಿವಾಳ ಮಾಚಿದೇವ. ಅಕ್ಕಮಹಾದೇವಿ ಮತ್ತು ಸೂಳೆಸಂಕವ್ವೆ ಮುಂತಾದ ವೀರಶೈವ ಅಥವಾ ಲಿಂಗಾಯತ ಧರ್ಮದ ಶರಣ–ಶರಣೆಯರು ಅನುಭವ ಮಂಟಪದಲ್ಲಿ ತಮ್ಮ ಅನುಭಾವವನ್ನು ಪರಾಮರ್ಶಿಸಿ. ಅದನ್ನು ವಚನ ಕಾವ್ಯದ ಮೂಲಕ ಅಭಿವ್ಯಕ್ತಿ ಪಡಿಸಿದರು.

ಹದಿನಾರನೆಯ ಶತಮಾನದಲ್ಲಿ ಉಂಟಾದ ಹರಿದಾಸ ಚಳುವಳಿಗೆ ಹನ್ನೆರಡನೆಯ ಶತಮಾನದ ಶರಣರ ಚಳವಳಿಯಿಂದ ಪ್ರಬಲವಾದ ಪ್ರೇರಣೆ ದೊರೆಯಿತು. ಇವೆರಡೂ ಗುಂಪಿನವರು ಆರಾಧಿಸುವ ದೇವ. ಗುರುಗಳು ಭಿನ್ನವಾಗಿದ್ದರೂ ಭಕ್ತಿಭಾವನೆಯು ಅವರಿಬ್ಬರಿಗೂ ಸಾಮಾನ್ಯವಾದ ಅಂಶವಾಗಿತ್ತು.

ಶರಣರು ಶಿವನನ್ನು ಆರಾಧಿಸಿದರೆ, ಹರಿದಾಸರು ಹರಿಯ ಆರಾಧಕರಾಗಿದ್ದರು. ಹರಿದಾಸರಲ್ಲಿ ವ್ಯಾಸಕೂಟ ಮತ್ತು ದಾಸಕೂಟಗಳೆಂಬ ಎರಡು ಪಂಗಡಗಳಿದ್ದವು. ವ್ಯಾಸಕೂಟಕ್ಕೆ ಸೇರಿದ ಹರಿದಾಸರು ವೇದೋಪನಿಷತ್ತುಗಳಲ್ಲಿ ಪ್ರಗಲ್ಭ ಪಂಡಿತರಾಗಿದ್ದು ಅವರು ಶ್ರೀ ವಿಷ್ಣು ಮತ್ತು ಅವನ ಅವತಾರಗಳ ಬಗೆಗಿದ್ದ ತಮ್ಮ ಅನನ್ಯ ಭಕ್ತಿಯನ್ನು ಮತ್ತು ಭಕ್ತಿಸಿದ್ಧಾಂತವನ್ನು ಸಂಸ್ಕೃತ ಭಾಷೆಯ ಮೂಲಕ ಅಭಿವ್ಯಕ್ತಿಸಿದರು. ದಾಸಕೂಟಕ್ಕೆ ಸೇರಿದ ಹರಿದಾಸರು ಇದಕ್ಕೆ ವಿರುದ್ಧವಾಗಿ ವೇದೋಪನಿಷತ್ತುಗಳಲ್ಲಿಯ ಭಕ್ತಿಯ ಅಂಶಗಳನ್ನೆಲ್ಲ ಕ್ರೋಢೀಕರಿಸಿ ಅವುಗಳನ್ನು ಸಾಮಾನ್ಯಜನರಿಗೂ ತಿಳಿಯುವಂಥ ಸುಲಲಿತ ಪ್ರಾಕೃತ ಮತ್ತು ಕನ್ನಡ ಭಾಷೆಗಳ ಮೂಲಕ ಅಭಿವ್ಯಕ್ತಿಸಿದರು. ಇವೆರಡೂ ಪಂಗಡಗಳ ನಡುವೆ ಯಾವ ತಾತ್ವಿಕ ಭೇದವಿರಲಿಲ್ಲ. ಅವರಿಬ್ಬರೂ ಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನೇ ಪ್ರತಿಪಾದಿಸಿದರು. ಆದರೆ ಅವರಿಬ್ಬರ ನಡುವೆ ಕಂಡುಬರುವ ಒಂದೇ ಒಂದು ಪ್ರಮುಖ ಭಿನ್ನತೆಯೆಂದರೆ ವ್ಯಾಸಕೂಟದವರು ಜ್ಞಾನಮಾರ್ಗಿಗಳಾಗಿದ್ದರೆ ದಾಸಕೂಟದವರು ಭಕ್ತಿಮಾರ್ಗಿಗಳಾಗಿದ್ದರು. ಅವೆರಡೂ ಪಂಗಡದವರು ತಮ್ಮ ದ್ವೈತ ಸಿದ್ಧಾಂತವನ್ನು ಮತ್ತು ಹರಿಭಕ್ತಿಯ ಸಂದೇಶವನ್ನು ಜನರಿಗೆ ತಲುಪಿಸುವುದರ ಸಲುವಾಗಿ ಜನಪ್ರಿಯವಾದ ಕೀರ್ತನೆಯ ಸಂಕಥನವನ್ನೇ ಉಪಯೋಗಿಸಿದರು. ಶ್ರೀ ಪಾದರಾಯರು, ವ್ಯಾಸರಾಯರು, ವಾದಿರಾಜರು ಮತ್ತು ರಾಘವೇಂದ್ರರು ಅವರೆಲ್ಲ ವ್ಯಾಸಕೂಟಕ್ಕೆ ಸೇರಿದರು. ಪುರಂದರದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು ಮತ್ತು ಕನಕದಾಸರು ದಾಸಕೂಟಕ್ಕೆ ಸೇರಿದವರಾಗಿದ್ದರು.

ಕರ್ನಾಟಕದ ಈಗಿನ ಹಾವೇರಿ ಜಿಲ್ಲೆಯಲ್ಲಿ ಬಂಕಾಪುರವೆಂಬ ತಾಲೂಕು ಇದೆ. ಈ ಬಂಕಾಪುರವು ವಿಜಯನಗರ ಸಾಮ್ರಾಜ್ಯದಲ್ಲಿ ಒಂದು ಆಡಳಿತ ವಿಭಾಗವಾಗಿತ್ತು. ಅಲ್ಲಿ ಬೀರೇಗೌಡನೆಂಬ ಕುರುಬಜನಾಂಗಕ್ಕೆ ಸೇರಿದ ವ್ಯಕ್ತಿ ಆಡಳಿತಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ. ಆತನಿಗೆ ಬಚ್ಚಮ್ಮನೆಂಬ ಧರ್ಮಪತ್ನಿ ಇದ್ದಳು. ಅವರಿಬ್ಬರ ಪುತ್ರನೇ ತಿಮ್ಮಪ್ಪನೆಂದು ಹೆಸರುವಾಸಿಯಾಗಿದ್ದನು. ಆತ ಆನಾಗಮಾಸ ಸಂವತ್ಸರದ ಕಾರ್ತೀಕ ಬಹುಳ ತದಿಗೆಯ ಗುರುವಾರ (ಅಂದರೆ ಕ್ರಿ.ಶ. 1486ನೇ ಇಸವಿಯಲ್ಲಿ) ಜನಿಸಿದ. ಈ ಗಂಡುಕೂಸಿಗೆ ತಿರುಪತಿಯ ತಿಮ್ಮಪ್ಪನ ಹೆಸರನ್ನೇ ಇಡಲಾಗಿತ್ತು. ಈ ಗಂಡುಕೂಸು ಬಹಳ ಚೂಟಿಯಾಗಿತ್ತು. ಆತ ಬಾಲಕನಾಗಿದ್ದಾಗ ಕುರುಬ ಜನಾಂಗದ ವೃತ್ತಿಯಾದ ಡೊಳ್ಳು ಬಾರಿಸುವುದರಲ್ಲಿ ಬಹಳ ಅಭಿರುಚಿ ಹೊಂದಿದ್ದ. ಬೀರೇಗೌಡನ ವಿನಂತಿಯ ಮೇರೆಗೆ ಬಂಕಾಪುರದ ಸುಪ್ರಸಿದ್ಧ ಸಂಸ್ಕೃತ ಪಂಡಿತರಾದ ಶ್ರೀನಿವಾಸಾಚಾರ್ಯರು ತಿಮ್ಮಪ್ಪನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ ಆತನಿಗೆ ಕಾವ್ಯ, ಛಂದಸ್ಸು, ವ್ಯಾಕರಣ, ನಾಟಕ, ಅಲಂಕಾರಶಾಸ್ತ್ರ, ರಾಮಾಯಣ, ಮಹಾಭಾರತ ಮತ್ತು ಭಾಗವತ ಮುಂತಾದ ವಿದ್ಯೆಗಳನ್ನು ಬೋಧಿಸಿದರು. ತಿಮ್ಮಪ್ಪನು ತನ್ನ ವಯಸ್ಸಿಗೆ ಮೀರಿದ ಪ್ರತಿಭಾಶಾಲಿಯಾಗಿದ್ದುದರಿಂದ ಸ್ವಲ್ಪೇ ಸಮಯದಲ್ಲಿ

ಅವೆಲ್ಲವುಗಳನ್ನು ಕಲಿತು ಪಾರಂಗತನಾಗಿ ತನ್ನ ಗುರುವಿಗೇ ಆಶ್ಚರ್ಯವಾಗುವ ರೀತಿಯಲ್ಲಿ ಬೆಳೆದ. ತಿಮ್ಮಪ್ಪನ ಈ ಸಾಂಪ್ರದಾಯಿಕ ವ್ಯಾಸಂಗ ಮುಗಿದ ನಂತರ ಆತನಿಗೆ ಬೀರೇಗೌಡನು ಯುದ್ಧಕಲೆಯನ್ನು ಕಲಿಸುವ ವ್ಯವಸ್ಥೆ ಮಾಡಿದ. ತಿಮ್ಮಪ್ಪನು ಅದರಲ್ಲಿಯೂ ಪರಿಣತಿಯನ್ನು ಸಾಧಿಸಿದ. ಆ ಸಮಯಕ್ಕೆ ಆಗಲೆ ತಿಮ್ಮಪ್ಪನಲ್ಲಿ ಆಧ್ಯಾತ್ಮಿಕ ಪ್ರಜ್ಞೆ ಜಾಗೃತವಾಗಿತ್ತು. ಹೀಗಾಗಿ ಆತ ಭಜನೆಗಳನ್ನು ಹಾಡುವುದು ಮತ್ತು ದೇವನ ವಿವಿಧ ಅವತಾರಗಳ ಬಗೆಗೆ ಧ್ಯಾನ ಮಾಡುವುದರಲ್ಲಿ ತೊಡಗಿದ್ದ.

ಆ ವೇಳೆಗೆ ತಿಮ್ಮಪ್ಪನ ತಂದೆ ಆಕಸ್ಮಾತ್ತಾಗಿ ತೀರಿಕೊಂಡ. ಹೀಗಾಗಿ ತಿಮ್ಮಪ್ಪನು ಅನಾಥನಾದ. ಆಗ ಬೀರೇಗೌಡನ ಪರಮವೈರಿಯಾದ ಮಲ್ಲನಾಯಕನು ವಿಜಯನಗರದ ಸಾಮ್ರಾಟರ ಹತ್ತಿರ ಹೋಗಿ ಬೀರೇಗೌಡನ ಬಗೆಗೆ ಇಲ್ಲಸಲ್ಲದ ವಿಷಯಗಳಲ್ಲಿ ಚಾಡಿ ಹೇಳಿ, ಬಂಕಾಪುರ ವಿಭಾಗದ ಎಪ್ಪತ್ತೆಂಟು ಹಳ್ಳಿಗಳಿಗೆ ತಾನೇ ಆಡಳಿತಾಧಿಕಾರಿಯಾಗಿ ನೇಮಕಗೊಂಡ. ಅನಾಥನಾದ ತಿಮ್ಮಪ್ಪನು ವಿಧವೆಯಾದ ತನ್ನ ತಾಯಿಯೊಂದಿಗೆ ಬಡತನವನ್ನು ಅನುಭವಿಸಬೇಕಾಯಿತು. ಅವರಿಬ್ಬರೂ ಬಂಕಾಪುರವನ್ನು ಬಿಟ್ಟು ಕಾಗಿನೆಲೆಗೆ ಹೋಗಿ ಅಲ್ಲಿ ತಮ್ಮ ಬಂಧು-ಬಳಗದವರೊಂದಿಗೆ ನೆಲೆಸಿದರು.

ಹದಿನಾರು ವರುಷದ ಬಾಲಕನಾದ ತಿಮ್ಮಪ್ಪನು ತನ್ನ ದಿನನಿತ್ಯದ ಕೆಲಸವಾದ ಕುರಿ ಮತ್ತು ಆಡುಗಳನ್ನು ಕಾಯುವುದಲ್ಲದೆ, ಭಕ್ತಿಗೀತೆಗಳನ್ನು ಹಾಡುವುದು, ಯಕ್ಷಗಾನ, ಬಯಲಾಟಗಳಲ್ಲಿ ಪೌರಾಣಿಕ ಪಾತ್ರ ವಹಿಸುವುದು ಮತ್ತು ಗೊಂಬೆಯಾಟಗಳ ಪ್ರದರ್ಶನಗಳನ್ನು ಏರ್ಪಡಿಸುವುದು ಇವೇ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದ. ಒಮ್ಮೆ ತಮ್ಮೂರಿನ ಹೊಲದಲ್ಲಿ ಅಗೆಯುತ್ತಿದ್ದಾಗ ಅವನಿಗೆ ಭೂಮಿಯಲ್ಲಿ ಹೂತಿಟ್ಟ ಒಂದು ಬಂಗಾರದ ನಾಣ್ಯಗಳಿಂದ ತುಂಬಿದ ಕೊಡವು ಅಕಸ್ಮಾತಾಗಿ ಸಿಕ್ಕಿತು. ಆ ಬಂಗಾರದ ನಾಣ್ಯಗಳನ್ನು ಆತ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳದೆ ಬಡವರಿಗೆ ಅನ್ನದಾನ ಮಾಡುವುದು, ಧಾರ್ಮಿಕ ಕಾರ್ಯಗಳಿಗೆ, ಹಳೆಯ ದೇವಸ್ಥಾನಗಳ ದುರಸ್ತಿ ಮಾಡುವುದು, ಇವೇ ಮುಂತಾದ ಕಲ್ಯಾಣಕಾರ್ಯಗಳಿಗಾಗಿ ವಿನಿಯೋಗಿಸಿದ. ಹೀಗಾಗಿ ಅವನ ನಿಸ್ವಾರ್ಥ ಸ್ವಭಾವವನ್ನು ಕಂಡ ಜನರು ಆತನನ್ನು ದಾನಶೂರನೆಂದು ಪರಿಗಣಿಸಿದರಲ್ಲದೆ, ಆತನನ್ನು ಕನಕಪ್ಪ ಅಥವಾ ಕನಕರಾಜನೆಂದು ಕರೆಯತೊಡಗಿದರು.

ಕನಕಪ್ಪನು ಕ್ರಮೇಣ ಪ್ರವರ್ಧಮಾನಕ್ಕೆ ಬರತೊಡಗಿದಂತೆ ಬೀರೇಗೌಡನ ಪರಮವೈರಿಯಾದ ಮಲ್ಲನಾಯಕನಿಗೆ ಹೊಟ್ಟೆಯುರಿ ಜಾಸ್ತಿಯಾಯಿತು. ಹೀಗಾಗಿ ಆತ ತನ್ನ ಗುಂಪಿನ ಗಂಡಾಗಳನ್ನು ಕರೆದುಕೊಂಡು ಕನಕಪ್ಪನ ಮೇಲೆ ದಾಳಿ ಮಾಡಿ ಅವನನ್ನು ಮಾರಣಾಂತಿಕವಾಗಿ ಗಾಯಗೊಳಿಸಿದ. ಈ ಮಾನಸಿಕ ಆಘಾತದಿಂದ ಕನಕಪ್ಪನ ಜೀವನದಲ್ಲಿ ಒಂದು ಹೊಸ ತಿರುವು ಬಂದಿತು. ಇದರಿಂದ ಆತನ ಆಧ್ಯಾತ್ಮಿಕ ಬಲವು ಇನ್ನಷ್ಟು ತೀವ್ರಗೊಂಡಿತು. ಅದರ ಪರಿಣಾಮವಾಗಿ ಕನಕಪ್ಪನು

ಹರಿಭಕ್ತಿಸಾರವೆಂಬ ಕಾವ್ಯವನ್ನು ರಚಿಸಿದ. ಸಮಾಜದಲ್ಲಿ ಕನಕಪ್ಪನ ಕೀರ್ತಿ ಎಲ್ಲೆಡೆ ಪಸರಿಸಿದಂತೆ, ವಿಜಯನಗರ ಸಾಮ್ರಾಜ್ಯದ ಸಾಮ್ರಾಟರಾದ ಶ್ರೀ ಕೃಷ್ಣದೇವರಾಯರು ಅವನನ್ನು ತಮ್ಮೆಡೆಗೆ ಆಮಂತ್ರಿಸಿ, ಅವನನ್ನು ಬಾಡ ಮತ್ತು ಬಂಕಾಪುರಗಳ ಆಡಳಿತಾಧಿಕಾರಿಯೆಂದು ನಿಯಮಿಸಿದರು. ಅಂದಿನಿಂದ ಕನಕಪ್ಪನು ಕನಕನಾಯಕನೆಂದು ಸುಪ್ರಸಿದ್ಧನಾದ. ಶ್ರೀ ಕೃಷ್ಣದೇವರಾಯರ ಕೀರ್ತಿ, ವೈಭವಗಳಿಂದ ಪ್ರಭಾವಿತರಾದ ಕನಕನಾಯಕರು ಮೋಹನತರಂಗಿಣಿ ಎಂಬ ಕಾವ್ಯವನ್ನು ರಚಿಸಬೇಕೆಂದು ನಿರ್ಧರಿಸಿದರು. ಆಡಳಿತಾಧಿಕಾರಿಯಾದ ಸಮಯದಲ್ಲಿ ಕನಕನಾಯಕರು ಅನೇಕ ಕಲ್ಯಾಣಕಾರ್ಯಗಳನ್ನು ಕೈಗೊಂಡು ಜನರ ಪ್ರೀತಿ, ಗೌರವಗಳನ್ನು ಸಂಪಾದಿಸಿದರು. ಅದೇ ಸಮಯದಲ್ಲಿ ಮಲ್ಲನಾಯಕನ ಮಗಳಾದ ಲಕ್ಕಮ್ಮನು ಕನಕನಾಯಕರನ್ನು ಮೆಚ್ಚಿ ಅವರನ್ನೆ ಮದುವೆಯಾಗಬಯಸಿದಳು. ಆದರೆ ಮಲ್ಲನಾಯಕನು ಅದಕ್ಕೆ ತನ್ನ ಅನುಮತಿ ನೀಡಲಿಲ್ಲ. ಹೀಗಾಗಿ ಲಕ್ಕಮ್ಮನು ತನ್ನ ಜೀವನದುದ್ದಕ್ಕೂ ಸಂನ್ಯಾಸಿನಿಯಾಗಿಯೆ ಉಳಿಯಬೇಕೆಂಬ ಅಚಲನಿರ್ಧಾರವನ್ನು ಕೈಗೊಂಡಳು. ಕನಕನಾಯಕರು ಮರ್ಯಾದಸ್ಥ ಮನೆತನದ ಲಕ್ಷ್ಮೀದೇವಿಯೆಂಬ ಕನ್ಯೆಯನ್ನು ಮದುವೆಯಾಗಿ ಮುಂದೆ ಬೀರನಾಯಕನೆಂಬ ಗಂಡುಮಗುವಿಗೆ ಜನ್ಮವಿತ್ತರು.

ಆದರೆ ಕನಕನಾಯಕನು ತನ್ನ ಅಧಿಕಾರದ ಉತ್ತುಂಗ ಶಿಖರದಲ್ಲಿದ್ದಾಗ ಅವನ ಜೀವನದಲ್ಲಿ ಒಂದು ಅನಿರೀಕ್ಷಿತ ದುರಂತ ಸಂಭವಿಸಿತು. ಆತನ ಪ್ರೀತಿಯ ಪತ್ನಿ ಮತ್ತು ಗಂಡು ಮಗು ಇಬ್ಬರು ಅನಿರೀಕ್ಷಿತವಾಗಿ ಮರಣ ಹೊಂದಿದರು. ಆಗ ಅವರ ತಾಯಿಯು ಅವರಿಗೆ ಇನ್ನೊಂದು ಕನ್ಯೆಯನ್ನು ಮದುವೆಯಾಗಲು ಒತ್ತಾಯಿಸಿದರೂ ಅವರು ಅದಕ್ಕೆ ಒಪ್ಪಲಿಲ್ಲ. ಆ ಸಮಯದಲ್ಲಿ ಅವರ ಪರಮವೈರಿಯಾದ ಮಲ್ಲನಾಯಕರು ಅವರ ವಿರುದ್ಧ ರಹಸ್ಯವಾಗಿ ಕತ್ತಿ ಮಸೆಯುತ್ತಿದ್ದ. ಅದೇ ಸಮಯಕ್ಕೆ ವಿಜಯನಗರದ ಸಾಮ್ರಾಟರಾದ ಶ್ರೀ ಕೃಷ್ಣದೇವರಾಯರು ತೀರಿಕೊಂಡಿದ್ದರಿಂದ ವಿಜಯನಗರ ಸಾಮ್ರಾಜ್ಯದಲ್ಲಿ ಅರಾಜಕತೆಯುಂಟಾಯಿತು. ಅದರ ಪರಿಣಾಮವಾಗಿ ಕನಕನಾಯಕರು ಬಾಡ ಮತ್ತು ಬಂಕಾಪುರಗಳ ಆಡಳಿತಾಧಿಕಾರಿಯ ಪದವಿಯನ್ನು ಕಳೆದುಕೊಳ್ಳಬೇಕಾಯಿತು. ಆನಂತರ ಅವರು ಅನೇಕ ಸಾರೆ ಒಂದೇ ತರಹದ ಕನಸುಗಳನ್ನು ಕಾಣಹತ್ತಿದರು. ಅವರ ಕನಸಿನಲ್ಲಿ ತಿರುಪತಿಯ ತಿರುಮಲ ದೇವರು ಕಾಣಿಸಿಕೊಂಡು ಅವರಿಗೆ ತಮ್ಮ ದಾಸರಾಗಲು ಸೂಚಿಸಿದರಂತೆ. ಅದೇ ಸಮಯಕ್ಕೆ ಅವರ ಜೀವದಲ್ಲಿ ಇನ್ನೂ ಕೆಲವು ಕಹಿ ಅನುಭವಗಳಾದವು. ಒಮ್ಮೆ ಅವರು ತಮ್ಮೂರಾದ ಕಾಗಿನಕೆರೆ ಪ್ರಜೆಗಳ ಪರವಾಗಿ ನೆರೆಹೊರೆಯ ಊರಿನವರೊಂದಿಗೆ ಹೋರಾಡುವಾಗ ಅವರಿಗೆ ಮಾರಣಾಂತಿಕ ಗಾಯವುಂಟಾಯಿತು. ಇಂಥ ಘಟನೆಗಳಿಂದ ಘಾಸಿಗೊಂಡ ಕನಕನಾಯಕರಲ್ಲಿ ಜೀವನದ ಬಗೆಗೆ ಒಂದು ಹೊಸ ದೃಷ್ಟಿಕೋನ ಉಂಟಾಯಿತು. ಅವರಿಗೆ ದೇವರ ದರ್ಶನವುಂಟಾದದ್ದರಿಂದ ಸಂಸಾರವನ್ನು ತ್ಯಜಿಸಿ ಸಂನ್ಯಾಸಿಯಾಗಲು ನಿರ್ಧರಿಸಿದರು. ಹೀಗಾಗಿ ಕನಕನಾಯಕರು ಕನಕದಾಸರಾಗಿ

ಪರಿವರ್ತನೆಗೊಂಡರು. ಹೀಗೆ ಹೊಸಜೀವನ ಪ್ರಾರಂಭಿಸಿದುದರ ಕುರುಹಾಗಿ ಅವರು ತಮ್ಮ ವೇಷ-ಭೂಷಣಗಳನ್ನು ಬದಲಿಸಿಕೊಂಡರು. ಅವರು ಸಾಮಾನ್ಯವಾಗಿ ಉಡುತ್ತಿದ್ದ ಉಡುಪುಗಳನ್ನು ತೊರೆದು, ಮೊಳಕಾಲಿವರೆಗೆ ಧೋತರವನ್ನು ಉಟ್ಟುಕೊಂಡು, ಹೆಗಲ ಮೇಲೆ ಕರಿಯ ಕಂಬಳಿಯನ್ನು ಹೊದ್ದು, ತಲೆಯ ಮೇಲೆ ರುಮಾಲು ಧರಿಸಿ, ಕಾಲಲ್ಲಿ ಚಪ್ಪಲಿಗಳನ್ನು ಧರಿಸಿದರು. ಬಲಭುಜಕ್ಕೆ ಏಕತಾರಿಯನ್ನು ಹಾಕಿಕೊಂಡು, ಎಡಹೆಗಲಿಗೆ ಒಂದು ಬುಟ್ಟಿಯನ್ನು ಹಾಕಿಕೊಂಡರು. ಎಡಗೈಯಲ್ಲಿ ತಾಳಗಳನ್ನು ಹಿಡಿದುಕೊಂಡರು. ತಾಯಿಯ ಅನುಮತಿಯನ್ನು ಪಡೆದು ಅವರು ಯಾತ್ರಾಸ್ಥಳಗಳಿಗೆ ಅಲೆದಾಡತೊಡಗಿದರು. ಅವರ ವೇಷದಲ್ಲಾದ ಬದಲಾವಣೆಯನ್ನು ಕಂಡು ಅದಕ್ಕೇನು ಕಾರಣವೆಂದು ಕೇಳತೊಡಗಿದರು. ಅದಕ್ಕೆ ಕನಕದಾಸರು "ಇಲ್ಲಿಯವರೆಗೆ ನಾನು ಮಾನವರ ಸೇವೆ ಮಾಡಿದೆ. ಇನ್ನು ಮೇಲೆ ನಾನು ಹರಿದಾಸನಾಗಿ ಸಾಯುವವರೆಗೆ ದೇವರ ಸೇವೆಯನ್ನು ಮಾಡುವೆ" ನೆಂದು ಉತ್ತರಿಸಿದರು. ಆನಂತರ ಅವರು ತಿರುಪತಿಗೆ ಹೋಗಿ ವೆಂಕಟೇಶ್ವರನ ದರ್ಶನ ಮಾಡಿಕೊಂಡರು. ದೇವರ ನಿರ್ದೇಶನಕ್ಕನುಗುಣವಾಗಿ ಅವರು ಮತ್ತೆ ಬಾಡಕ್ಕೆ ಹಿಂದಿರುಗಿದರು. ಆ ವೇಳೆಗಾಗಲೆ ಅವರ ತಾಯಿ ತೀರಿಕೊಂಡಿದ್ದಳು. ಆ ಸುದ್ದಿಯಿಂದ ಆಘಾತವಾದಂತಾಗಿ ಅವರು ಕೂಡಲೆ ತಾಯಿಯ ಸಮಾಧಿಗೆ ಧಾವಿಸಿ ಅವಳ ಆತ್ಮಶಾಂತಿಗಾಗಿ ದೇವರಲ್ಲಿ ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದರು. ನಂತರ ಅವರು ಬಾಡದಲ್ಲಿರುವ ಆದಿಕೇಶವನ ಮೂರ್ತಿಯನ್ನು ಕಾಗಿನೆಲೆಗೆ ಹೊತ್ತುಕೊಂಡು ಹೋಗಿ ಅದನ್ನು ಅಲ್ಲಿಯೆ ಪ್ರತಿಷ್ಠಾಪಿಸಿ, ಅದರ ಮೇಲೊಂದು ದೇವಸ್ಥಾನವನ್ನು ನಿರ್ಮಿಸಿದರು. ಅವರು ಕಾಗಿನೆಲೆಯಲ್ಲಿಯೆ ನೆಲೆ ನಿಂತು ತಮ್ಮ ಇಡೀ ಜೀವನವನ್ನು ಧಾರ್ಮಿಕಕಾರ್ಯಗಳಿಗಾಗಿ ಮುಡುಪಿಟ್ಟರು.

ಅಧ್ಯಾತ್ಮದಲ್ಲಿ ಇನ್ನೂ ಹೆಚ್ಚಿನ ಜ್ಞಾನ ಪಡೆಯಬೇಕೆಂಬ ಆಶೆಯಿಂದ ಕನಕದಾಸರು ತಿರುಮಕೂಡಲಿನಲ್ಲಿದ್ದ ಸೋಸಲೆ ಮಠಕ್ಕೆ ಹೋಗಿ ಶ್ರೀ ವ್ಯಾಸರಾಯ ಸ್ವಾಮಿಗಳನ್ನು ಭೇಟಿಯಾಗಿ, ತಮ್ಮ ಮನದಾಳದ ಆಶೆಯನ್ನು ನಿವೇದಿಸಿಕೊಂಡರು. ಕನಕದಾಸರ ಅಧ್ಯಾತ್ಮಿಕ ದಾಹವನ್ನು ಕಂಡು ಸುಪ್ರೀತರಾದ ಶ್ರೀ ವ್ಯಾಸರಾಯ ಸ್ವಾಮಿಗಳು ಅವರನ್ನು ಪ್ರೀತಿಯಿಂದ ಸ್ವೀಕರಿಸಿ, ಅವರಿಗೆ ಅಧ್ಯಾತ್ಮಿಕ ಜ್ಞಾನವನ್ನು ಧಾರೆಯೆರೆದರು. ಕನಕದಾಸರು ಅವರ ಮಾರ್ಗದರ್ಶನದಲ್ಲಿ ಅಧ್ಯಾತ್ಮಜ್ಞಾನದಲ್ಲಿ ಅಸಾಮಾನ್ಯ ಪರಿಣತಿ ಪಡೆದರು. ಆನಂತರ ಅವರು ಮತ್ತೆ ತಿರುಪತಿ ಶ್ರೀ ಕ್ಷೇತ್ರಕ್ಕೆ ಭೇಟಿಯಿತ್ತು ಅಲ್ಲಿ ಅನೇಕ ಪವಾಡಗಳನ್ನು ಮೆರೆದರು. ಅನಂತರ ಅವರು ನಂಜನಗೂಡು, ಬೇಲೂರು, ಉಡುಪಿ ಮತ್ತಿತರ ಯಾತ್ರಾಸ್ಥಳಗಳನ್ನು ಸಂದರ್ಶಿಸಿ ಸ್ಥಳೀಯ ಜನರಿಗೆ ಉನ್ನತ ನೀತಿತತ್ವಗಳನ್ನು ಬೋಧಿಸಿದರು. ತಮ್ಮ ವೃದ್ಧಾಪ್ಯದಲ್ಲಿ ಅವರು ಕಾಗಿಲಿನೆಲೆಯಲ್ಲಿಯೆ ನೆಲೆ ನಿಂತರು. ಆ ಸಮಯಕ್ಕೆ ಸಂನ್ಯಾಸಿನಿಯಾಗಿಯೆ ಉಳಿದಿದ್ದ ಲಕ್ಕಮ್ಮನೂ ವೃದ್ಧೆಯಾಗಿದ್ದಳು. ಅವಳು ಬಂದು ಕನಕದಾಸರಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಯಾಚಿಸಿದಳು. ಅವರು ಅವಳಿಗೆ ಈ ಜಗತ್ತಿನಲ್ಲಿರುವ

ಸರ್ವಸ್ವವು ದೇವರ ಪ್ರಸಾದವೆಂದು ಪರಿಗಣಿಸಲು ಮತ್ತು ಭಿಕ್ಷುಣಿಯಾಗಿಯೆ ಇದ್ದುಕೊಂಡು ಆದಿಕೇಶವನ ದೇವಸ್ಥಾನದ ಉಸ್ತುವಾರಿಯನ್ನು ನೋಡಿಕೊಳ್ಳಲು ಉಪದೇಶಿಸಿದರು. ಮುಂದೆ ಕೆಲವು ವರುಷಗಳಲ್ಲಿ ಕನಕದಾಸರು ಮರ್ತ್ಯದೇಹವನ್ನು ತ್ಯಜಿಸಿ ಆದಿಕೇಶವನಲ್ಲಿ ಐಕ್ಯರಾದರು. ಕನಕದಾಸರ ಮರಣದ ಕಾಲದ ಬಗೆಗೆ ವಿಮರ್ಶಕರಲ್ಲಿ ಭಿನ್ನಾಭಿಪ್ರಾಯವಿದೆ. ಕೆಲವು ಪಂಡಿತರ ಪ್ರಕಾರ ಕನಕದಾಸರು 1592ರಲ್ಲಿ ಮರಣ ಹೊಂದಿದರೆ, ಇನ್ನು ಕೆಲವು ಪಂಡಿತರ ಪ್ರಕಾರ ಅವರು 1606ರಲ್ಲಿ ಮರಣ ಹೊಂದಿದರು ಎಂಬ ವಿಭಿನ್ನ ಅಭಿಪ್ರಾಯಗಳಿವೆ. ಕನ್ನಡ ಪಂಡಿತರು ಇದಕ್ಕೆ ಸಂಬಂಧಪಟ್ಟ ಸಾಹಿತ್ಯಿಕ ಪತ್ಯಗಳನ್ನು ಮತ್ತು ಸಾಂಸ್ಕೃತಿಕ ಪತ್ಯಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಕನಕದಾಸರ ಮರಣದ ನಿರ್ದಿಷ್ಟ ವರುಷವನ್ನು ಇನ್ನೂ ನಿರ್ಧರಿಸಬೇಕಾದದ್ದು ಇದೆ.

ಕನಕದಾಸರು ತಮ್ಮ ಸುದೀರ್ಘವಾದ ಅಧ್ಯಾತ್ಮಿಕ ವೃತ್ತಿಯಲ್ಲಿ ಅನೇಕ ಧಾರ್ಮಿಕ ಕಥನಗಳನ್ನು ರಚಿಸಿದರು. ಅವರು ಅನೇಕ ಮುಂಡಿಗೆಗಳನ್ನು ಮತ್ತು ಅಸಂಖ್ಯಾತ ಕೀರ್ತನೆಗಳನ್ನು ರಚಿಸಿದರು. ಮೋಹನ ತರಂಗಿಣಿ ಎಂಬ ಅವರ ಪ್ರಪ್ರಥಮ ಧಾರ್ಮಿಕಕಥನದಲ್ಲಿ ಅವರು ಶ್ರೀಹರಿಭಕ್ತಿಯ ಅವಶ್ಯಕತೆಯನ್ನು ಎತ್ತಿತೋರಿಸಿದ್ದಾರೆ. ನಡುಗನ್ನಡದಲ್ಲಿ ರಚಿಸಿದ ಈ ಕಥನಕಾವ್ಯವನ್ನು ಅವರು ತಮ್ಮ ಪತ್ನಿಗೆ ಸಂಬೋಧಿಸಿದ್ದಾರೆ. ಈ ಪೌರಾಣಿಕ ಮಹಾಕಾವ್ಯದಲ್ಲಿ ಅವರು ಶ್ರೀಕೃಷ್ಣನ ಜೀವನವನ್ನು ಭಕ್ತಿರಸಪೂರ್ಣವಾಗಿ ಚಿತ್ರಿಸಿದ್ದಾರೆ. ಈ ಕಥನವನ್ನು ಅವರು ಸಾಂಗತ್ಯ ಛಂದಸ್ಸಿನಲ್ಲಿ ರಚಿಸಿದ್ದಾರೆ. ಶ್ರೀಕೃಷ್ಣನ ಜೀವನದ ಪ್ರಮುಖ ಘಟನೆಗಳಾದ ರುಕ್ಮಿಣಿಯ ಉದರದಲ್ಲಿ ಪ್ರದ್ಯುಮ್ನನ ಜನನ, ಅಂಬರಾಸುರನ ವಧೆ, ಕಾಮ–ರತಿಯರ ಪುನರ್ವಿವಾಹ. ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನೊಂದಿಗೆ ಬಾಣಾಸುರನ ಪುತ್ರಿಯಾದ ಉಷೆಯ ವಿವಾಹ ಮತ್ತು ದ್ವಾರಕೆಗೆ ಶ್ರೀಕೃಷ್ಣನ ಪುನರಾಗಮನ–ಮುಂತಾದವುಗಳನ್ನು ಚಿತ್ರಿಸಲಾಗಿದೆ. ಮೋಹನ ತರಂಗಿಣಿಯ ಕಥಾವಸ್ತು ಮಹಾಭಾರತ, ಭಾಗವತ ಪುರಾಣ, ಸ್ಕಂದ ಪುರಾಣ ಹರಿವಂಶ ಮತ್ತು ವಿಷ್ಣುಪುರಾಣಗಳಿಂದ ಪೌರಾಣಿಕ ಸಾಮಗ್ರಿಯ ಮೇಲೆ ಆಧರಿತವಾಗಿದೆ. ಈ ಎಲ್ಲ ಸಾಮಗ್ರಿಯ ವಿಷಯವನ್ನು ಸಾರವತ್ತಾಗಿ ಹೀರಿಕೊಂಡು ಕನಕದಾಸರು ಈ ಕಾವ್ಯವನ್ನು ಎಷ್ಟು ಸುಂದರವಾಗಿ ರಚಿಸಿದ್ದಾರೆಂದರೆ ಅದನ್ನು ಯಾವ ಕಲಾರಸಿಕನೂ ಆಸ್ವಾದಿಸಲಿಕ್ಕೆ ಅಸಮರ್ಥನಾಗುವದಿಲ್ಲ. ಈ ಕಾವ್ಯದಲ್ಲಿ ಕಂಡುಬರುವ ಸುಂದರ ಕಥನ ಕಲೆ, ಸಂಗೀತಮಯ ಭಾಷೆ, ವರ್ಣನೆಗಳ ಬಾಹುಳ್ಯ, ಆಡು ಭಾಷೆಯ ಪ್ರಯೋಗ ಮತ್ತು ಅದ್ಭುತರಸ ಚಿತ್ರಣಗಳೆಲ್ಲ ಅತ್ಯಂತ ಮನಮೋಹಕವಾಗಿವೆ.

ಈ ಪೌರಾಣಿಕ ವಸ್ತುವಿನ ಚಿತ್ರಣದಲ್ಲಿ ಕನಕದಾಸರು ತಮ್ಮ ಸ್ವೋಪಜ್ಞತೆಯನ್ನು ಮೆರೆದಿದ್ದಾರೆ. ಇದರಲ್ಲಿ ಅವರು ಅಷ್ಟಾದಶ ವರ್ಣನೆಗಳಿಂದ ಸಾಂಪ್ರದಾಯಿಕ ತಂತ್ರಗಳನ್ನು ಬಳಸಿಕೊಂಡಿದ್ದಾರೆ. ಈ ಕಾವ್ಯದಲ್ಲಿ ಶೃಂಗಾರರಸವು ಪ್ರಧಾನವಾಗಿದ್ದರೂ

ಕೂಡ ಇತರ ರಸಗಳಾದ ಭಕ್ತಿರಸ, ಅದ್ಭುತರಸ, ಕರುಣರಸ, ಬೀಭತ್ಸರಸ ಮತ್ತು ಶಾಂತರಸಗಳನ್ನು ಕೂಡ ಸಮಯೋಚಿತವಾಗಿ ಚಿತ್ರಿಸಿದ್ದಾರೆ. ಈ ಕಾವ್ಯದಲ್ಲಿ ಕನಕದಾಸರು ಇಮ್ಮಡಿ ಯಶಸ್ಸನ್ನು ಸಾಧಿಸಿದ್ದಾರೆಂದು ಹೇಳಬಹುದು. ಒಂದು ಕಡೆಗೆ ಅವರು ಶ್ರೀಕೃಷ್ಣಪರಮಾತ್ಮನ ಬಗೆಗೆ ತಮಗಿರುವ ಅನನ್ಯ ಭಕ್ತಿಯನ್ನು ಪ್ರದರ್ಶಿಸಿದ್ದಾರೆ. ಇನ್ನೊಂದು ಕಡೆ ಅವರು ಶ್ರೀಕೃಷ್ಣ ಪರಮಾತ್ಮ ಇಬ್ಬರನ್ನೂ ಸಮೀಕರಿಸಿ ತೋರಿಸಿದ್ದಾರೆ.

ಕನಕದಾಸರು ಜಾತಿಯಿಂದ ಕುರುಬರಾಗಿದ್ದರೂ ಕೂಡ ವೈಷ್ಣವ ಭಕ್ತಿಮಾರ್ಗದ ಪ್ರತಿಪಾದಕರಾಗಿದ್ದರು.ಆದರೆ ಅವರು ಕರ್ನಾಟಕದಲ್ಲಿ ಪ್ರಚಲಿತವಿದ್ದ ಇತರ ಧರ್ಮಗಳನ್ನು ವಿರೋಧಿಸಲಿಲ್ಲ. ಅವರು ದ್ವೈತ ಮತ್ತು ಅದ್ವೈತ ತತ್ವಗಳಿಂದಲೂ ಪ್ರಭಾವಿತರಾಗಿದ್ದರು. ಇವೆಲ್ಲ ಧಾರ್ಮಿಕ ವಿಚಾರಧಾರೆಗಳನ್ನು ಅವರು ತಮ್ಮ ಮೋಹನ ತರಂಗಿಣಿಯ ಸಮಗ್ರ ಕಾವ್ಯದರ್ಶನದಲ್ಲಿ ಮೇಳವಿಸಲು ಪ್ರಯತ್ನಿಸಿ ಯಶಸ್ವಿಯಾಗಿದ್ದಾರೆ.

ಕನಕದಾಸರ ನಳಚರಿತ್ರೆಯು ಅತ್ಯಂತ ಜನಪ್ರಿಯ ಖಂಡಕಾವ್ಯವಾಗಿದೆ. ಎಂಭತ್ತು ಸಂಧಿಗಳು ಮತ್ತು ನಾಲ್ಕುನೂರ ಎಂಭತ್ತೊಂದು ಭಾಮಿನಿ ಷಟ್ಪದಿಗಳನ್ನೊಳಗೊಂಡ ಈ ಕಾವ್ಯ ನಳ ಮತ್ತು ದಮಯಂತಿಯರ ಅನಿರೀಕ್ಷಿತ ಅಗಲುವಿಕೆ, ಅದರಿಂದ ಅನೇಕ ದು:ಖದುಮ್ಮಾನಗಳ ಅನುಭವಿಸುವುದು ಮತ್ತು ಕೊನೆಯ ಸಂತೋಷಮಯ ಸಮಾಗಮವನ್ನು ಅತ್ಯಂತ ಮನೋಜ್ಞವಾಗಿ ಚಿತ್ರಿಸುತ್ತದೆ. ಮಹಾಭಾರತದ ಉಪಾಖ್ಯಾನಗಳಲ್ಲಿ ಒಂದಾದ ನಳ-ದಮಯಂತಿಯ ಕಥೆಯು ಎಷ್ಟು ಜನಪ್ರಿಯವಾಗಿದೆಯೆಂದರೆ ಅದು ಜಗತ್ತಿನ ಅನೇಕ ಭಾಷೆಗಳಲ್ಲಿ ಅನುವಾದಗೊಂಡಿವೆ. ಈ ಕಥೆಯು ನಲವತ್ತೂರು ಸಂಸ್ಕೃತ ಕೃತಿಗಳಲ್ಲಿ ಮತ್ತು ಹದಿಮೂರು ಕನ್ನಡ ಕೃತಿಗಳಲ್ಲಿ ಚಿತ್ರಿತವಾದದ್ದನ್ನು ಗಮನಿಸಿದರೆ ಅವರ ಅಸಾಧಾರಣ ಜನಪ್ರಿಯತೆ ನಮಗೆ ಗೋಚರವಾಗುತ್ತದೆ.

ಕನಕದಾಸರ ನಳಚರಿತ್ರೆಯಲ್ಲಿ ನಳ-ದಮಯಂತಿಯರ ಕಥೆಯನ್ನು ಮಹಾಭಾರತದ ಚೌಕಟ್ಟಿನೊಳಗೆ ಕೂಡ್ರಿಸಲಾಗಿದೆ. ಪಾಂಡವರು ತಮ್ಮ ರಾಜ್ಯವನ್ನು ಕಳೆದುಕೊಂಡು ಅರಣ್ಯದಲ್ಲಿ ಅಲೆದಾಡುತ್ತಿದ್ದಾಗ ಇಂದ್ರಲೋಕದಿಂದ ಅರ್ಜುನನು ಮರಳಿಬರುವುದು ತಡವಾದುದರಿಂದ ಧರ್ಮರಾಜನು ಚಿಂತಾಕ್ರಾಂತನಾಗುತ್ತಾನೆ. ಆಗ ಕಾಮ್ಯಕ ವನಕ್ಕೆ ಬಂದ ಲೋಮಶಮುನಿಗೆ ಧರ್ಮರಾಜನು ತನ್ನ ಚಿಂತೆಯನ್ನು ಹೇಳಿಕೊಳ್ಳುತ್ತಾನೆ. ಆಗ ಮುನಿ ಧರ್ಮರಾಜನಿಗೆ ನಳ, ಹರಿಶ್ಚಂದ್ರ ಮತ್ತು ರಾಮಚಂದ್ರರಿಗುಂಟಾದ ಇದಕ್ಕಿಂತ ದೊಡ್ಡ ದುರಂತಗಳನ್ನು ನಿರೂಪಿಸಿ ಸಮಾಧಾನ ಪಡಿಸುತ್ತಾನೆ. ನಳಚರಿತ್ರೆಯಲ್ಲಿ ನಿಷಧರಾಜ್ಯದ ರಾಜನಾದ ವೀರಸೇನನ ಪುತ್ರ ನಳ ಮತ್ತು ವಿದರ್ಭರಾಜ್ಯದ ರಾಜನಾದ ಭೀಮನ ಪುತ್ರಿ ದಮಯಂತಿ ಇವರಿಬ್ಬರೂ ಸ್ವಯಂವರ ಪದ್ಧತಿಯ ಪ್ರಕಾರ ವಿವಾಹವಾಗುತ್ತಾರೆ. ಆಗ ನಳನಿಗೆ ತೊಂದರೆ ಕೊಡುವುದಕ್ಕಾಗಿ ಕಲಿಪುರುಷನು ಆತನನ್ನು ಅರಣ್ಯಕ್ಕೆ ಕಳಿಸಲು

ನಿರ್ಧರಿಸುತ್ತಾನೆ. ಕಲಿಪುರುಷನು ಬ್ರಾಹ್ಮಣನ ವೇಷವನ್ನು ಧರಿಸಿ ಪುಷ್ಕರನೊಂದಿಗೆ ನಳನಿಗೆ ಪಗಡೆಯಾಟವಾಡಲು ಪ್ರೇರೇಪಿಸಿ ಅದರಲ್ಲಿ ಅವನು ಸೋಲುವಂತೆ ಮಾಡುತ್ತಾನೆ. ಹೀಗಾಗಿ ನಳಮಹಾರಾಜನು ತನ್ನ ರಾಜ್ಯವನ್ನು ಕಳೆದುಕೊಂಡು ಅರಣ್ಯಕ್ಕೆ ಹೋಗಿ. ದಾರಿಯಲ್ಲಿ ರಾಣಿಯಾದ ದಮಯಂತಿಯನ್ನು ತ್ಯಜಿಸಿ ಮುಂದೆ ಹೋಗಿಬಿಡುತ್ತಾನೆ. ದಮಯಂತಿಯು ನಿಸ್ಸಹಾಯಕಳಾಗಿ ತನ್ನ ತವರುಮನೆಗೆ ಹಿಂದಿರುಗುತ್ತಾಳೆ. ದಾರಿಯಲ್ಲಿ ನಳನಿಗೆ ಹೆಬ್ಬಾವು ಕಚ್ಚಿದುದರ ಫಲವಾಗಿ ಆತ ಕುರೂಪಿಯಾಗಿ ಬಿಡುತ್ತಾನೆ. ಹೀಗಾಗಿ ಆತ ತನ್ನ ಜೀವನೋಪಾಯಕ್ಕಾಗಿ ಋತುಪರ್ಣ ದೊರೆಯ ಕೈಕೆಳಗೆ ಸಾರಥಿಯಾಗಿ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ಭೀಮರಾಜನು ಮತ್ತೊಮ್ಮೆ ದಮಯಂತಿಯ ಸ್ವಯಂವರವನ್ನು ಏರ್ಪಡಿಸುತ್ತಾನೆ.ಆಗ ಋತುಪರ್ಣನೊಂದಿಗೆ ಬಂದ ಕುರೂಪಿಯಾದ ನಳನನ್ನು ದಮಯಂತಿಯು ಸರಿಯಾಗಿ ಗುರುತಿಸಿದ ನಂತರ ಮತ್ತೆ ಅವರ ಪುನರ್ಮಿಲನವಾಗುತ್ತದೆ. ಅಲ್ಲಿ ನೆರೆದ ಅತಿಥಿಗಳು ಮತ್ತು ಗುರು ಹಿರಿಯರೆಲ್ಲ ಅವರನ್ನು ಆಶೀರ್ವದಿಸುತ್ತಾರೆ.

ಈ ಕಾವ್ಯದಲ್ಲಿ ಕನಕದಾಸರು ನಳಮಹಾರಾಜ ಮತ್ತು ದಮಯಂತಿಯರು ಅನುಭವಿಸಿದ ದುರಂತಮಯ ದು;ಖವನ್ನು, ಸತ್ಯದಲ್ಲಿ ಅವರಿಟ್ಟಿರುವ ಅಚಲ ಶ್ರದ್ಧೆಯನ್ನು ಮತ್ತು ಕೊನೆಯ ಪುನರ್ಮಿಲನವನ್ನು ಅತ್ಯಂತ ಹೃದಯಸ್ಪರ್ಶಿಯಾಗಿ ಚಿತ್ರಿಸಿದ್ದಾರೆ. ಪರಿಶುದ್ಧ ಮತ್ತು ಆದರ್ಶ ಪ್ರೇಮವು ಹೇಗೆ ಎಲ್ಲ ದು;ಖಗಳನ್ನೂ ಮೀರಿ ತನ್ನ ಗುರಿಯನ್ನು ಸಾಧಿಸುತ್ತದೆ ಎಂಬುದನ್ನು ಕನಕದಾಸರು ಅತ್ಯಂತ ಸುಂದವಾಗಿ ಚಿತ್ರಿಸಿದ್ದಾರೆ.

ನಳಚರಿತ್ರೆಯಲ್ಲಿ ಉಪಯೋಗಿಸಲಾದ ಕನ್ನಡ ಭಾಷೆಯು ಅತ್ಯಂತ ತಿಳಿಯಾಗಿದ್ದು ಅಲ್ಲಲ್ಲಿ ಜನಪದೀಯಾಂಶವನ್ನೂ ಒಳಗೊಂಡಿದೆ. ಭಾಮಿನಿ ಷಟ್ಪದಿಯಲ್ಲಿ ರಚಿತವಾದ ಈ ಕಾವ್ಯದಲ್ಲಿ ಗೇಯತೆ ಮತ್ತು ಸುಂದರ ಪ್ರತಿಮೆಗಳು ತುಂಬಿಕೊಂಡಿವೆ. ಇವೆಲ್ಲ ಕಾವ್ಯತಂತ್ರಗಳನ್ನು ಪ್ರಮುಖವಾದ·ಕರುಣರಸದ ಚಿತ್ರಣಕ್ಕೆ ಬಳಸಿಕೊಳ್ಳಲಾಗಿದೆ. ಇದಕ್ಕೆ ಮುಖ್ಯ ಕಾರಣವೇನೆಂದರೆ ಕನಕದಾಸರು ಮೂಲತ; ಭಕ್ತಿಕವಿಯಾದುದೇ ಆಗಿದೆ.

ಅವರ ರಾಮಧಾನ್ಯಚರಿತ್ರೆ ಎಂಬ ಕೃತಿ ಅತ್ಯಂತ ಸಂಕ್ಷಿಪ್ತವಾದ ಸುಂದರ ಕಾವ್ಯವಾಗಿದೆ. 1185 ಭಾಮಿನಿ ಷಟ್ಪದಿಯಲ್ಲಿ ಹರಡಿಕೊಂಡ ಈ ಕಾವ್ಯವನ್ನು ವಿಮರ್ಶಕರು ಖಂಡಕಾವ್ಯವೆಂದೇ ಪರಿಗಣಿಸಿದ್ದಾರೆ. ಈ ಕಾವ್ಯದಲ್ಲಿ ಎರಡು ವಸ್ತುಗಳನ್ನು ಹೆಣೆಯಲಾಗಿದೆ. ಒಂದು ರಾಮನ ಕತೆಯಾದರೆ, ಇನ್ನೊಂದು ಭತ್ತ ಮತ್ತು ರಾಗಿಗಳ ನಡುವಿನ ಸ್ಪರ್ಧೆಯನ್ನು ಚಿತ್ರಿಸಿ, ರಾಗಿಯ ಶ್ರೇಷ್ಠತೆಯನ್ನು ಎತ್ತಿಹಿಡಿಯುತ್ತದೆ. ಹೀಗಾಗಿ ಅದು ರೂಪಕಕಾವ್ಯದ ಆಯಾಮವನ್ನು ಪಡೆದುಕೊಂಡಿವೆ. ಈ ಕಾವ್ಯದಲ್ಲಿ ಧಾರ್ಮಿಕ ವಸ್ತು ಮತ್ತು ಸಾಮಾಜಿಕ ವಿಡಂಬನೆಯ ವಸ್ತುವನ್ನು ಮೇಳವಿಸಲಾಗಿದೆ. ಇದು ಕನಕದಾಸರ ಕಾರಯಿತ್ರಿ ಪ್ರತಿಭೆಗೆ ಸಾಕ್ಷಿಯಾಗಿದೆ. ಈ

ಕಾವ್ಯದಲ್ಲಿ ಆತ್ಮಚರಿತ್ರಾತ್ಮಕ ಅಂಶ ಕಂಡುಬರದಿದ್ದರೂ ಅದರಲ್ಲಿ ಚಿತ್ರಿತವಾದ ಘಟನೆಗಳು ಅದರ ಕರ್ತೃ ಕನಕದಾಸರೇ ಎಂಬುವುದನ್ನು ನಿಸ್ಸಂಶಯವಾಗಿ ಸಿದ್ಧಮಾಡಿ ತೋರಿಸುತ್ತವೆ. ಅದರಲ್ಲಿ ಕಂಡುಬರುವ ಚೆನ್ನಿಗರಾಯ ಮತ್ತು ಆದಿಕೇಶವ ಎಂಬ ಉಲ್ಲೇಖಗಳು ಕನಕದಾಸರ ಇತರ ಕೃತಿಗಳೊದಿಗೆ ಹೊಂದಿದ ಅಂತರ್ ಪತ್ಯ ಸಂಬಂಧಗಳನ್ನು ತೋರಿಸುತ್ತವೆ.

ಈ ಖಂಡಕಾವ್ಯದ ಕಥೆಯನ್ನು ಹೀಗೆ ಸಂಗ್ರಹಿಸಬಹುದು: ಧರ್ಮರಾಜನು ವನವಾಸದಲ್ಲಿದ್ದಾಗ ಅವನ ಬೇಸರವನ್ನು ಕಳೆಯಲು ಶಾಂಡಿಲ್ಯಮುನಿಗಳು ಅವನಿಗೆ ಶ್ರೀ ರಾಮಚಂದ್ರ ಮತ್ತು ಭತ್ತ ಮತ್ತು ರಾಗಿಯ ಕಥೆಯನ್ನು ನಿರೂಪಿಸುತ್ತಾರೆ. ಅದರ ಪ್ರಕಾರ ರಾಮನು ರಾವಣನನ್ನು ಸೋಲಿಸಿ, ಸೀತೆಯನ್ನು ಮರಳಿ ಪಡೆದುಕೊಂಡು ಲಕ್ಷ್ಮಣನೊಂದಿಗೆ ಅಯೋಧ್ಯೆಗೆ ಮರುಳುತ್ತಾನೆ. ದಾರಿಯಲ್ಲಿ ಗೌತಮ ಮುನಿಗಳ ಆಶ್ರಮದಲ್ಲಿ ವಿಶ್ರಮಿಸಿ ಅವರ ಆದರಾತಿಥ್ಯವನ್ನು ಸ್ವೀಕರಿಸುತ್ತಾನೆ. ಅವರು ಒಂಬತ್ತು ತರಹದ ಧಾನ್ಯಗಳ ಬಗೆಗೆ ಚರ್ಚಿಸುತ್ತ ಕುಳಿತಾಗ ಹನುಮಂತನು ರಾಗಿಯ ಬಗೆಗಿದ್ದ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾನೆ. ಆಗ ಬತ್ತ ಮತ್ತು ರಾಗಿಗಳ ನಡುವೆ ಉದ್ವೇಗಪೂರ್ಣ ಚರ್ಚೆ ನಡೆಯುತ್ತದೆ. ರಾಗಿಯು ಕೆಳಮಟ್ಟದ ಧಾನ್ಯವಾಗಿದ್ದರಿಂದ ಅದನ್ನು ಬ್ರಾಹ್ಮಣರ ಮನೆಗಳಲ್ಲಿ ಯಾವ ಪವಿತ್ರ ವಿಧಿಗಳಲ್ಲಿಯೂ ಉಪಯೋಗಿಸಲಾರರೆಂದು ಭತ್ತವು ಆಪಾದಿಸುತ್ತದೆ. ಆದರೆ ರಾಗಿಯು ತಾನು ಎಲ್ಲರಿಗೂ ಎಲ್ಲ ಕಾಲದಲ್ಲಿಯೂ. ಅದರಲ್ಲಿಯೂ ವಿಶೇಷವಾಗಿ ಬರಗಾಲದಲ್ಲಿ ಉಪಯುಕ್ತವಾದದ್ದೆಂದು ಸಮರ್ಥಿಸಿಕೊಳ್ಳುತ್ತದೆ. ಹೀಗೆ ಅವೆರಡರ ನಡುವಿನ ವಾಗ್ಯುದ್ಧ ಅನಂತವಾಗಿ ಮುಂದುವರಿಯುತ್ತದೆ. ಆಗ ಶ್ರೀ ರಾಮಚಂದ್ರನು ಅವರಿಬ್ಬರನ್ನು ಸೆರೆಮನೆಯಲ್ಲಿ ಬಂಧಿಸಿಡುವಂತೆ ಆಜ್ಞಾಪಿಸಿ, ನಂತರ ತಾನು ಅಯೋಧ್ಯೆಗೆ ಹಿಂದಿರುಗಿದ ನಂತರ ಅವರನ್ನು ಅಲ್ಲಿಗೆ ಕರೆಯಿಸಿ ತನ್ನ ನ್ಯಾಯನಿರ್ಣಯವನ್ನು ಕೊಡುವುದಾಗಿ ಭರವಸೆ ನೀಡುತ್ತಾನೆ. ಅನಂತರ ಶ್ರೀ ರಾಮಚಂದ್ರನು ಅಯೋಧ್ಯೆಗೆ ಮರಳುತ್ತಾನೆ. ಅಲ್ಲಿ ಅವನ ಪಟ್ಟಾಭಿಷೇಕ ನಡೆಯುತ್ತದೆ. ಆಗ ಅವನು ಭತ್ತ ಮತ್ತು ರಾಗಿಗಳನ್ನು ಕರೆಕಳಿಸುತ್ತಾನೆ. ಅವರು ಬಂದಮೇಲೆ ತನ್ನ ಆಸ್ಥಾನಿಕರ ಸಭೆಯನ್ನು ಕರೆಯುತ್ತಾನೆ. ಆರು ತಿಂಗಳವರೆಗೆ ಸೆರೆಮನೆಯಲ್ಲಿದ್ದ ಭತ್ತ ಸೊರಗಿಹೋಗಿತ್ತು. ಹೀಗಾಗಿ ಅದು ತನ್ನ ಮೊದಲಿನ ಸೌಂದರ್ಯವನ್ನು ಕಳೆದುಕೊಂಡಿತ್ತು. ಆದರೆ ರಾಗಿಯು ಮಾತ್ರ ಆರೋಗ್ಯವಂತನಾಗಿಯೇ ಇತ್ತು. ಇಂದ್ರದೇವನು ರಾಗಿಯನ್ನು ತುಂಬುಹೃದಯದಿಂದ ಹೊಗಳುತ್ತಾನೆ. ಅದರಂತೆ ದೇವತೆಗಳೆಲ್ಲ ರಾಗಿಯನ್ನು ಆಶೀರ್ವದಿಸಿ, ಅದಕ್ಕೆ ತಮ್ಮ ಶಕ್ತಿಯನ್ನು ಧಾರೆಯೆರೆಯುತ್ತಾರೆ. ರಾಗಿಯನ್ನು ಕಂಡು ಶ್ರೀ ರಾಮನು ಎಷ್ಟು ಸಂತೋಷಪಡುತ್ತಾನೆಂದರೆ ಅವನು ಅದಕ್ಕೆ ರಾಮಧಾನ್ಯ ಅಥವಾ ರಾಘವಧಾನ್ಯವೆಂದು ಮರುನಾಮಕರಣ ಮಾಡುತ್ತಾನೆ. ಅಲ್ಲದೆ ಅದಕ್ಕೆ ಒಳ್ಳೆಯದಾಗಲೆಂದು ಹರಸುತ್ತಾನೆ.

ರಾಮಧಾನ್ಯ ಚರಿತ್ರೆಯು ರಾಮಾಯಣದ ಕಥೆಯನ್ನು ಸಂಕ್ಷಿಪ್ತವಾಗಿ ನಿರೂಪಿಸಿದರೂ ಅದನ್ನೊಂದು ಮಹಾಕಾವ್ಯವೆಂದು ಕರೆಯಲಾಗದು. ಕನಕದಾಸರ ಶ್ರೇಷ್ಠತೆ ಶ್ರೀರಾಮನ ಕಥೆಯನ್ನು ಕೇವಲ ಪುನರ್ನಿರೂಪಿಸುವುದರಲ್ಲಿರದೆ ಅವರು ಭತ್ತ ಮತ್ತು ರಾಗಿಯ ರೂಪಕಕಥೆಯನ್ನು ಅದರಲ್ಲಿ ಜಾಣಾಕ್ಷತನದಿಂದ ಹೆಣೆದಿರುವುದರಲ್ಲಿದೆ. ರೂಪಕಾತ್ಮಕ ಚಿತ್ರಣಕ್ಕಾಗಿ ಆಹಾರಧಾನ್ಯಗಳನ್ನು ಮಾನವೀಕರಿಸಿರುವ ಅವರ ಈ ತಂತ್ರ ಬಹುಶ: ಇಡೀ ಜಗತ್ತಿನ ಯಾವ ಸಾಹಿತ್ಯದಲ್ಲಿಯೂ ಕಂಡುಬರುವುದಿಲ್ಲ. ಆದರೆ ಅನ್ಯೋಕ್ತಿ ಅಥವಾ ರೂಪಕಾತ್ಮಕ ತಂತ್ರದ ದೃಷ್ಟಿಯಿಂದ ಈ ಕಾವ್ಯವನ್ನು ಜಾನಥನ್ ಸ್ವಿಫ್ಟ್‌ನ ದ ಬ್ಯಾಟಲ್ ಆಫ್ ಬುಕ್ಸ್ ಮತ್ತು ಎ ಟೇಲ್ ಆಫ್ ಎ ಟಬ್ ದಂಥ ಕೃತಿಗಳಿಗೆ ಹೋಲಿಸಬಹುದು. ಇಂಥ ರೂಪಕಾತ್ಮಕ ತಂತ್ರವನ್ನು ಉಪಯೋಗಿಸಿದ್ದರ ಹಿಂದೆ ಕನಕದಾಸರಿಗೆ ಸಮಕಾಲೀನ ಸಮಾಜದ ಬಗೆಗಿದ್ದ ಆಳವಾದ ಕಳಕಳಿ ಇದ್ದುದು ಕಂಡುಬರುತ್ತದೆ. ಭತ್ತ ಮತ್ತು ರಾಗಿಯ ನಡುವಿನ ಜಗಳದಲ್ಲಿ ಸಮಾಜದ ಉಚ್ಚ ಮತ್ತು ಕೆಳಜಾತಿಗಳ ನಡುವಿನ ಸಂಘರ್ಷವನ್ನೇ ಸಮೀಕರಿಸಲಾಗಿದೆ. ಕೆಳಜಾತಿಯಲ್ಲಿ ಜನಿಸಿದ ಕನಕದಾಸರು ಬ್ರಾಹ್ಮಣರಂಥ ಉಚ್ಚಜಾತಿಯವರ ಕೈಯಲ್ಲಿ ಅನೇಕ ದು:ಖಗಳನ್ನು ಅನುಭವಿಸಿದ್ದರು. ಹೀಗಾಗಿ ಅವರಿಗೆ ಸಹಜವಾಗಿಯೆ ಕೆಳಜಾತಿಯವರ ಬಗೆಗೆ ಆಳವಾದ ಅನುಕಂಪವಿದ್ದಿತು. ಅದನ್ನೇ ಅವರು ಭತ್ತ ಮತ್ತು ರಾಗಿಯ ಕಥೆಯ ಮೂಲಕ ಅಭಿವ್ಯಕ್ತಿಸಿದರು. ಭತ್ತವು ಮೇಲು ಜಾತಿಯವರ, ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣರ ಆಹಾರವಾಗಿದ್ದು ಅದು ಅವರ ಅನೇಕ ಧಾರ್ಮಿಕ ವಿಧಿಗಳಲ್ಲಿ ಬಳಸಲ್ಪಡುತ್ತಿತ್ತು. ಆದರೆ ರಾಗಿಯು ಕೆಳಜಾತಿಯವರ ಪ್ರಮುಖ ಆಹಾರವಾಗಿತ್ತು. ಕನಕದಾಸರು ಶ್ರೀಹರಿಯ ಅನನ್ಯ ಭಕ್ತರಾಗಿದ್ದರೂ ಕೂಡ ತಮ್ಮ ಸಮಾಜದಲ್ಲಿ ಕಂಡುಬಂದ ಜಾತೀಯತೆಯ ಪಿಡುಗಿನ ವಿರುದ್ಧ ಸಿಡಿದೆದ್ದರು. ಅವರು ತುಳಿತಕ್ಕೊಳಗಾದವರನ್ನು ಮೇಲೆತ್ತಿ ಅವರಿಗೊಂದು ಘನತೆಯನ್ನು ತಂದುಕೊಡುವುದಕ್ಕಾಗಿ ಶ್ರಮಿಸಿದರು. ಈ ದೃಷ್ಟಿಯಿಂದ ನೋಡಿದಾಗ ಕನಕದಾಸರು ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ಜಾತೀಯತೆಯ ವಿರುದ್ಧ ಹೋರಾಡಿದ ಬಸವೇಶ್ವರ ಮತ್ತಿತರ ಶರಣರನ್ನು ಹೊಲುತ್ತಾರೆ. ಭತ್ತ ಮತ್ತು ರಾಗಿಯ ರೂಪಕ ಕಥೆಯು ವಾಲ್ಮೀಕಿಯ ರಾಮಾಯಣದಲ್ಲಿ ಕಂಡುಬರುವುದಿಲ್ಲ. ಅದು ಕನಕದಾಸರ ಕಾರಯಿತ್ರಿ ಕಲ್ಪನೆಯ ಉತ್ಪಾದನೆಯಾಗಿದೆ. ಸಾಮಾಜಿಕ ಸುಧಾರಣೆಯ ಉನ್ನತ ಉದ್ದೇಶದಿಂದಲೇ ಅದನ್ನು ರಾಮಾಯಣದ ಕಥೆಯಲ್ಲಿ ಹೆಣೆಯಲಾಗಿದೆ. ಭಾಮಿನಿ ಷಟ್ಪದಿಯಲ್ಲಿ ರಚಿತವಾದ ರಾಮಧಾನ್ಯಚರಿತ್ರೆಯನ್ನು ಒಂದು ಅಣಕು-ಕಾವ್ಯವೆಂದು ಕರೆಯಬಹುದು. ಈ ದೃಷ್ಟಿಯಿಂದ ಅದನ್ನು ಅಲೇಕ್ಸಾಂಡರ್ ಪೋಪನ ರೇಪ್ ಆಫ್ ಲಾಕ್ ಕಾವ್ಯದೊಂದಿಗೆ ಹೋಲಿಸಬಹುದು.

ಈ ಕಾವ್ಯದಲ್ಲಿ ಉಪಯೋಗಿಸಿದ ಭಾಷೆ ತೀರ ಕ್ಲಿಷ್ಟವು ಅಲ್ಲದೆ , ತೀರ ಸರಳವು ಆಗಿರದೆ ಅವೆರಡರ ನಡುವಿನ ಶೈಲಿಯದ್ದಾಗಿದೆ. ಅದರಲ್ಲಿ ನಡುಗನ್ನಡದ

ಸಲಿಲತೆಯಿದ್ದು ಅದನ್ನು ಮಧುರವಾಗಿ ಹಾಡಬಹುದು. ಇದರಲ್ಲಿ ಕನಕದಾಸರ ಮೇಲೆ ಆದ ಕುಮಾರವ್ಯಾಸನ ಆಳವಾದ ಪ್ರಭಾವವನ್ನು ಗಮನಿಸಬಹುದು.

ಹರಿಭಕ್ತಿಸಾರವು ಕನಕದಾಸರು ರಚಿಸಿದ ಕೊನೆಯ ಪೂರ್ಣ ಕಾವ್ಯವಾಗಿದ್ದು ಅದು ಅವರ ನಳಚರಿತ್ರೆಯಷ್ಟೇ ಜನಪ್ರಿಯವಾಗಿದೆ. ಒಂದುನೂರಾ ಎಂಭತ್ತು ನುಡಿಗಳಲ್ಲಿ ಶತಕ ಛಂದಸ್ಸಿನಲ್ಲಿ ರಚಿತವಾದ ಈ ಕಾವ್ಯ ಹರಿಭಕ್ತಿಯ ಮಹತ್ವವನ್ನು ಎತ್ತಿ ತೋರಿಸುತ್ತದೆ. ಅದರಲ್ಲಿ ಮಾನವ ಮತ್ತು ದೇವನ ನಡುವಿನ ಸಂಬಂಧದಲ್ಲಿ ಉಂಟಾಗುವ ಆತ್ಮಪರೀಕ್ಷೆ, ಹತಾಶೆ, ಉದ್ವೇಗ ಮತ್ತು ಶಂಕೆ ಭಾವಸ್ಥಿತಿಗಳು ಮತ್ತು ಅವುಗಳ ನಂತರ ಉಂಟಾಗುವ ಸಂಪೂರ್ಣ ಶರಣಾಗತಿ, ಸಂಸಾರದಲ್ಲಿ ವೈರಾಗ್ಯ, ಕೊನೆಯ ಅಧ್ಯಾತ್ಮಿಕ ಮೋಕ್ಷ ಮುಂತಾದ ಹಂತಗಳನ್ನು ಚಿತ್ರಿಸಲಾಗಿದೆ. ಕನಕದಾಸರು ಶ್ರೀಹರಿಯ ಅನನ್ಯ ಭಕ್ತರಾಗಿ ಆತನ ಗುಣಗಾನ ಮಾಡುತ್ತಾರೆ. ಭಾಗವತ, ರಾಮಾಯಣ, ಮಹಾಭಾರತ ಮತ್ತು ವಿಷ್ಣುಪುರಾಣಗಳಲ್ಲಿ ಕಂಡುಬರುವ ಅಂಶಗಳನ್ನೆಲ್ಲ ಅದರಲ್ಲಿ ಮೇಳವಿಸಿದ್ದಾರೆ. ಹರಿಭಕ್ತಿಸಾರದಲ್ಲಿ ಧಾರ್ಮಿಕ ಸಂಕಥನ ಮತ್ತು ಕಾವ್ಯಸಂಕಥನಗಳು ಸುಂದರವಾಗಿ ಸಂಗಮಿಸಿದೆ. ಒಟ್ಟಿನ ಮೇಲೆ ಅದರಲ್ಲಿ ಎರಡು ತರಹದ ವರ್ಣನೆಗಳಿವೆ. ಒಂದು, ಶ್ರೀಹರಿಯ ಪೌರಾಣಿಕ ಅವತಾರದಲ್ಲಿ ಎಸಗಿದ ಕೃತ್ಯಗಳು. ಎರಡು ಆತ್ಮ, ಜಗತ್ತು ಮತ್ತು ದೇವರು ಮತ್ತು ಮಾನವನ ಅಧ್ಯಾತ್ಮಿಕ ಮುಕ್ತಿಗೆ ಅವಶ್ಯವಾಗಿರುವ ದೇವಕೃಪೆಯನ್ನು ಕುರಿತ ತಾತ್ವಿಕ ಚಿಂತನೆಗಳು. ಈ ಭಕ್ತಿಕಥನವು ಸರಳವಾದ ಆದರೆ ಮಧುರವಾದ ಕಾವ್ಯಭಾಷೆಯಲ್ಲಿ ರಚಿತವಾಗಿದ್ದು ಧಾರ್ಮಿಕ ಪ್ರತಿಮೆಗಳನ್ನೊಳಗೊಂಡಿದೆ.

ಕನಕದಾಸರು ಈ ಧಾರ್ಮಿಕ ಕಥನಗಳನ್ನಲ್ಲದೆ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಆದರೆ ಈವರೆಗೆ 250 ಕೀರ್ತನೆಗಳು ಮಾತ್ರ ಪ್ರಕಟವಾಗಿವೆ. ಕೀರ್ತನೆಯು ದೇವರ ಮಹಿಮೆಯನ್ನು ಸ್ತುತಿಸುವ ರಚನೆಯಾಗಿದ್ದು ಅದರಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಮೂರು, ಐದರಿಂದ ನೂರರ ವರೆಗೆ ಸಾಗುವ ನುಡಿಗಳಿರುತ್ತವೆ. ಕೀರ್ತನೆಯ ಕೊನೆಯ ಭಾಗದಲ್ಲಿ ಕವಿಯ ಇಷ್ಟ ದೇವತೆಯ ಹೆಸರಿದ್ದು ಅದು ಕವಿಯ ಅನನ್ಯತೆಯನ್ನು ಪ್ರಸ್ತಾಪಿಸುತ್ತದೆ. ಕೀರ್ತನೆಗೆ ಇಂಥದೇ ವಸ್ತುವಿರಬೇಕೆಂಬ ಕಟ್ಟುನಿಟ್ಟಾದ ನಿಯಮವಿಲ್ಲ. ಅದು ಯಾವುದಾದರೂ ಧಾರ್ಮಿಕ ಅಥವಾ ಜಾತ್ಯತೀತ ವಸ್ತುವನ್ನು ಚಿತ್ರಿಸಬಹುದು. ಆದರೆ ಕನಕದಾಸರ ಅನೇಕ ಕೀರ್ತನೆಗಳಲ್ಲಿ ಹರಿಭಕ್ತಿಯೇ ಪ್ರಮುಖವಾದ ವಸ್ತುವಾಗಿ ಚಿತ್ರಿಸಲ್ಪಟ್ಟಿದೆ. ಯಾವುದೇ ಕೀರ್ತನವನ್ನು ಏಕತಾರಿಯೊಂದಿಗೆ ಒಂದು ನಿರ್ದಿಷ್ಟ ರಾಗ ಮತ್ತು ತಾಳಗಳಿನುಗುಣವಾಗಿ ಹಾಡಬಹುದು. ಹೀಗಾಗಿ ಕೀರ್ತನೆಯಲ್ಲಿ ಸಾಹಿತ್ಯಿಕ, ಧಾರ್ಮಿಕ ಮತ್ತು ಸಂಗೀತ–ಸಂಕಥನಗಳು ಮುಪ್ಪುರಿಗೊಂಡಿರುತ್ತವೆ. ಆ ಆದರ್ಶ ಸಂಗಮದಿಂದಾಗಿ ಕೀರ್ತನೆಗಳನ್ನು ಭಾವಪೂರ್ಣವಾಗಿ ಹಾಡಿದಾಗ ಅವು ಅವಿದ್ಯಾವಂತರ ಹೃದಯವನ್ನು ಸೆರೆ ಹಿಡಿದು ಅವರನ್ನು ಅಧ್ಯಾತ್ಮಿಕ ಜೀವನಕ್ಕೆ ತಿರುಗಿಸುತ್ತವೆ.

ಕೀರ್ತನೆಗಳ ವಸ್ತು ಭಕ್ತಿರಸ, ದೇವಮಹಿಮೆ, ದೇವಕರುಣೆ ಮತ್ತು ಸಮಾಜೋ ಧಾರ್ಮಿಕ ವಿಡಂಬನೆಗಳನ್ನೊಳಗೊಂಡಿರುತ್ತವೆ. ಕನಕದಾಸರ ಕೀರ್ತನೆಗಳನ್ನು ವಿಶಾಲವಾಗಿ ಮೂರು ಭಾಗಗಳಲ್ಲಿ ವಿಭಾಗಿಸಬಹುದು; ಭಕ್ತಿ ಪ್ರಧಾನ ಕೀರ್ತನೆಗಳು, ತಾತ್ವಿಕ ಕೀರ್ತನೆಗಳು ಮತ್ತು ವಿಡಂಬನಾತ್ಮಕ ಕೀರ್ತನೆಗಳು.

ಭಕ್ತಿ ಪ್ರಧಾನ ಕೀರ್ತನೆಗಳು ಮಾನವ ಮತ್ತು ದೇವನ ನಡುವಿನ ಐದು ತರಹದ ಸಂಬಂಧಗಳನ್ನು ಚಿತ್ರಿಸುತ್ತವೆ. ಭಕ್ತನೊಬ್ಬ ದೇವನನ್ನು ತನ್ನ ಒಡೆಯನನ್ನಾಗಿ (ದಾಸ್ಯ ಭಾವ ), ಗೆಳೆಯನನ್ನಾಗಿ (ಸಖ್ಯ ಭಾವ), ಪತಿಯನ್ನಾಗಿ (ಮಧುರ ಭಾವ), ಮಗುವಾಗಿ (ವಾತ್ಸಲ್ಯಭಾವ) ಮತ್ತು ಸುಂದರ ಮೂರ್ತಿಯಾಗಿ (ಶಾಂತ ಭಾವ) ಕಲ್ಪಿಸಿಕೊಳ್ಳಬಹುದು. ಕನಕದಾಸರು ದೇವನನ್ನು ಬೇರೆ ಬೇರೆ ಭಾವಗಳ ಮೂಲಕ ಆರಾಧಿಸುತ್ತಾರೆ.

ಕನಕದಾಸರ ತಾತ್ವಿಕ ಕೀರ್ತನೆಗಳು ಹರಿದಾಸ ಪರಂಪರೆಯವರು ಪ್ರತಿಪಾದಿಸಿದ ದ್ವೈತ ಸಿದ್ಧಾಂತವನ್ನು ಚಿತ್ರಿಸುತ್ತವೆ. ಹರಿದಾಸರು ಹರಿಪಾರಮ್ಯವನ್ನು, ಜಗತ್ತು ಮತ್ತು ಐದು ತರಹದ ಭೇದಗಳನ್ನು ಸ್ವೀಕರಿಸುತ್ತಾರೆ. ಮಾನವ-ಮಾನವರ ನಡುವಿನ ಭೇದ, ಮಾನವ-ಮತ್ತು ನಿರ್ಜೀವ ವಸ್ತುಗಳ ನಡುವಿನ ಭೇದ, ಸಜೀವ ವಸ್ತುಗಳು ಮತ್ತು ದೇವನ ನಡುವಿನ ಭೇದ, ನಿರ್ಜೀವ ವಸ್ತುಗಳು ಮತ್ತು ದೇವನ ನಡುವಿನ ಭೇದ, ಮತ್ತು ನಿರ್ಜೀವ ವಸ್ತುಗಳ ನಡುವಿನ ಭೇದ-ಎಂಬ ಐದು ಭೇದಗಳನ್ನು ಒಪ್ಪಿಕೊಳ್ಳುತ್ತಾರೆ ಅವರ ಪ್ರಕಾರ ಮಾನವರಿಗೆ ಪರಿಮಿತ ಸ್ವಾತಂತ್ರ್ಯ ಮಾತ್ರ ವಿರುತ್ತದೆ. ಅವರು ದೇವನನ್ನು ಮೂಲ ಬಿಂಬವೆಂದೂ ಉಳಿದೆಲ್ಲ ಸಜೀವ ವಸ್ತುಗಳನ್ನು ಪ್ರತಿಬಿಂಬಗಳೆಂದೂ ಪರಿಗಣಿಸುತ್ತಾರೆ. ಅವರು ವಾಯುದೇವನ ಪಾರಮ್ಯವನ್ನು ಒಪ್ಪಿಕೊಳ್ಳುತ್ತಾರೆ. ಹರಿಗೆ ಸಲ್ಲಿಸುವ ಪೂಜೆಗಳೆಲ್ಲವೂ ಪರಮಗುರುವಾದ ವಾಯುದೇವನ ಮೂಲಕವೇ ಸಲ್ಲಬೇಕು. ಮುಕ್ತಿ ಪಡೆಯಲಿಕ್ಕೆ ಹರಿಕರುಣೆ ಅತ್ಯವಶ್ಯವಾದದ್ದು. ಈ ವಿಶಾಲವಾದ ತಾತ್ವಿಕ ವಿನ್ಯಾಸವು ಕನಕದಾಸರ ಕೀರ್ತನೆಗಳಲ್ಲಿ ಹರಡಿಕೊಂಡಿದ್ದು ಅದನ್ನು ಅವರು ಜನಸಾಮಾನ್ಯರಿಗೆ ತಿಳಿಯುವ ಸುಲಲಿತ ಭಾಷೆಯಲ್ಲಿ ಅಭಿವ್ಯಕ್ತಿಸಿದ್ದಾರೆ.

ವಿಡಂಬನಾತ್ಮಕ ಕೀರ್ತನೆಗಳಲ್ಲಿ ಕನಕದಾಸರು ತಮ್ಮ ಸಮಕಾಲೀನ ಸಮಾಜದ ಅನಿಷ್ಟಗಳನ್ನು ಖಂಡಿಸುತ್ತಾರೆ. ಅಂತರಂಗದ ಶುದ್ಧೀಕರಣವನ್ನು ನಿರ್ಲಕ್ಷಿಸಿ ಕೇವಲ ಬಾಹ್ಯನಿಧಿಗಳನ್ನು ಪಾಲಿಸುವುದು, ಜಾತೀಯತೆ ಮತ್ತು ಮಡಿವಂತಿಕೆಯಲ್ಲಿ ತೊಡಗಿರುವ ಜನರನ್ನು ತರಾಟೆಗೆ ತೆಗೆದುಕೊಳ್ಳುತ್ತಾರೆ. ಒಂದು ಕೀರ್ತನೆಯಲ್ಲಿ ಅವರು, ಮನುಷ್ಯ ತನ್ನ ಹೃದಯವೆಂಬ ಹೊಲದಲ್ಲಿ ನಾರಾಯಣನಾಮವೆಂಬ ಬೀಜವನ್ನು ಬಿತ್ತಿ, ನಾಲಿಗೆಯೆಂಬ ರೆಂಟೆಯಿಂದ ಸಾಗುವಳಿ ಮಾಡಿ ಕಾಗಿನೆಲೆಯ ಆದಿಕೇಶವನ ಧ್ಯಾನಮಾಡುತ್ತ ಅಧ್ಯಾತ್ಮಿಕ ಸುಖವನ್ನು ಪಡೆಯಬೇಕೆಂದು ಉಪದೇಶಿಸುತ್ತಾರೆ. ಮತ್ತೊಂದು ಕೀರ್ತನೆಯಲ್ಲಿ, ಅವರು ಸಂಪ್ರದಾಯವಾದಿಗಳು

ಯಾಂತ್ರಿಕವಾಗಿ ಯಜ್ಞ-ಯಾಗಾದಿಗಳನ್ನು ಮಾಡುತ್ತಲಿದ್ದರೂ ಅಂತರಂಗದಲ್ಲಿ ಮೋಸ ಮತ್ತು ಕುಹಕತನಗಳನ್ನು ತುಂಬಿಕೊಂಡವರನ್ನು ಖಂಡಿಸುತ್ತಾರೆ. ಮಗುದೊಂದು ಕೀರ್ತನೆಯಲ್ಲಿ ಅವರು ಸತ್ಯವಂತರ ಸಂಗವಿರಲು ತೀರ್ಥಕ್ಷೇತ್ರ ಯಾತ್ರೆ ಏಕೆ ಬೇಕೆಂದು ಕೇಳುತ್ತಾರೆ. ಅವರ ಇನ್ನೊಂದು ಸುಪ್ರಸಿದ್ಧ ಕೀರ್ತನೆಯಲ್ಲಿ ಅವರು ಜನರ ಜಾತೀಯತೆಯನ್ನು ಕಂಡು ನೊಂದುಕೊಂಡು ಅದನ್ನು ಹೋಗಲಾಡಿಸುವಂತೆ ನಿವೇದಿಸಿಕೊಳ್ಳುತ್ತಾರೆ.

ರಾಗ; ಪಂತುವರಾಳಿ ತಾಳ: ಅಟ್ಟ

ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರಾ –ಪ–
ಹುಟ್ಟಿದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ
ಅಟ್ಟು ಉಣ್ಣದ ವಸ್ತುಗಳಿಲ್ಲವೋ
ಗುಟ್ಟುಕಾಣಿಸಿ ಬಂತು ಹಿರಿದೇನು ಕಿರಿದೇನು
ನೆಟ್ಟನೆ ಸರ್ವಜ್ಞನ ನೆನೆಕಂಡ್ಯ ಮನುಜ –1–
ಜಲವೆ ಸಕಲ ಕುಲಕ್ಕೆ ತಾಯಿಯಲ್ಲವೆ
ಆ ಜಲದ ಕುಲವನೇನಾದರೂ ಬಲ್ಲಿರಾ
ಜಲದ ಬೊಬ್ಬುಳಿಯಂತೆ ಸ್ಥಿರವಲ್ಲ ಈ ದೇಹ
ನೆಲೆಯನರಿತು ನೀ ಹರಿಯ ನೆನೆ ಮನುಜ - 2–
ಹರಿಯೇ ಸರ್ವೋತ್ತಮ ಹರಿಯೇ ಸರ್ವೇಶ್ವರ
ಹರಿಮಯವೆಲ್ಲವೆನುತ ತಿಳಿದು
ಸಿರಿಕಾಗಿನೆಲೆಯಾದಿಕೇಶವರಾಯನ
ಚರಣಕಮಲವನ್ನು ಕೀರ್ತಿಸುವನೆ ಕುಲಜ –3–

ಒಟ್ಟಿನ ಮೇಲೆ ಕನಕದಾಸರ ಕೀರ್ತನೆಗಳಲ್ಲಿ ಭಕ್ತಿರಸವೇ ಪ್ರಧಾನವಾಗಿದ್ದು ಅವುಗಳಲ್ಲಿ ಸುಂದರ ಪ್ರತಿಮೆಗಳು ಹರಡಿಕೊಂಡಿವೆ. ಈ ಕೀರ್ತನೆಗಳನ್ನು ಸುಶ್ರಾವ್ಯವಾಗಿ ಸಂಗಿತಕ್ಕೆ ಅಳವಡಿಸಿ ಹಾಡಬಹುದು.

ಕನಕದಾಸರು ಕನ್ನಡದಲ್ಲಿ ಅನೇಕ ಮುಂಡಿಗೆಗಳನ್ನು ರಚಿಸಿದ್ದಾರೆ. ಮುಂಡಿಗೆ ಎಂದರೆ ಕಟ್ಟಿಗೆಯ ದಿಮ್ಮಿ ಎಂದರ್ಥ. ಈ ಭಾರವಾದ ದಿಮ್ಮಿಯನ್ನು ಪೈಲವಾನನೊಬ್ಬ ಹಗ್ಗದಿಂದ ಮೇಲೆತ್ತಬೇಕಾಗುತ್ತದೆ. ಅನ್ವರ್ಥಕಾರ್ಥದಲ್ಲಿ ಮುಂಡಿಗೆಯೆಂದರೆ ಒಂದು ಒಗಟಿನ ರೂಪದಲ್ಲಿದ್ದು, ಅದರ ಅರ್ಥವನ್ನು ಪಂಡಿತರು ಒಡೆದುಹೇಳಬೇಕಾಗುತ್ತದೆ. ಪೈಲವಾನನು ಮರದ ದಿಮ್ಮಿಯನ್ನು ತನ್ನ ತಲೆಯ ಮೇಲೆ ಇರಿಸಿಕೊಂಡು ತನ್ನ ಶೌರ್ಯವನ್ನು ತೋರಿಸುವಂತೆ, ಪಂಡಿತರು ಕನಕದಾಸರ ಮುಂಡಿಗೆಗಳ ಅರ್ಥವನ್ನು ಬಿಡಿಸಿ ಹೇಳಿ ತಮ್ಮ ಪಾಂಡಿತ್ಯವನ್ನು

ಸಿದ್ಧಮಾಡಿ ತೋರಿಸಬೇಕಾಗುತ್ತದೆ. ಕನಕದಾಸರು ಎರಡು ತರಹದ ಮುಂಡಿಗೆಗಳನ್ನು ರಚಿಸಿದ್ದಾರೆ. ಪೌರಾಣಿಕವಸ್ತುಗಳನ್ನು ಚಿತ್ರಿಸುವ ಮುಂಡಿಗೆಗಳು ಮತ್ತು ನಿಗೂಢವಾದ ಅನುಭಾವವನ್ನು ಚಿತ್ರಿಸುವ ಮುಂಡಿಗೆಗಳು- ಹೀಗೆ ಎರಡು ತೆರನಾದ ಮುಂಡಿಗೆಗಳನ್ನು ರಚಿಸಿದ್ದಾರೆ. ಅನೇಕ ಸಾರೆ ಪಂಡಿತರಿಗೆ ಇಂಥ ಮುಂಡಿಗೆಗಳ ಅರ್ಥವನ್ನು ಬಿಡಿಸಿ ಹೇಳಲಾರದೆ ತಮ್ಮ ಅಜ್ಞಾನವನ್ನು ಒಪ್ಪಿಕೊಳ್ಳಬೇಕಾಗುತ್ತಿತ್ತು. ಅದೇ ಕಾರಣಕ್ಕಾಗಿ "ಕನಕನನ್ನು ಕೆಣಕಬೇಡ. ಕೆಣಕಿ ತಿಣುಕಬೇಡ" ಎಂಬ ನಾಣ್ನುಡಿ ಕನ್ನಡದಲ್ಲಿ ಪ್ರಚಲಿತವಾಗಿದೆ.

ಕನಕದಾಸರನ್ನು ಕನ್ನಡದಲ್ಲಿ ಮುಂಡಿಗೆಯೆಂಬ ಕಾವ್ಯಪ್ರಕಾರದ ಜನಕರೆಂದೇ ಹೇಳಬಹುದು. ಕನಕದಾಸರಿಗಿಂತ ನಾಲ್ಕು ಶತಮಾನಗಳಷ್ಟು ಹಿಂದೆಯೆ ಹನ್ನೆರಡನೆಯ ಶತಮಾನದ ಶರಣರಾದ ಅಲ್ಲಮಪ್ರಭು ಅನೇಕ ಬೆಡಗಿನ ವಚನಗಳನ್ನು ರಚಿಸಿದ್ದಾರೆ. ಈ ಬೆಡಗಿನ ವಚನಗಳನ್ನು ಈವರೆಗೂ ಕನ್ನಡ ಪಂಡಿತರು ಸರಿಯಾಗಿ ನಿರ್ವಚಿಸಲು ಸಮರ್ಥರಾಗಿಲ್ಲ. ಕನಕದಾಸರು ಅಲ್ಲಮಪ್ರಭುಗಳ ಬೆಡಗಿನ ವಚನಗಳ ತಂತ್ರವನ್ನೇ ಎರವಲು ಪಡೆದು ಅವನ್ನು ಕೀರ್ತನವೆಂಬ ಕಾವ್ಯಪ್ರಕಾರದಲ್ಲಿ ಅಳವಡಿಸಿದ್ದಾರೆ. ಅದರಂತೆ ಕನಕದಾಸರು ಜನಪದ ನಾಣ್ನುಡಿಗಳು ಮತ್ತು ಒಗಟುಗಳಿಂದಲೂ ಪ್ರಭಾವಿತರಾಗಿದ್ದಾರೆ. ಆಧ್ಯಾತ್ಮಿಕ ವಸ್ತುವೇ ಪ್ರಮುಖವಾಗಿರುವಂಥ ಈ ಮುಂಡಿಗೆಗಳು ದಾಸಸಾಹಿತ್ಯಕ್ಕೆ ಕನಕದಾಸರು ನೀಡಿದ ಮಹತ್ವದ ಕಾಣಿಕೆಗಳಾಗಿವೆ. ಅಲ್ಲಮಪ್ರಭುಗಳು ತಮ್ಮ ಬೆಡಗಿನ ವಚನಗಳಲ್ಲಿ ಕೇವಲ ಅಧ್ಯಾತ್ಮಿಕ ಅನುಭಾವವನ್ನೇ ಚಿತ್ರಿಸಿದ್ದಾರೆ. ಕನಕದಾಸರು ತಮ್ಮ ಮುಂಡಿಗೆಗಳಲ್ಲಿ ತಾರಕ ಮತ್ತು ಅಧ್ಯಾತ್ಮಿಕ ವಸ್ತುಗಳೆರಡನ್ನೂ ಚಿತ್ರಿಸಿದ್ದಾರೆ. ಅನೇಕ ವೇಳೆ ಮುಂಡಿಗೆಗಳ ಅರ್ಥ ಭಾಷೆಯ ಕೈಚಳಕ ಮತ್ತು ದ್ವಂದ್ವಾರ್ಥಗಳ ಮೇಲೆಯೆ ಅವಲಂಬಿತವಾಗಿರುತ್ತದೆ. ಒಂದು ಮುಂಡಿಗೆಯಲ್ಲಿ ಕನಕದಾಸರು, ಹನ್ನೆರಡನೆಯ ಶತಮಾನದ ಶರಣರಂತೆ, ತಮ್ಮನ್ನು ಶ್ರೀ ಹರಿಯ ಅಧ್ಯಾತ್ಮಿಕ ಸತಿಯೆಂದು ಪರಿಗಣಿಸುತ್ತಾರೆ. ಬೊಚ್ಚ ಮೊಲೆಯ ತಮ್ಮನ್ನು ಪತಿಯಾದ ರಂಗಯ್ಯ ಪ್ರೀತಿಸುವುದಿಲ್ಲವೆಂದು ನಗೆಚಾಟಿಕೆಯಾಡುತ್ತಾರೆ. ರಂಗಯ್ಯನು ಬೇರೆ ಗೋಪಿಕೆಯರನ್ನು ಪ್ರೀತಿಸುವುದರಿಂದ ಕಾಗಿನೆಲೆಯ ಕನಕಯ್ಯನನ್ನು ಪ್ರೀತಿಸಲಾರನೆಂದು ನಗೆಚಾಟಿಕೆ ಮಾಡುತ್ತಾರೆ. ಕರ್ನಾಟಕ ಸಂಗೀತಕ್ಕೆ ಕನಕದಾಸರ ಕೊಡುಗೆ ಮಹತ್ತರವಾದದ್ದು. ಏಕೆಂದರೆ ಅವರು ಹರಿದಾಸ ಸಂಪ್ರದಾಯವನ್ನೆ ಮುಂದುವರಿಸಿದರು. ಹರಿದಾಸರು ಭಕ್ತಿಸಾಹಿತ್ಯ ಮತ್ತು ಸಂಗೀತಕ್ಕೆ ಸಮಾನ ಮಹತ್ವವನ್ನು ಕೊಟ್ಟವರು. ಸುಶ್ರಾವ್ಯ ಸಂಗೀತದ ಮೂಲಕ ಭಕ್ತಿ ಸಾಹಿತ್ಯವನ್ನು ಪ್ರಚಾರ ಮಾಡಿ ಅವರು ಜನಸಾಮಾನ್ಯರ ಹೃದಯವನ್ನು ಸೆರೆಹಿಡಿಯುವುದರಲ್ಲಿ ಯಶಸ್ವಿಯಾದರು. ಕರ್ನಾಟಕಿ ಸಂಗೀತದಲ್ಲಿ ತರಬೇತಿ ಪಡೆದ ಕನಕದಾಸರು ತಮ್ಮ ಕೀರ್ತನೆಗಳನ್ನೆಲ್ಲ ನಿರ್ದಿಷ್ಟ ರಾಗ ಮತ್ತು ತಾಳಗಳಿಗೆ ಹೊಂದುವಂತೆ ರಚಿಸಿದರು. ಹೀಗಾಗಿ ಈ ಕೀರ್ತನೆಗಳನ್ನು

ಮಧುರವಾಗಿ ಹಾಡಬಹುದು. ಕನಕದಾಸರ ಕೀರ್ತನೆಗಳನ್ನು ಪುರಂದರದಾಸರ ಕೀರ್ತನೆಗಳಿಗೆ ಹೋಲಿಸಬಹುದು.

ಕನಕದಾಸರ ಕೀರ್ತನೆಗಳು ರಾಗ, ತಾಳ, ಬದ್ಧವಾದ ಕೃತಿಗಳಾಗಿದ್ದರೂ ಕೂಡ ಅವುಗಳಲ್ಲಿ ಸಾಕಷ್ಟು ಪ್ರಮಾಣದ ಜಾನಪದೀಯ ಭಾಷಾಪ್ರಯೋಗ ಕಂಡು ಬರುತ್ತವೆ. ಉದಾಹರಣೆಗೆ, ಜಾನಪದೀಯ ನಾಣ್ಣುಡಿಗಳು, ನುಡಿಗಟ್ಟುಗಳು ಮತ್ತು ಶಬ್ದಗಳು ಅವರ ಕೀರ್ತನೆಗಳಲ್ಲಿ ತುಂಬಿಕೊಂಡಿದ್ದು, ಅವು ದೇಸಿಯ ಸೊಗಡನ್ನು ಹೆಚ್ಚಿಸುತ್ತದೆ. ಅವರು ತಮ್ಮ ಕೀರ್ತನೆಗಳಲ್ಲಿ ಶಿಷ್ಟ ಭಾಷೆಯೊಂದಿಗೆ ಆಡುನುಡಿಯನ್ನೂ ಬಳಸಿರುವುದರಿಂದ ಅವರನ್ನೊಬ್ಬ ಆಸ್ಥಾನಕವಿಯೆಂದು ಕರೆಯದೆ ಪ್ರಜೆಗಳ ಕವಿಯೆಂದು ಕರೆಯಬಹುದು. ಅವರ ಕಾವ್ಯದ ಅನೇಕ ಪಂಕ್ತಿಗಳು ನಾಣ್ಣುಡಿ ಮತ್ತು ಜಾಣ್ಣುಡಿಗಳ ಸಂಕ್ಷಿಪ್ತತೆಯನ್ನು ಸಾರ್ವಕಾಲಿಕತೆಯನ್ನೂ ಪಡೆದುಕೊಂಡಿದೆ.

ಕನಕದಾಸರು ಹೀಗೆ ಕೇವಲ ಕರ್ನಾಟಕದ ಸಂತ ಕವಿಯಾಗಿರದೆ ಇಡೀ ಭಾರತದ ಮತ್ತು ಜಗತ್ತಿನ ಸಂಗೀತಕವಿಗಳ ತಾರಾವಳಿಗೆ ಸೇರಿದವರಾಗಿದ್ದಾರೆ. ಅವರ ಕಾವ್ಯದಲ್ಲಿ ಹುದುಗಿರುವ ದರ್ಶನ, ಪ್ರತಿಮಾವಳಿ ಮತ್ತು ತಂತ್ರವನ್ನು ಕುರಿತು ಸಂಶೋಧನೆ ಕೈಕೊಳ್ಳಲು ಸಾಕಷ್ಟು ಅವಕಾಶವಿದೆ. ಕನಕದಾಸರನ್ನು ಜಗತ್ತಿನ ಇತರ ಧಾರ್ಮಿಕ ಕವಿಗಳಾದ ಬಸವೇಶ್ವರ, ಅಕ್ಕಮಹಾದೇವಿ, ವೇಮನ, ತಿರುವಳ್ಳುರ್, ಏಕನಾಥ್, ಜ್ಞಾನದೇವ, ಚೈತನ್ಯಪ್ರಭು, ಮೀರಾಬಾಯಿ, ಕಬೀರದಾಸ, ಜಾನ್ ಡನ್, ಜಾರ್ಜ್ ಹರ್ಬರ್ಟ್, ಸೇಂಟ್ ಅಗಸ್ಟಿನ್ ಮತ್ತು ಸೇಂಟ್ ತೆರೆಸಾ ಮುಂತಾದವರೊಂದಿಗೆ ಹೋಲಿಸಿ, ತುಲನಾತ್ಮಕ ಅಧ್ಯಯನ ಕೈಕೊಂಡು, ಅದರ ಮೂಲಕ ಧಾರ್ಮಿಕ ಮತ್ತು ಅನುಭಾವದ ಸಾರ್ವಕಾಲಿಕ ವಿನ್ಯಾಸಗಳನ್ನು ಮತ್ತು ಸತ್ಯಗಳನ್ನು ಕಂಡುಕೊಳ್ಳಲು ಸಾಕಷ್ಟು ಅವಕಾಶವಿದೆ.

***

# ಬೇಂದ್ರೆ ಕಾವ್ಯದಲಿ ದೇಸಿ ವಸ್ತುವಿನ್ಯಾಸದ ಸ್ವರೂಪ

**ಬಿದರಹಳ್ಳಿ ನರಸಿಂಹಮೂರ್ತಿ**

ಬೇಂದ್ರೆಯವರ ಹೆಸರು ಹೇಳಿದರೆ ಸಾಕು, ಅಪ್ಪಟ ದೇಸಿ ಜೀವಸತ್ವದ ಒಂದು ವ್ಯಕ್ತಿತ್ವ ನಮ್ಮ ಬಗೆಗಣ್ಣ ಮುಂದೆ ನಿಲ್ಲುತ್ತದೆ. ಅವರ ವ್ಯಕ್ತಿತ್ವ ಮತ್ತು ಅದರ ಅಭಿವ್ಯಕ್ತಿಯಾದ ಕಾವ್ಯ ಎರಡರಲ್ಲೂ ನಿಸರ್ಗಸಹಜವಾದ ಲಯಗಾರಿಕೆ ಇದೆ. ಕಣ್ಣಿಗೆ ಕಟ್ಟುವಂತಹ ಜಾನಪದ ಛಾಪು, ಒಳಗೂ ಹೊರಗೂ ಮಾಗಿದ ಜೀವನ ಪ್ರೀತಿ, ಆಳವಾದ ಸ್ವದೇಶಿ ಭಾವದ್ರವ್ಯ, ಬಹುಮುಖಿ ಸಂಸ್ಕೃತಿಯ ಸ್ವಾಯತ್ತತೆ ಹಾಗೂ ಮೋಡಿ ಮಾಡುವ ಪ್ರಾದೇಶಿಕ ಸೊಗಡು ಇವು, ಈ ವ್ಯಕ್ತಿ ಮತ್ತು ಅಭಿವ್ಯಕ್ತಿಯ ಮುಖ್ಯ ಲಕ್ಷಣಗಳು.

ದೇಸಿ ಎಂಬುದು ಬೇಂದ್ರೆ ಕಾವ್ಯದ ಭಾಷೆ ಮತ್ತು ಶೈಲಿಗಷ್ಟೆ ಸೀಮಿತವಾಗಿಲ್ಲ. ಅದರ ಆಂತರ್ಯವೂ ದೇಸಿ. ಅದರ ಜೀವಾಳವೇ ದೇಸಿ. ಅಂದರೆ ತಿರುಳೇ ದೇಸಿಯಾದ್ದರಿಂದ ಸಿಪ್ಪೆ ತಂತಾನೆ ದೇಸಿಯಾಗಿ ಫಲಿಸಿದೆ. ಹೊರಗೆ ನಿಂತು ನೋಡಿದರೆ ಇದರ ಹೊರಸ್ವರೂಪವಷ್ಟೇ ಕಾಣುತ್ತದೆ. ಈ ಕಾವ್ಯದ ಆತ್ಮದೊಡನೆ ತಾದಾತ್ಮ್ಯ ಹೊಂದಿದಾಗ, ಒಳ ಹೊಕ್ಕು ಒಂದಾದಾಗ ಮಾತ್ರ ಅದರ ನಿಜವಾದ ದೇಸಿ ಸತ್ವ ಮನದಟ್ಟಾಗುತ್ತದೆ. ಬೇಂದ್ರೆ ಕಾವ್ಯದ ಅನುಭವ ದ್ರವ್ಯ–ಉದ್ದೇಶ–ಪರಿಣಾಮ ಎಲ್ಲವೂ ಇಡಿಯಾಗಿ ದೇಸಿಯಾಗಿದ್ದು, ವಸಾಹತುಶಾಯಿಯುಗಕ್ಕೆಸೆದ ಕಲಾತ್ಮಕ ಸವಾಲಿನ ರೂಪಕದಂತೆ ಕಂಗೊಳಿಸುತ್ತದೆ. ಈ ದೃಷ್ಟಿಯಿಂದ ಇದು ನಮಗೆ ಅತ್ಯಂತ ಆಪ್ತವಾದ ಕಾವ್ಯವಾಗಿದೆ. ದೇಸಿಭಾಷೆಯಲ್ಲಿ ಮೈಪಡೆದಿರುವ ಎಷ್ಟೊಂದು ಕವಿತೆಗಳು ಹೇಗೆ ಬೇಂದ್ರೆಯವರ ದೇಸಿ ಭಾವಗರ್ಭದಿಂದ ಹೊಮ್ಮಿ, ದೇಸಿ ಆಶಯ ಮತ್ತು ಸಂದೇಶಗಳನ್ನು ಸಾರುತ್ತಿವೆ ಎಂಬುದನ್ನು ಗುರ್ತಿಸಬೇಕಾಗಿದೆ. ಆಗ ನಮ್ಮ ಗಮನ ಅವರ ಕಾವ್ಯದ ತಿರುಳನ್ನ, ಹೂರಣವನ್ನ ಆಸ್ವಾದಿಸುವುದರ ಕಡೆಗೆ ಹರಿಯುತ್ತದೆ.

ಬೇಂದ್ರೆಯವರ ದೇಸಿಸತ್ವ ನಮ್ಮನ್ನು ಪ್ರಾದೇಶಿಕತೆಯ ಹೆಸರಿನಲ್ಲಿ, ಸ್ವಾಯತ್ತತೆಯ ಹೆಸರಿನಲ್ಲಿ ವ್ಯಕ್ತಿವಾದ, ಪ್ರತ್ಯೇಕತಾವಾದ, ಛಿದ್ರೀಕರಣಗಳ ಕಡೆಗೆ ಎಳೆದೊಯ್ಯುವುದಿಲ್ಲ ಎಂಬುದು ಇನ್ನೊಂದು ಮುಖ್ಯ ಸಂಗತಿ.ಅವರ ಕಾವ್ಯದಲ್ಲಿ 'ತನಗಿಂತ' 'ಇದಿರು' ಎಂಬುದು ಹೆಚ್ಚಿನ ಪ್ರೀತಿಗೆ ಪಾತ್ರವಾಗುತ್ತದೆ. ವ್ಯಷ್ಟಿಗಿಂತ ಸಮಷ್ಟಿ ಮುಖ್ಯ ಎಂಬ ಜಾನಪದಶ್ರದ್ಧೆ ಅವರ ಕಾವ್ಯದಲ್ಲಿ ಗುಪ್ತಗಾಮಿನಿಯಾಗಿದೆ. ಹೀಗಾಗಿ ಇಲ್ಲಿ ಕವಿ ಮಗುವಾಗಿ

ತಾಯಿ ಹಾಲಿಗೆ ಹಂಬಲಿಸುವ ಮತ್ತು ತಾನೆ ತಾಯಿಯಾಗಿ ಲೋಕಶಿಶುವಿಗೆ ಹಾಲೂಡಿಸುವ ಉದಾತ್ತತೆಗೆ ತಲುಪುತ್ತಾನೆ.ಈ ತಾದಾತ್ಮ್ಯವೆ ಅವನನ್ನು ಆಕ್ರಮಣಕಾರಿ ಸಂಸ್ಕೃತಿಯಿಂದ ಕಾಪಾಡುವ ರಕ್ಷಾಕವಚವಾಗಿದೆ. ಅಲ್ಲದೆ ಈ ತಾದಾತ್ಮ್ಯವೆ ಆಕ್ರಮಣಕಾರಿ ಸಂಸ್ಕೃತಿಗೆ ಬಿಡಿಸಲಾರದ ಒಗಟಾಗಿ, ಅದರ ಸೋಲಿನ ಸೂಚನೆಯಾಗಿ ಕೂಡ ಕಾಣಬಲ್ಲುದಾಗಿದೆ.ರಾಜಕೀಯ ಸ್ವಾಯತ್ತತೆ ಗಳಿಸಿಕೊಂಡೂ ಇಲ್ಲಿನ ಸಮುದಾಯಗಳು ತಮ್ಮ ಸಾಂಸ್ಕೃತಿಕ ಸಾಮರಸ್ಯವನ್ನು ಸಂಭಾಳಿಸಿಕೊಳ್ಳಬಲ್ಲವು ಎಂಬ ಸಂಗತಿ ನವವಸಾಹತುಶಾಹಿ ಶಕ್ತಿಗೆ ಬಿಡಿಸಲಾರದ ಸವಾಲಾಗಿದೆ. ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಜೀವನ ದೃಷ್ಟಿ ಮತ್ತು ಮನೋಭೂಮಿಗಳ ಮೂಲಭೂತ ವ್ಯತ್ಯಾಸವೆ ಇದಕ್ಕೆ ಕಾರಣವಾಗಿದೆ. ಈ ದೃಷ್ಟಿಯಿಂದ ಬೇಂದ್ರೆ ಕಾವ್ಯವನ್ನು ನೋಡುವುದು ಈ ಪ್ರಬಂಧದ ಉದ್ದೇಶ.

ಬೇಂದ್ರೆಯವರ ಹೊರರೂಪ ಮತ್ತು ಅವರ ಕಾವ್ಯಭಾಷೆಯ ಪ್ರಾದೇಶಿಕ ಸ್ವರೂಪ ಇವು ನಮ್ಮನ್ನ ಸೆಳೆಯುವ ಸಾಧನಗಳು ಮಾತ್ರವಾಗಿವೆ. ಅವರ ವ್ಯಕ್ತಿತ್ವದ ಒಳಗಿಗೆ ನಮ್ಮ ವ್ಯಕ್ತಿತ್ವದ ಒಳಗು ತಾಗುವುದು, ಅದರೊಡನೆ ಒಂದಾಗುವುದು, ಅವರ ಕಾವ್ಯದ ದೇಸಿ ಮತ್ತು ವಸ್ತುವಿನ್ಯಾಸದ ಸ್ವರೂಪ ಅರ್ಥವಾದಾಗ – ಅಲ್ಲಿನ ಸ್ವಾದ ನಮಗೆ ದಕ್ಕಿದಾಗ ಮಾತ್ರ ಸಾಧ್ಯವಾಗುತ್ತದೆ. ಈ ವಸ್ತುವಿನ್ಯಾಸವನ್ನು, ಅಥವಾ ಆತ್ಮಸ್ವಾದವನ್ನು, ನಾಲ್ಕು ಬಗೆಗಳಲ್ಲಿ ಪರಿಶೀಲಿಸಿ ಸವಿಯಬಹುದಾಗಿದೆ. ಅವೆಂದರೆ ಬೇಂದ್ರೆ ಕಾವ್ಯದಲ್ಲಿ ಕಂಡುಬರುವ ನಿಸರ್ಗಾನುಭಾವ, ದಾಂಪತ್ಯ ಯೋಗ, ಅಲೌಕಿಕದ ಅರಿವು ಮತ್ತು ಲೌಕಿಕದ ನಿಲುವು.

ಎಲ್ಲಕ್ಕೂ ಮೊದಲು, ಬೇಂದ್ರೆ ಕಾವ್ಯ ಸ್ವಾನುಭಾವದಿಂದ ನಿಸರ್ಗವನ್ನು ಆರಾಧಿಸುತ್ತದೆ. ಅಂಥ ಕ್ಷಣಗಳಲ್ಲಿ ಈ ಕವಿಯ ಚೇತನ ಒಂದು ಸಂಭ್ರಮಿಸುವ ಹಂಸವಾಗಿ ಬಿಡುತ್ತದೆ. ಬದುಕಿನ ಕಂಥೆ ಬೆಂದು ಹೋಗುವುದನ್ನೂ ಲೆಕ್ಕಿಸದೆ ಈ ಜೀವಹಂಸ ಸೌಂದರ್ಯವಲಯದಲ್ಲಿ ಹಾರಾಡತೊಡಗುತ್ತದೆ. ಅಂಥ ಹೊತ್ತಿನಲ್ಲಿ ಹೊಮ್ಮುವ ಹಂಸಾನಂದದ ಗೀತೆಗಳು ಅತ್ಯಂತ ಭಾವಗರ್ಭಿತವಾಗಿರುತ್ತವೆ. ಅನುಭವದ ಸೀಮೆ ದಾಟುತ್ತವೆ ಅನುಭಾವದ ಬಯಲಿಗೆ ಕಾಲಿರಿಸುತ್ತವೆ. ಇಂಥ ಬೆಳವಣಿಗೆಯನ್ನು 'ಬೆಳಗು' ಕವಿತೆಯಲ್ಲಿ ನಿಚ್ಚಳವಾಗಿ ಕಾಣಬಹುದಾಗಿದೆ. ಈ ಕವಿತೆ ಕಾಣುವವರ ಕೈಗನ್ನಡಿ. 'ಅವರವರ ಭಕ್ತಿಗೆ ಅವರವರ ಭಾವಕ್ಕೆ ಅವರವರ ತೆರನಾಗಿ' ಅರ್ಥಕ್ಕೆ ದಕ್ಕುತ್ತದೆ, ವಿಶ್ಲೇಷಣೆಗೆ ಸಿಕ್ಕುತ್ತದೆ, ಅರಿವನ್ನು ವಿಸ್ತರಿಸುತ್ತದೆ.

'ಬೆಳಗು' ಮೂಡಲ ನಾಡುಗಳ ಸಂಸ್ಕೃತಿಯ ಮೂಲಾಧಾರವಾದ ಸೂರ್ಯೋದಯವನ್ನು ಬಣ್ಣಿಸುತ್ತದೆ. ಕತ್ತಲಹೊಟ್ಟೆಯನ್ನು ಸೀಳಿಕೊಂಡು ಸೂರ್ಯ ಹುಟ್ಟುವ ನೋಟ, ಬೆಳಕಿನ ಕಡೆಗೆ ಕರೆದೊಯ್ಯುವ ಆರೋಹಣ ಕ್ರಿಯೆ. ಇದು ಪೌರ್ವಾತ್ಯರಿಗೆಲ್ಲ ಅನಾದಿ ಪಯಣದ ನಿತ್ಯಪಾಠ. ಬದುಕಿನ ಸಂಕಷ್ಟಗಳನ್ನು ದಾಟಿ ಹೋಗಲು ದಿನದ ಪ್ರಾರಂಭದಲ್ಲೇ ಕಟ್ಟಿಕೊಡುವ ಬೆಳಕಿನ ಬುತ್ತಿ. ಎಲ್ಲ ಪೌರ್ವಾತ್ಯ

ಸಾಧುಗಳ ಜೀವನದ ದೃಷ್ಟಿ ಇದರಿಂದ ಗಾಢವಾಗಿ ಪ್ರಭಾವಿತವಾಗಿರುತ್ತದೆ. ಇದು ಪಶ್ಚಿಮದ ಆಕ್ರಮಣಕಾರಿ ವ್ಯವಹಾರಿ ಸಂಸ್ಕೃತಿಯ ವಿರುದ್ಧ ಹೋರಾಡಲು ನಮಗೆ ಬೇಕಾದ ಕಸುವನ್ನು ನೀಡುವ ಚಿರಂತನ ಕವಿಸಮಯವಾಗಿದೆ. ಈ ಬೆಳಕಿನ ಪ್ರವಾಹ ನಮ್ಮ ಕಣ್ತೆರೆಸಿ ನಿಸರ್ಗದ ನಿತ್ಯನೂತನ ಚೆಲುವನ್ನು, ಜೀವಜಾಲದ ನೂರಾರು ಚಟುವಟಿಕೆಗಳನ್ನು ಕಾಣುವಂತೆ ಮಾಡುತ್ತದೆ. ಈ ದರ್ಶನದಿಂದ ನಮ್ಮೊಳಗೆ ಶಾಂತಿರಸ ಉತ್ಪತ್ತಿಯಾಗಿ, ಎಂಥ ಲೌಕಿಕ ಅವಘಡದಲ್ಲು ಮನೋಸ್ಥಿಮಿತವನ್ನು ಕಾಪಾಡಿಕೊಳ್ಳಲು ಸಹಾಯಕವಾಗುತ್ತದೆ.

ಈ ಅನನ್ಯ ಕವಿತೆಯ ಹೊಕ್ಕುಳಹುರಿ ಹಿಡಿದು ಒಳಹೊಕ್ಕು ಇನ್ನೂ ಆಳಕ್ಕಿಳಿದರೆ ಇದರ ಅನುಭಾವಿ ಬೆಡಗು ಅರಿವಾಗುತ್ತದೆ. ಇಲ್ಲಿನ ಏಳು ನುಡಿಗಳು ಹಾಗೂ ಅವುಗಳಲ್ಲಿ ಬೆಳಕಿನ ಬಿಂಬ ಹುಟ್ಟಿ ದಿಗಂತದಿಂದ ಆಕಾಶದ ನೆತ್ತಿಗೇರುವ ಪ್ರಕ್ರಿಯೆ ಮೇರುದಂಡದ ಷಟ್ಚಕ್ರಗಳ ಮೂಲಕ ಸಹಸ್ರಾರಕ್ಕೇರುವ ಅರಿವಿಗೆ ಸಂವಾದಿಯಾಗಿರುವುದು ತಿಳಿಯುತ್ತದೆ. ಅಲ್ಲಮ, ದೇಹವನ್ನೆ ದೇಗುಲವನ್ನಾಗಿಸುವ ಯೌಗಿಕ ಪರಿಭಾಷೆಯಲ್ಲಿ ವಚನ ರಚಿಸಿದ್ದರೆ, ಬೇಂದ್ರೆ, ನಿಸರ್ಗದ ನಿತ್ಯ ಕಾರುಣಿಕ್ಕೆ ಸುಪ್ತ ಯೌಗಿಕ ಸ್ವರೂಪ ನೀಡಿ ಅದ್ಭುತ ಸೌಂದರ್ಯಾನುಭೂತಿಯ ಕವಿತೆ ಕಟ್ಟಿದ್ದಾರೆ. 'ಗುದಸ್ಥಾನದಲ್ಲಿ ಆಧಾರ ಚಕ್ರ' ಎಂದು ಪ್ರಾರಂಭವಾಗುವ ಅಲ್ಲಮ ಪ್ರಭುವಿನ ವಚನದೊಡನೆ 'ಬೆಳಗು ಕವಿತೆಯನ್ನಿಟ್ಟು ನೋಡಿದರೆ ಇಲ್ಲಿನ ಯೌಗಿಕ ಆಯಾಮ ಸ್ಪಷ್ಟವಾಗುತ್ತದೆ. ಮೊದಲ ಪದ್ಯದ 'ಮೂಡಲ ಮನೆ' 'ಬಾಗಿಲ ತೆರೆದೂ' 'ಜಗವೆಲ್ಲಾ ತೊಯ್ದೂ' ಎಂಬ ಚಿತ್ರಗಳು ಮೂಲಾಧಾರ ಚಕ್ರದ ಪೃಥ್ವೀತತ್ವಕ್ಕೆ ಸಂಕೇತವಾಗಿವೆ. ದಿಗಂತವೆ ಕತ್ತಲ ಗುದಸ್ಥಾನವಾಗಿದ್ದು ಅಲ್ಲಿಂದ ಹುಟ್ಟುವ ಬೆಳಕು ತನ್ನ ರಸವನ್ನು ಎಲ್ಲೆಡೆಗೂ ಚೆಲ್ಲುವ ಮೂಲಕ ಕುಂಡಲಿನಿ ಯೋಗದ ಮೊದಲ ಮಹಾದ್ವಾರವನ್ನು ತೆರೆಯುತ್ತದೆ. ಈ ಅರಿವಿನ ಬಿಂಬವನ್ನು ಹೇರುವ ಅಧಿದೇವತೆ ಆದಿಶಕ್ತಿ. ಎರಡನೆ ಪದ್ಯ 'ರತ್ನದ ರಸದಾ ಕಾರಂಜಿಯು'ಯು ಲಿಂಗಸ್ಥಾನದಲ್ಲಿರುವ ಸ್ವಾಧಿಷ್ಠಾನ ಚಕ್ರದ ಅಪ್‌ತತ್ವದ ಪ್ರತೀಕವಾಗಿದೆ. ಇದು ತಂತಾನೆ ಪುಟಿಯುವ ನೈಸರ್ಗಿಕ ಲಯದ ಶಕ್ತಿ ಕಾರಂಜಿ. ಅದು ಉಕ್ಕಿದ ಕೊಡಲೆ ಅದಕ್ಕಾಗಿ ಕಾದ ಮೊಗ್ಗುಗಳು ಮೆಲ್ಲಗೆ ಅರಳತೊಡಗುತ್ತವೆ, ಧನ್ಯವಾಗುತ್ತವೆ. ಈ ರತ್ನದ ರಸ ಕೆಂಪಾಗಿ ಉಕ್ಕಿ, ಹಸಿರು ಪಚ್ಚೆಯಾಗಿ ನಿಸರ್ಗದಲ್ಲಿ ಕಂಗೊಳಿಸುವಂಥದು. ಮೂರನೆ ಪದ್ಯದ 'ಅಮೃತದ ಬಿಂದು' ನಾಭಿಸ್ಥಾನದಲ್ಲಿರುವ ಮಣಿಪೂರಕ ಚಕ್ರದ ಮಹಾ ತೇಜದ ಸಂಕೇತವಾಗಿದೆ. 'ಎಲೆಗಳ ಮೇಲೇ ಹೂಗಳ ಒಳಗೇ' ನಿಗೂಢವಾಗಿ ಕೂಡಿರುವ ಈ 'ಅಮೃತದ ಬಿಂದು'ಗಳು ಆ ಮಹಾನ್ ಬೆಳಕಿನ ಬಿಂಬದಿಂದ ಸಿಡಿದು ಬಂದಿರುವ ಅರಿವಿನ ಹನಿಗಳು. ಇವನ್ನ ಅಲ್ಲಿಂದಿಲ್ಲಿಗೆ ತಂದಿರಿಸುವುದು ವಿಶ್ವಶಕ್ತಿಯ ಕಾಣದ ಕೈ. ನಾಲ್ಕನೆ ಪದ್ಯದ 'ತಂಗಾಳಿ' ಹೃದಯಸ್ಥಾನದ ಅನಾಹತ ಚಕ್ರದ ವಾಯುತತ್ವದ ಸಂಕೇತ . ಇದೇ ಪ್ರಾಣಶಕ್ತಿ. ಇಲ್ಲಿನ ನೀಲವರ್ಣ ಪ್ರೇಮತತ್ವದ ಪ್ರತೀಕ. ಪ್ರೀತಿಯ ಗಂಧ ಬಳಿದ

ಜೇಪಿಗಳ ದಂಡು ಇಲ್ಲಿ ದುಂಬಿಗಳ ದಂಡಾಗಿದೆ. ಐದನೆ ಪದ್ಯದ 'ಗಿಡ ಗಂಟಿಯ ಕೊರಳೊಳಗಿಂದ ಹಕ್ಕಿಗಳಾ ಹಾಡು' ಎಂಬ ಸುಂದರಚಿತ್ರ ಕಂಠಸ್ಥಾನದ ವಿಶುದ್ಧಿ ಚಕ್ರದ ಆಕಾಶತತ್ವವನ್ನು ಪ್ರತಿನಿಧಿಸುತ್ತದೆ. ಆಕಾಶದಲ್ಲಿ ಅನುರಣನವಾಗುವ ಓಂಕಾರದ ಪ್ರತಿಧ್ವನಿಯೆ 'ಹಕ್ಕಿಗಳ ಹಾಡಾ'ಗಿದೆ. ಆರನೆ ಪದ್ಯ ಆರನೆ ಚಕ್ರವಾದ ಭ್ರೂಮಧ್ಯದ ಆಜ್ಞಾಚಕ್ರಕ್ಕೆ ಸಂವಾದಿಯಾಗಿದೆ. 'ಕಂಡಿತು ಕಣ್ಣು' ಎಂದು ಪ್ರಾರಂಭವಾಗಿ ಪಂಚೇಂದ್ರಿಯಗಳ ಅನುಭವವನ್ನು ಬಣ್ಣಿಸುವ ಈ ಪದ್ಯ ಮನೋತತ್ವದ ಪ್ರತೀಕವೂ 'ಈ ಮನಸಿನ ಗೇಹವೂ ಆಗಿದೆ. ಅನುಭವ ಶಿಖರದಲ್ಲಿ 'ಅರಿಯದು ಆಳವು ತಿಳಿಯದು ಮನವು ಕಾಣದೋ ಬಣ್ಣ' ಎನ್ನುವ ಏಳನೆ ಪದ್ಯಬ್ರಹ್ಮರಂಧ್ರದ ಸಹಸ್ರ ದಳದ ಕಮಲವನ್ನು ಕಂಡಾಗಿನ ಉದ್ಗಾರವಾಗಿದೆ. ಅಲ್ಲಿನ ಅನುಭವ ಅವರ್ಣನೀಯ. ಅಲ್ಲಿ ಓಂಕಾರದೊಡನೆ ಒಂದಾದಾಗ ಹುಟ್ಟುವ ನಿರಾಳವೆ 'ಶಾಂತಿರಸ'. ಅದು ಆರನೆ ಚಕ್ರದ 'ಅರಿವೇ ಗುರು' ಎಂಬ ಶ್ರದ್ಧೆ, ಪ್ರೀತಿಗಳಿಂದಾಗಿ ಹುಟ್ಟಿರುವಂಥದು. 'ಇದು ಬರಿ ಬೆಳಗಲ್ಲೊ ಅಣ್ಣಾ' ಎಂಬಲ್ಲಿ ಉನ್ಮನಿ ಜ್ಯೋತಿಯ ವಿಶ್ವರೂಪವನ್ನು ಕಂಡಾಗಿನ ಆನಂದಾಘಾತವಿದೆ, ಅನುಭಾವಸುಖವಿದೆ.

ಬೇಂದ್ರೆ ಧಾರವಾಡದ ಸಾಧನಕೇರಿಯಲ್ಲಿ ನೆಲೆ ನಿಂತು, ಅಲ್ಲಿನ ನೀರು ನೆಲ ಹೊಲ ಹಸಿರುಮರ ಆಕಾಶ ಹಕ್ಕಿ ಭೃಂಗ ಹೂವು ಎಲ್ಲವುಗಳ ಪರಕಾಯ ಪ್ರವೇಶವನ್ನಷ್ಟೇ ಅಲ್ಲ 'ಪರಾತ್ಮಪ್ರವೇಶ'ಮಾಡಿ ಅವೇ ತಾವಾಗಿ ಬಿಡುತ್ತಿದ್ದರು. ಈ ಸಾಧನಕೇರಿಯೆ ಅವರ SPIRITUS MUNDI : ಅವರ ಕಾವ್ಯ ಪಾಕಗೊಂಡಿರುವ ಪಾಕ ಶಾಲೆ. ಕವಿ ಅದರ ಕೇಂದ್ರದಲ್ಲಿ ನೆಲೆ ನಿಂತು ವಸಾಹತುಶಾಹಿ, ನವವಸಾಹತುಶಾಹಿ ಕುತಂತ್ರಗಳಿಗೆ ತುತ್ತಾಗಿ, ತಲ್ಲಣಗೊಂಡು ಛಿದ್ರಾತ್ಮನಾಗಿರುವ ಆಧುನಿಕನನ್ನು ಆಪ್ತವಾಗಿ ಕರೆಯುತ್ತಾರೆ: 'ಬಾರೊ ಸಾಧನಕೇರಿಗೆ ಮರಳಿ ನಿನ್ನೀ ಊರಿಗೆ' ಎಂದು. ಅಲ್ಲಿ ಅರಳಿರುವ ಸೂರ್ಯಪಾನದ ಹೂವನ್ನು ತೋರಿಸಿ 'ಮೇರುದಂಡವು ಚಿಗಿತು ಹೂತ ಹಾಗೆ' ಇದೆ ಎನ್ನುತ್ತಾರೆ. ಅವರ ನಿಸರ್ಗಾನುಭಾವದ ಕವಿತೆಗಳನ್ನೆಲ್ಲ ಈ ನಿಟ್ಟಿನಿಂದ ಮರುಚಿಂತನೆಗೆ ಒಳಪಡಿಸಿದರೆ ಆಕ್ರಮಣಕಾರಿ ಸಂಸ್ಕೃತಿಯೆದುರಿಸಲು ನಮಗೆ ಬೇಕಾಗಿರುವ 'ನಮ್ಮರಿವು' 'ಆತ್ಮಭಾತಿ' ಲಭಿಸಬಲ್ಲವು.

ಬೇಂದ್ರೆಕಾವ್ಯದ ಅಂತರ್ಯವೇ ಹೇಗೆ ದೇಸಿ ತಾತ್ವಿಕತೆಯಿಂದ ತುಂಬಿದೆ ಎಂಬುದು ಸರಿಯಾಗಿ ಅರ್ಥವಾಗಬೇಕಾದರೆ ಅವರು ಬೆಳಕನ್ನು, ಸೂರ್ಯೋದಯವನ್ನು ಕುರಿತು ಬರೆದಿರುವ ಕವಿತೆಗಳ ಮರುವಿಶ್ಲೇಷಣೆ ಮಾಡಬೇಕು. ಸೂರ್ಯಾಸ್ತ ಮತ್ತು ಕತ್ತಲು ಅವರ ಕಾವ್ಯದಲ್ಲಿ ನೇತ್ಯಾತ್ಮಕವಾಗಿರುವುದೆ ಹೆಚ್ಚು. ಈ ದೃಷ್ಟಿಯಿಂದ ಎಲ್ಲ ಪೌರ್ವಾತ್ಯ ಕವಿಗಳು ಯಾಕೆ ಪದೆ ಪದೆ ಸೂರ್ಯೋದಯಕ್ಕೆ ಮುಗಿಬಿದ್ದು ವರ್ಣಿಸುತ್ತಾರೆ? ಯಾಕೆ ಪಾಶ್ಚಾತ್ಯರಿಗೆ ಇದು ಅಷ್ಟಾಗಿ ದಕ್ಕುವುದಿಲ್ಲ? ಎಂಬುವುದು ಜಾಗತಿಕ ಸಂಸ್ಕೃತಿ ಅಧ್ಯಯನಕ್ಕೆ ಅಗತ್ಯವಾದ ಸಂಶೋಧನೆ ಆಗಬಲ್ಲದು. ಪಾಶ್ಚಾತ್ಯ ಮಾದರಿಗಳನ್ನಿಟ್ಟುಕೊಂಡು ಹೊರಟ ನವ್ಯ ಸಾಹಿತಿಗಳನ್ನು, ನವ್ಯ ಕವಿಗಳನ್ನು

ಕುರಿತ ಬೇಂದ್ರೆಯವರ ಮಾತೊಂದು ಪ್ರಚಲಿತವಿದೆ: "ರವಿ ಕಾಣದ್ದನ್ನ ಕವಿ ಕಂಡಾ. ಏನ್ ಕಂಡಾ? ಖಗ್ರಾಸ ಕತ್ತಲಿ ಕಂಡ" ಬೇಂದ್ರೆ ಪ್ರತಿಭೆ ಹೇಗೆ ಒಂದು ಇಡೀ ಚಳುವಳಿಯ ಅಂತರಂಗವನ್ನು ಒಂದೇ ಮಾತಿನಲ್ಲಿ ಹಿಡಿಯಬಲ್ಲದು ಎಂಬುದನ್ನು ಇದು ಎತ್ತಿ ತೋರಿಸುತ್ತದೆ.

ಬೇಂದ್ರೆಕಾವ್ಯದ ವಸ್ತುವಿನ್ಯಾಸವೆ ದೇಸಿಯಾಗಿರುವುದನ್ನು ಅರಿಯಲು ಇರುವ ಇನ್ನೊಂದು ಬಗೆ ಎಂದರೆ ದಾಂಪತ್ಯಯೋಗವನ್ನು ಕುರಿತ ಅವರ ಕವಿತೆಗಳ ಅಧ್ಯಯನ. 'ಕಲ್ಪವೃಕ್ಷ ವೃಂದಾವನಂಗಳಲ್ಲಿ', 'ಕುಣಿಯೋಣು ಬಾರಾ!', 'ಸಚ್ಚಿದಾನಂದ', 'ಸಂಸಾರ', 'ಗೃಹಿಣಿ', 'ನನ ಕೈಯ್ಯ ಹಿಡಿದಾಕೆ', 'ನಾನು ಬಡವಿ ಆತ ಬಡವ' ಇನ್ನೂ ಮುಂತಾದ ಪ್ರಸಿದ್ಧ ಕವಿತೆಗಳಲ್ಲಿ ಬೇಂದ್ರೆಯವರು ದೇಸಿ ಬದುಕಿನ ಮೂಲಸತ್ವವಾದ ಗಟ್ಟಿ-ಮುಟ್ಟು ದಾಂಪತ್ಯದ ನೂರಾರು ಎಳೆಗಳನ್ನು ಬಿಡಿಬಿಡಿಸಿ ತೋರಿಸಿದ್ದಾರೆ. 'ಸಖೀಗೀತ'ವಂತು ಇಡಿಯಾಗಿ ದಾಂಪತ್ಯವನ್ನು ಸಂಭಾಳಿಸಲೆಂದು ಹುಟ್ಟಿಕೊಂಡ ಖಂಡಕಾವ್ಯವಾಗಿದೆ. ಬೇಂದ್ರೆ 'ಮೇಘದೂತ'ವನ್ನ ಕನ್ನಡಿಸಿರುವುದು ಕೂಡ ಏಕಪತ್ನಿವ್ರತಸ್ಥನಾದ ಅಲ್ಲಿನ ಯಕ್ಷನ ದಾಂಪತ್ಯ ಪ್ರೇಮದಿಂದಾಗಿಯೆ ಎನ್ನಲು ಅಡ್ಡಿಯಿಲ್ಲ! 'ಏಳು ಕನ್ನಿಕೆಯರು' ಕವಿತೆ ದಾಂಪತ್ಯಭಾವಕ್ಕೆ ಒದಗುವ ಸಂಚಾರಿಭಾವಗಳ ಕಿರುಕುಳವನ್ನು ಸೂಚಿಸುತ್ತದೆ. 'ಇನ್ನೂ ಯಾಕ ಬರಲಿಲ್ಲಾಂವ ಹುಬ್ಬಳ್ಳಿಯಾಂವ' ಕವಿತೆಯಂತು ವಾರಾಂಗನೆಯೊಬ್ಬಳು ತನ್ನ ವಿಟನನ್ನೆ ಗಂಡನೆಂದು ಭಾವಿಸಿ ಅಕ್ಕಮಹಾದೇವಿಯಂತೆ ಮೊರೆಯಿಡುವ ಸನ್ನಿವೇಶ ಕಲ್ಪಿಸಿ, ದಾಂಪತ್ಯದ ಪಾವಿತ್ರ್ಯವನ್ನು, ಸೊಗಡನ್ನು ಪಡೆದುಕೊಳ್ಳುತ್ತದೆ. ಈ ದೃಷ್ಟಿಯಲ್ಲಿ ಈ ಕವಿತೆ ಕಾರಂತರ 'ಮೈ-ಮನಗಳ ಸುಳಿಯಲ್ಲಿ' ಕಾದಂಬರಿಯ ಮಂಜುಳೆ ಮತ್ತು ಲಕ್ಷ್ಮಣತೀರ್ಥರ ಪ್ರೇಮದ ತುರೀಯಾವಸ್ಥೆಯನ್ನು ನೆನಪಿಸುತ್ತದೆ.

ನಮ್ಮ ದೇಶೀಯ ದಾಂಪತ್ಯ ಇಡಿ ಜೀವಮಾನಕ್ಕೆಂದು ತಬ್ಬಿಕೊಂಡಿರುವ ನಂಟು. 'ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೆ?' ಎಂಬ ಪ್ರಶ್ನೆಗೆ ಉತ್ತರವೆಂದರೆ ಸಾವು. ಸಾವು ಮಾತ್ರ ಗಂಡ-ಹೆಂಡಿರ ದಾಂಪತ್ಯಕ್ಕೆ ಪೂರ್ಣವಿರಾಮ ಇಡಬಲ್ಲದು. ಅದೂ ಈ ಜನ್ಮದ ಮಟ್ಟಿನ ಕೊನೆ, ಮುಂದಿನ ಜನ್ಮದಲ್ಲಿ ಮತ್ತವರು ಸತಿ, ಪತಿ ಆಗಬಹುದೆಂಬ ಸುಕೋಮಲ ನಂಬಿಕೆ ನಮ್ಮ ಜನಪದರಲ್ಲಿ, ಸನಾತನಿಗಳಲ್ಲಿ ಇದೆ. ವಾಹನಗಳನ್ನು ಬದಲಾಯಿಸುವಷ್ಟು ಸಲೀಸಾಗಿ ಗಂಡನನ್ನು, ಹೆಂಡತಿಯನ್ನು ಬದಲಾಯಿಸುವ ಪಾಶ್ಚಾತ್ಯ ಸಂಸ್ಕೃತಿಯ ಜೀವನಶೈಲಿ ಎಂದೆಂದಿಗೂ ಇಲ್ಲಿ ವ್ಯಾಪಕವಾಗಿ ನೆಲೆಯೂರಲಾರದು ಎಂಬುದನ್ನು ಬೇಂದ್ರೆ ಕಾವ್ಯ ಮತ್ತೆ ಮತ್ತೆ ಸಾಬೀತು ಮಾಡುತ್ತದೆ. Changeನಲ್ಲೇ charmಅನ್ನು ಕಾಣುವ ಸಸ್ತಾ ಅಮೇರಿಕನ್ ಧೋರಣೆಯ ಹಿಂದಿನ ವ್ಯಾಪಾರೀ ಮನೋಭಾವವನ್ನು, ಪುರುಷಪ್ರಧಾನ ವ್ಯವಸ್ಥೆಯ ಅತಿರೇಕಗಳನ್ನು ನಮ್ಮ ದೇಸಿ ಸಂಸ್ಕೃತಿ ಅನಾಮತ್ತಾಗಿ

ತಿರಸ್ಕರಿಸುತ್ತದೆ. ಪ್ರೇಮಿಸಿ ಮದುವೆಯಾಗುವುದಕ್ಕಿಂತ ಇಲ್ಲಿ ಮದುವೆಯಾದ ಮೇಲೆ ಪ್ರೇಮದ ಒಲೆ ಹೂಡಿ ಕೊನೆತನಕ ಸಂಸಾರ ಮಾಡುವ ರೂಢಿಗೆ ಹೆಚ್ಚಿನ ಬೆಲೆ ಇದೆ. ಮದುವೆ ಎಂಬುದು ಒಬ್ಬ ವ್ಯಕ್ತಿಯ ಬಾಳಿನಲ್ಲಿ ಒಂದೇ ಒಂದು ಸಲ ಮಾತ್ರ ಘಟಿಸುವ ಬಲವಾದ ಬದಲಾವಣೆಯಾಗಿದ್ದು, ಆನಂತರ ಬದುಕು ಅವರವರು ರೂಪಿಸಿಕೊಂಡ ಹಾಗೆ ನಡೆದು ಹೋಗುತ್ತದೆ. ನಗರಗಳ ಸುಶಿಕ್ಷಿತ ವರ್ಗದಲ್ಲಷ್ಟೇ ಆಗೀಗ ವಿವಾಹ ವಿಚ್ಛೇದನ, ಪುನರ್ವಿವಾಹ ಅಷ್ಟಿಷ್ಟು ಬಳಕೆಗೆ ಬಂದಿದೆ. ಗ್ರಾಮೀಣರ ಬದುಕಿನಲ್ಲಿ ಇಡಿ ಜೀವಮಾನಕ್ಕೆಂದೆ ಮದುವೆಯಾಗುವುದು ಒಂದು ಅಲಿಖಿತ ಒಪ್ಪಂದವಾಗಿದೆ. ಇದನ್ನು ಬೇಂದ್ರೆಕಾವ್ಯ ನೂರಾರು ವಿಧಗಳಲ್ಲಿ ಮಾರ್ಮಿಕವಾಗಿ ಅಭಿನಯಿಸಿ ತೋರಿಸುತ್ತದೆ.

'ಕಲ್ಪವೃಕ್ಷ ವೃಂದಾವನಂಗಳಲ್ಲಿ' ಯೋಗಾಯೋಗದಿಂದ ಕವಿ ಮತ್ತು ಅವನ ಸಖಿ ಒಟ್ಟಿಗೆ ಸುಳಿದಾಡುತ್ತಾರೆ. ನನಸಿನಲ್ಲಷ್ಟೇ ಅಲ್ಲದೆ ಕನಸಿನಲ್ಲು ಅವರು ಸಹಜ ಸುಖಿಗಳು. ಅಲ್ಲಿನೆಲ್ಲ ವೈಭವ, ಸೌಂದರ್ಯ ಇವರ ಪ್ರೇಮ, ಕಾಮಗಳನ್ನು ಸಂತೈಸುವ ಶಕ್ತಿಗಳಾಗಿವೆ. ಕವಿಯ ಆದರ್ಶಸ್ವರ್ಗ ಎನ್ನಬಹುದಾದ ಈ ಜಾಗೆಯಲ್ಲಿ ಕಾಯಕ ಮತ್ತು ಪ್ರೇಮದ ಸಮತೋಲನವಿದೆ. ಅದೇ ದಾಂಪತ್ಯ, ಅದೇ ಭಾವಪೂರ್ಣ ಬದುಕು. "ಅಲ್ಲಿ ಎಲ್ಲರಿಗು ನಾಲ್ಕು ಕೈಗಳೇ/ ಪಾಟ ತಪ್ಪದಿಹವು/ ಎರಡು ಒಪ್ಪಿಸಿವೆ ಕುಶಲ ಕಲೆಗಳಲಿ/ ಎರಡು ಅಪ್ಪಿ ಇಹವು." ದಾಂಪತ್ಯ ಸುಖವಾಗಿರಬೇಕಾದರೆ ದುಡಿಮೆ ಅಗತ್ಯವಾಗಿ ಇರಬೇಕು ಎಂಬ ವಿವೇಕದ ಇಂಗಿತ ಇಲ್ಲಿ ನಾಲ್ಕು ಕೈಗಳ ಅದ್ಭುತ ರೂಪಕವಾಗಿದೆ. ದಾಂಪತ್ಯ ಬರೀ ಕನಸುಗಾರಿಕೆ ಅಲ್ಲ, ಅದು ತುಂಬು ಜವಾಬ್ದಾರಿಯ ಬದುಕು, ಎದೆಗಾರಿಕೆಯ ಸಾಹಸ. ಅಲ್ಲದೆ ನಮ್ಮ ದೇವಾನುದೇವತೆಗಳ ಮುಖಂಡರಾದ ತ್ರಿಮೂರ್ತಿಗಳೂ ಕೂಡ ದಾಂಪತ್ಯಬಂಧನವನ್ನು ಮನಸಾರೆ ಒಪ್ಪಿಕೊಂಡವರು. ಇದು ನಮ್ಮ ದೇಸಿ ಪರಂಪರೆಯ ದ್ಯೋತಕ. ದಾಂಪತ್ಯ ಸರಿಯಾಗಿ ಫಲಿಸಿದಾಗ "ಬಯಕೆ ಮೂಡಿದರೆ ಬಯಸಿದೊಡವೆಯೂ/ ಕೈಗೂಡುತ್ತಿತ್ತು /ಪಡೆದ ಬದುಕನೆ ಬಯಸುತ್ತಿದ್ದೆನೊ/ಎನ್ನುವಂತೆ ಇತ್ತು" ಎನ್ನುವಂಥ ತೃಪ್ತಿ ನೆಲೆಸುತ್ತದೆ. ತೃಪ್ತಿ ದಾಂಪತ್ಯದ ಜೀವಾಳ: ನಂಬಿಕೆ, ಪ್ರೀತಿ ಅದರ ಲಕ್ಷಣಗಳು. ಅಂಥ ಸ್ವರ್ಗೀಯ ವಾತಾವರಣದಲ್ಲಿ ಗಂಡನೆ ಕೃಷ್ಣನಾಗಿ ಹೆಂಡತಿಯೆ ರಾಧೆಯಾಗಿ ವಿಹರಿಸುವ ಪವಾಡ ಜರುಗುತ್ತದೆ. ಕಾಮತೃಪ್ತಿಗಾಗಿ, ಪ್ರೇಮದ ಹಂಬಲದಿಂದಾಗಿ ದಾಂಪತ್ಯದ ಬೇಲಿ ಹಾರುವ ಆಧುನಿಕ ರೋಗ ಇಲ್ಲಿ ಕಾಲಿಡಲಾರದು. ಯಾಕೆಂದರೆ ಗಂಡ ಹೆಂಡತಿ ಒಬ್ಬರಿಗೊಬ್ಬರು ಅನ್ಯೋನ್ಯವಾಗಿ ಬೆರೆತು ಹೋಗಿದ್ದಾರೆ. ಬರಿ ದೇಹಗಳಲ್ಲ, ಜೀವಗಳು ಆತ್ಮಗಳು ಒಂದಾಗಿ ಬಿಟ್ಟಿವೆ. "ನಾನು ನೀನೊ ನೀ ನಾನೊ ಏನೊ ಎನು/ ಎನ್ನುತ್ತಲೆ ಎಚ್ಚರಾದೆ" ಎಂಬಲ್ಲಿನ ಉಭಯವಳಿದ ಸ್ಥಿತಿ ಗಮನಾರ್ಹವಾದದ್ದು, ದಾರಿದೀಪವಾಗುವಂಥದ್ದು.

'ದೇಸಿ' ಮತ್ತು 'ದೇಶಿ' ಶಬ್ದಗಳು ತದ್ಭವ-ತತ್ಸಮಗಳು. ವಿಮರ್ಶೆಯ ಪರಿಕಲ್ಪನೆಗಳಾಗಿ ಅವು ಪರಸ್ಪರ ಪೂರಕವಾಗುವಂಥವೆ ಹೊರತು ಒಂದನ್ನೊಂದು

ತಿರಸ್ಕರಿಸುವಂಥವಲ್ಲ. ದೇಶೀಯ ಕುಟುಂಬದ ದೇಸೀತನವನ್ನು ಉಳಿಸುವುದರಿಂದ, ಅದರ ಅಂತರ್ಯದ ಮೌಲ್ಯಗಳನ್ನು ಕಾಪಾಡಿಕೊಳ್ಳುವುದರಿಂದ ಸಮಾಜದ ವಿಘಟನೆಯನ್ನು ತಡೆಯಬಹುದಾಗಿದೆ. ಎಲ್ಲವನ್ನೂ ಮಾರಾಟದ ಸರಕಾಗಿಸುವ ಮುಕ್ತ ಮಾರುಕಟ್ಟೆಯ ರಾಕ್ಷಸನೀತಿ ಮತ್ತು ಕೊಳ್ಳುವ ಗೀಳಿಗೆ ಬಲಿಯಾಗುವ ಬಳಕೆದಾರ ಸಂಸ್ಕೃತಿಗಳ ಅಂತಾರಾಷ್ಟ್ರೀಯ ಕುತಂತ್ರಕ್ಕೆ ಪ್ರತ್ಯುತ್ತರ ಕೊಡಲು ದೇಶೀಯ ಸಾಮಾಜಿಕ ಸಂಸ್ಕೃತಿ ಬಲಿಷ್ಠವಾಗಿರಬೇಕಾಗುತ್ತದೆ. ಈ ದಿಕ್ಕಿನಲ್ಲಿ ಬೇಂದ್ರೆ ಕಾವ್ಯ ನೀಡಿರುವ ಕಾಣಿಕೆ ಅಪೂರ್ವದ್ದು.

ಬೇಂದ್ರೆಯವರು ದೇಸೀತನವನ್ನು ಮೈಗೂಡಿಸಿಕೊಂಡ ಮತ್ತೊಂದು ಬಗೆಯನ್ನು ಅಲೌಕಿಕದ ಅರಿವನ್ನು ಕುರಿತ ಅವರ ಕವಿತೆಗಳಲ್ಲಿ ಕಾಣಬಹುದು. ಈ ಗುಂಪಿನ ಪ್ರಾತಿನಿಧಿಕ ಕವಿತೆ ಎಂದರೆ ಆತ್ಮ ಚರಿತ್ರಾತ್ಮಕವೂ ಅಧ್ಯಾತ್ಮ ಚರಿತ್ರಾತ್ಮಕವೂ ಆದ 'ಅಂಬಿಕಾತನಯ ದತ್ತ' ಎಂಬುದು. "ಯಾವ ಯೋಗನಿದ್ರೆಯಲ್ಲಿ ಏನು ಕನಸು ಕಂಡೆನೊ/ಯಾವ ಹಾಲನುಂಡೆನೊ" ಎಂದು ಸುಶ್ರಾವ್ಯವಾಗಿ ಪ್ರಾರಂಭವಾಗುವ ಈ ಕವಿತೆ ಪ್ರತಿ ಮಗುವಿಗೆ ತಾಯಿಯೇ ಪ್ರತ್ಯಕ್ಷ ದೈವವಾಗುವ ರೀತಿಯನ್ನು ಬಿಚ್ಚಿಡುತ್ತದೆ. ದೈವದ ಕಲ್ಪನೆ ಮನುಷ್ಯನಿಗೆ ಬಂದದ್ದು ತಾಯಿಯ ಪ್ರೇಮದಿಂದ ಮತ್ತು ಸಾವಿನ ಭೀತಿಯಿಂದ ಎಂದು ಕಾಣುತ್ತದೆ. ಈ ಕವಿತೆಯ ಗೇಯತೆಗೆ ತಾಯಿಯ ಎದೆ ಹಾಲು ಉಣ್ಣುವಾಗಿನ ಸಹಜ ಲಯವಿದೆ. ತಾಯೀಭಾವದ ಅಲೌಕಿಕ ಸ್ತೋತ್ರದಂತಿದೆ ಇದು. "ಮುದ್ದಿನೊಡನೆ ಮುದ್ದು ಮಾತ ಕಲಿಸಿ ಆಲಿಸಿ ನಲಿಸಿದ" ತಾಯಿಗೆ ಕವಿ ಹೇಳುತ್ತಾನೆ: "ನೀನು ಇತ್ತುದಿತ್ತೆನು" ಎಂದು. ತನ್ನದೆನ್ನುವುದು ಏನೇನೂ ಇಲ್ಲ ಎಂಬ ನಿರಾಳ ತಿಳಿವಳಿಕೆಯಿಂದ ಹೊಮ್ಮಿರುವ ಕವಿತೆ ಇದು. ನಿರಹಂಕಾರವೇ ಇಲ್ಲಿನ ಸ್ಥಾಯಿಭಾವ. ತಾಯೀಭಾವವೇ ಅದರ ಅಡಿಗಲ್ಲು. "ಹಾಡಲಾಗಿ ಕವಿಯು ಎಂದು ಜನವು ನನ್ನ ಕರೆದಿದೆ/ ನನ್ನ ಹೆಸರು ಮರೆಗಿದೆ" ಎಂಬಲ್ಲಿ "ವೀರನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ" ಎಂಬಲ್ಲಿನ ನಿಜದ ಅರಿವಿದೆ. ಇದು ಹುಸಿ ವಿನಯವಲ್ಲ. ತನ್ನ ಇಷ್ಟ ದೈವವನ್ನು ಕುರಿತ ಅಚಲ ನಂಬಿಕೆಯ ನುಡಿ ಇದು. ನಂಬಿಕೆಯು ಕವಿಯನ್ನು ಅಂಥ ಕಾವ್ಯಸಿದ್ಧಿಯ ಕಡೆಗೆ ಕೈಹಿಡಿದು ಕರೆದೊಯ್ಯುವ ಶಕ್ತಿ. ಅಂಬಿಕೆಯು ಕವಿ ಅಂಬಿಕಾತನಯದತ್ತರ ಇಷ್ಟ ದೈವ. ಅವಳೇ ಅವರ ಕಾವ್ಯದ ಪ್ರಾಣಶಕ್ತಿ. ಈ ತಾಯೀ ಭಾವ ಮತ್ತು ತಾಯಿಭಕ್ತಿಯು ಬೇಂದ್ರೆಯವರನ್ನು ನಮ್ಮ ಭಕ್ತಿ ಪರಂಪರೆ, ಶರಣ ಪರಂಪರೆಗಳ ಆಳಕ್ಕೆ ಕರೆದೊಯ್ಯುವುವು ಎನ್ನಿಸುತ್ತದೆ. ಹೀಗಾಗಿ ಅವರು ಆಧುನಿಕ ಯುಗಕ್ಕೂ ಭಕ್ತಿಪಂಥಗಳ ಯುಗಕ್ಕೂ ಕೊಂಡಿಯಾಗುವಂಥ ಕವಿಯಾದರು. ಅವರ ಭಕ್ತಿ, ಅಧ್ಯಾತ್ಮ ಸಮರ್ಪಣೆ, ಅನುಭಾವ ಇವು ಅವರು ಪ್ರತಿಯೊಬ್ಬ ಸಂತನನ್ನೂ ಹಾಡಿ ಹೊಗಳಲು ಹಚ್ಚಿದವು. ಇದರಿಂದಾಗಿ ನಮಗೆ ಆಧುನಿಕರಿಗೆ ನಮ್ಮ ಸಂತಪರಂಪರೆಯ ಸತ್ವದ ಅಂದಾಜು ಸಿಗುವಂತಾಯಿತು. ಅದರ ಒಳಸತ್ವದ ಬಗ್ಗೆ ಶ್ರದ್ಧೆ ಮೂಡುವಂತಾಯಿತು. ಇದು ಕೂಡ ನಮ್ಮ ದೇಸಿ ಸಂಸ್ಕೃತಿಯ ಒಂದು

ಪ್ರಮುಖ ಚಿಲುಮೆಯಾಗಿದ್ದು ನಮ್ಮನ್ನು ಸ್ವಕೀಯ ಚಿಂತನೆಗೆ ಹಚ್ಚುವಷ್ಟು ಶಕ್ತವಾಗಿದೆ. ಒಣ ಭೌತವಾದಿ ದೃಷ್ಟಿಕೋನವನ್ನು ಪ್ರಶ್ನಿಸುವ ಕೆಚ್ಚನ್ನು ಇದು ನೀಡಬಲ್ಲದು. ಬದುಕಿಗೆ ಜೀವಂತಿಕೆಯನ್ನು ತರಬಲ್ಲದು. ಎಲ್ಲಕ್ಕಿಂತ ಮುಖ್ಯವಾಗಿ ಸ್ವಾರ್ಥ, ಸ್ವಹಿತಾಸಕ್ತಿಗಳನ್ನು ಕರಗಿಸಿ ನಮ್ಮನ್ನು ನಮ್ರ ಜೀವಿಗಳನ್ನಾಗಿಸಬಲ್ಲದು. 'ನಾನು' ಎಂಬ ವ್ಯಕ್ತಿವಾದಿ ಹೆಸರು ಹೊತ್ತ ಕವಿತೆ ಕೂಡ ತಾನು ಐವರು ತಾಯಂದಿರ ಕೂಸು ಎಂದು ಹೇಳಿಕೊಳ್ಳುವುದು ವ್ಯಷ್ಟಿ– ಸಮಷ್ಟಿಗಳ, ಭಕ್ತಿ– ಮತ್ತು ಅದನ್ನು ಮೂಡಿಸುವ ಶಕ್ತಿಗಳ ಐಕ್ಯವನ್ನು ಸಾರಿ ಹೇಳುತ್ತದೆ. 'ಅಲ್ಲಮಪ್ರಭು' 'ಶ್ರೀ ರಾಮಕೃಷ್ಣೋದಯ' 'ಚೆನ್ನಲಿಂಗವೆ' 'ಶ್ರೀ ರವಿಂದರಿಗೆ' ಮುಂತಾದ ಕವಿತೆಗಳಲ್ಲಿ ಇದೇ ಭಕ್ತಿಭಾವದ ವಿಸ್ತರಣೆ ಕಾಣಿಸುತ್ತದೆ.

ಕಡೆಯದಾಗಿ ಬೇಂದ್ರೆಯವರ ಲೌಕಿಕ ನಿಲುವನ್ನು ಸಾರುವ ಕವಿತೆಗಳಲ್ಲೂ ಒಂದು ಬಗೆಯ ದೇಸಿತನವನ್ನು ಕಾಣಬಹುದಾಗಿದೆ. ಮನುಷ್ಯನಿಗೆ ಮಾತ್ರ ಸೀಮಿತವಾದ ಕಾಲದ ಪರಿಕಲ್ಪನೆಯನ್ನು ಸುಂದರ ರೂಪಕವನ್ನಾಗಿಸಿ ಹಾರಿಬಿಡುವ 'ಹಕ್ಕಿ ಹಾರುತಿದೆ ನೋಡಿದಿರಾ' ಲೌಕಿಕರ ಇತಿ–ಮಿತಿಗಳನ್ನು ಹಿಡಿದಿಡುತ್ತದೆ. 'ಸಾರ್ವಭೌಮದಾ ನೆತ್ತಿಯ ಕುಕ್ಕಿ' ಹಾರುವ ಹಕ್ಕಿ 'ಯುಗಯುಗಗಳ ಹಣೆಬರವ ಒರೆಸಿ' 'ಹೊಸಗಾಲದ ಹಸುಮಕ್ಕಳ' ಹರಸುತ್ತಿದೆ. ಕವಿಯ ಕಣ್ಣು ಮನುಕುಲದ ಪ್ರಗತಿಯ ಮೇಲೆ ನೆಟ್ಟಿರುವುದು ಇಲ್ಲಿ ಸುಸ್ಪಷ್ಟವಾಗಿದೆ 'ಬ್ರಹ್ಮಾಂಡಗಳನು ಒಡೆಯಲು' ಹೊಂಚು ಹಾಕುವ ಆಕ್ರಮಣಕಾರಿಗಳ ಸೊಕ್ಕಿಗೆ ನಸುನಕ್ಕು ಕಾಲದ ಹಕ್ಕಿ ಹಾರುತ್ತಿದೆ. ಇದೇ ರೀತಿ 'ನರಬಲಿ' ಕವನ, ಆಳುತ್ತಿದ್ದ ಬ್ರಿಟಿಷರ ವಿರುದ್ಧ ಸಿಡಿಗುಂಡಿನಂಥ ಸಿಟ್ಟು ಕಾರುತ್ತದೆ. "ನಿಲ್ಲಲಿ ನಟರಾಜನ ನಾಟ್ಯ/ ಭಂಗ ಪಡೆಯಲಿ ಬ್ರಹ್ಮ ಸಮಾಧಿ/ ಹೋಗಲಿ ಹಾಲಿನ ಕಡಲಲಿ ಮಲಗಿದ/ ದೇವನ ನಿದ್ದೆಯು ಹಾಳಾಗಿ" ಎಂದು ತ್ರಿಮೂರ್ತಿಗಳಿಗೆ ಶಾಪ ಹಾಕುತ್ತದೆ. ಈ ಕವಿತೆ ಜನರನ್ನು ರೊಚ್ಚಿಗೆಬ್ಬಿಸಿದ್ದು ಸಹಜವೆ ಆಗಿದೆ. ಅದಕ್ಕೆ ಹೆದರಿಯೆ ಬ್ರಿಟಿಷ್ ಸರ್ಕಾರ ಬೇಂದ್ರೆಯವರನ್ನು 1932ರಲ್ಲಿ ಹಿಂಡಲಗಾ ಜೇಲಿನಲ್ಲಿ ಬಂಧಿಸಿಟ್ಟಿತು. 'ನರಬಲಿ' ಕವನವು ಬಲಿಮಾಡಿತೆನ್ನನು/ಹೆಳವನಿದ್ದಲ್ಲಿಗೆ ಹೊಳೆ ಬಂದಿತು" "ಪ್ರಾಣದ ಒಗರಷ್ಟು ಹಿಂಡಿತು ಹಿಂಡಲಿಗೆ" ಎಂದು 'ಸಖಿಗೀತ'ದಲ್ಲಿ ಕವಿ ನೋವಿನ ನೆನಪು ತೋಡಿಕೊಂಡಿದ್ದಾರೆ. 'ತುತ್ತಿನ ಚೀಲ' 'ಅನ್ನಯಜ್ಞ' 'ಭೂಮಿ ತಾಯಿಯ ಚೊಚ್ಚಲು ಮಗ', 'ಎದೆಯ ಒಕ್ಕಲಿಗನ ಹಾಡು', 'ಪುಟ್ಟ ವಿಧವೆ' ಮುಂತಾದ ಕವಿತೆಗಳು ಬೇಂದ್ರೆಯವರ ಪ್ರಜಾಪ್ರಭುತ್ವವಾದಿ ಹಾಗೂ ಸಮಾಜವಾದಿ ಮೌಲ್ಯಗಳಿಗೆ ಕನ್ನಡಿ ಹಿಡಿಯುತ್ತವೆ. ಮನುಕುಲದ ಮುನ್ನಡೆಯಲ್ಲಿ ಅವರು ಇರಿಸಿಕೊಂಡಿರುವ ಅಚಲ ವಿಶ್ವಾಸವನ್ನು ಎತ್ತಿತೋರಿಸುತ್ತವೆ. ಕೃಷೀವಲರ ದೇಸಿ ಬದುಕಿನ ಚೆಲುವು, ಛಲ, ನಿಯತ್ತುಗಳನ್ನ ಕಣ್ಣಿಗೆ ಕಟ್ಟಸುತ್ತವೆ. ಆದರೆ ಅವರ ಲೌಕಿಕ ನಿಲುವನ್ನ ಛಡಿ ಏಟಿನಷ್ಟು ಮಾರ್ಮಿಕವಾಗಿ ಅನುಭವಕ್ಕೆ ತಂದುಕೊಡುವ ಕವನವೆಂದರೆ "ಕುರುಡು ಕಾಂಚಾಣಾ". ನೈತಿಕತೆ, ಜೀವಂತಿಕೆ, ಹೃದಯವಂತಿಕೆ, ವಿವೇಕ ಇವು ನಾಶವಾದರೆ

ನಾಗರಿಕತೆ ಅವನತಿಯ ಹಾದಿ ಹಿಡಿಯುತ್ತದೆ. ಆವಾಗ ಸುಂದರ ಶಕ್ತಿಯ ಬದಲು ಕರಾಳ ಶಕ್ತಿಗಳು ಅವತಾರವೆತ್ತಿ ನಾಗರಿಕತೆಯನ್ನ ನಿರ್ನಾಮ ಮಾಡುತ್ತವೆ ಎಂಬುದೆ ಬೇಂದ್ರೆಯವರ 'ಕುರುಡು ಕಾಂಚಾಣಾ' ಮತ್ತು ವಸ್ಸನ್ second coming ಕವಿತೆಗಳ ವಸ್ತು. ಏಟ್ಸ್ ಕವಿ ಸಿಂಹದೇಹದ, ಮನುಷ್ಯಮುಖದ ಕ್ರೂರಮೃಗ ಮರುಭೂಮಿಯಿಂದ ಎದ್ದು ಬಂದು ಬೆತ್ಲಹೆಮ್‌ನಲ್ಲಿ ಅವತಾರವೆತ್ತುವ ಬಗ್ಗೆ ಕಾಲಜ್ಞಾನ ನುಡಿಯುತ್ತಾನೆ. ನಂತರದ ಆತ್ಯಂತಿಕ ದುರಂತವನ್ನ ನಮ್ಮ ಕಲ್ಪನೆಗೇ ಕಟ್ಟಿಬಿಡುತ್ತಾನೆ. ಆದರೆ ಬೇಂದ್ರೆಯವರ ಕವನದಲ್ಲಿ ವಿವೇಕದ ಒಳಗಣ್ಣಿಲ್ಲದ ಕುರುಡು ಕಾಂಚಾಣ ಕರಾಳ ಶಕ್ತಿ ಆಗಲೆ ಪ್ರವೇಶಮಾಡಿ ಬಾಣಂತಿಯರನ್ನು ಸಣ್ಣ ಕಂದಮ್ಮಗಳನ್ನು ತಿಂದುಹಾಕಿದೆ. ಬಡವರ ಹಸಿವಿನಿಂದ ಉರಿಯುವ ಪಂಜನ್ನು ಕೈಯಲ್ಲಿ ಬೀಸುತ್ತಿದೆ. ಅವರ ಕಂಬನಿಯನ್ನೆ ಹೆಂಡದಂತೆ ಬಾಯಿಗೆ ಸುರಿದುಕೊಳ್ಳುತ್ತಿದೆ. ದಟ್ಟ ದಾರಿದ್ರ್ಯಹತ್ತಿ ಬಾರಿಸುತ್ತಿರುವ ಕೂಲಿ ಕುಂಬಳಿಯವರ ಮೈಧೂಳನ್ನೆ ಭಂಡಾರವನ್ನಾಗಿ ಬಳಸಿಕೊಂಡಿದೆ. "ಕಾಲಿಗೆ ಬಿದ್ದವರ ತುಳಿಯುತಲಿತ್ತೊ" ಎನ್ನುವಲ್ಲಿನ ಅರ್ಥಪದರಗಳು ಕಾರುಣ್ಯವನ್ನು ಕಡೆಯುತ್ತವೆ. "ಸಣ್ಣ ಕಂದಮ್ಮಗಳ/ಕಣ್ಣೀನ ಕವಡೀಯ/ತಣ್ಣನ್ನ ಜೋಮಾಲಿ ಕೊರಳೊಳಗಿತ್ತೊ" ಎಂಬ ಚಿತ್ರ ಆತ್ಯಂತಿಕ ದುರಂತದ್ದಾಗಿದೆ ಇಷ್ಟೆಲ್ಲ ಆದದ್ದು ಯಾಕೆ? ಈ ಕುರುಡು ಕಾಂಚಾಣ "ಗುಡಿಯೊಳಗೆ ಗಣಣ ಮಾ/ ಹಡಿಯೊಳಗೆ ತನನ, 60/ ಗಡಿಯೊಳಗೆ ಝಣ" ಎಂದು ನುಡಿಗೊಡುತ್ತಿದೆಯಲ್ಲ ಅದಕ್ಕಾಗಿ. ಒಬ್ಬ ಅಪ್ಪಟ ಮಾರ್ಕ್ಸ್‌ವಾದಿ ಕವಿಗೆ ಮಾತ್ರ ಹೊಳೆಯಬಹುದಾದ ಪ್ರತಿಮೆ ಇದು. ತನ್ನನ್ನೆ ಮರೆತು ಬದುಕಿಗೆ ಪುಟ್ಟ ಪೂರಾ ಬದ್ಧನಾದ ಕವಿ ತನ್ನ ಕಾಲ, ದೇಶಗಳ ಎಲ್ಲ ಆಶಯಗಳನ್ನೂ ಹೀರಿಕೊಂಡು ಬೆಳೆದಿರುತ್ತಾನೆ ಎಂಬುವದಕ್ಕೆ ಈ ಕವಿತೆಯೇ ಸಾಕ್ಷಿ. ಆದರೂ ಬೇಂದ್ರೆಯವರ ದೇಸೀಯತೆ ಅವರನ್ನ ದುರಂತಕ್ಕೆ ಕಟ್ಟಿ ಹಾಕದೆ ಅದನ್ನ ದಾಟುವ ಅಸಾಧ್ಯ ಆಶಾವಾದಕ್ಕೆ ಒಯ್ದು ಮುಟ್ಟಿಸುತ್ತದೆ, 'ಹ್ಯಾಂಗಾರೆ ಕುಣಿ ಕುಣಿದು/ಮಂಗಾಟ ನಡೆದಾಗ/ಅಂಗಾತ ಬಿತ್ತೊ, ಹೆಗಲಲಿ ಎತ್ತೋ" ಎಂಬ ಸಾಲುಗಳು ಕುರುಡು ಕಾಂಚಾಣದ ಸಾವನ್ನು ಅದರ ಪ್ರಾಡ್ಡಾಳಿಕೆ, ದಬ್ಬಾಳಿಕೆಗಳ ಮುಗಿತಾಯವನ್ನೂ ಸೂಚಿಸುತ್ತವೆ. ಇದು ನಮ್ಮ ಸ್ವದೇಶಿ ದೃಷ್ಟಿಕೋನದ ಫಲವಾಗಿದೆ. 'ಕುರುಡು ಕಾಂಚಾಣ' ಕವಿತೆಯ ಅರ್ಥಗಳ ಆಳಕ್ಕಿಳಿದು ಅಲ್ಲಿನ ಭೀಭತ್ಸ ಚಿತ್ರಶಕ್ತಿಗೆ ನಾವು ನಿಜವಾಗಿ ಸ್ಪಂದಿಸಿದರೆ ಮೈ-ಮನಸ್ಸು ವಿಹ್ವಲವಾಗುತ್ತವೆ. ನಮ್ಮ ಎಲ್ಲ ಬಂಡಾಯ ಕವಿಗಳಿಗಿಂತ ದೊಡ್ಡ ಬಂಡಾಯಗಾರರೆಂದರೆ ಬೇಂದ್ರೆ ಎಂಬುದು ಮನದಟ್ಟಾಗುತ್ತದೆ. ಸಾಮ್ರಾಜ್ಯದ ಕನಸಿನಲ್ಲಿ, ವ್ಯಾಪಾರದ ಹೆಸರಿನಲ್ಲಿ, ಲಾಭದ ಹುಚ್ಚಿನಲ್ಲಿ ದುಡ್ಡನ್ನೆ ದೇವರೆಂದುಕೊಂಡ ದೇಶಗಳು ಜಾರಿಗೆ ತಂದ ವಸಾಹತುಶಾಹಿ ವ್ಯವಸ್ಥೆಯನ್ನು, ಗುಲಾಮಿಪದ್ಧತಿಯನ್ನು, ಮಾರುಕಟ್ಟೆ ಸಂಸ್ಕೃತಿಯನ್ನು ಅದರ ಎಲ್ಲ ಕರಾಳತೆಯೊಂದಿಗೆ ಮೂರ್ತೀಕರಿಸುವುದೇ ಈ ಕವಿತೆಯ ಉದ್ಯೋಗ ವಾಗಿದೆ. ಹಾಗು ಅದನ್ನ ಅನಾಮತ್ತಾಗಿ

ಎತ್ತೊಗೆಯುವುದೇ ಈ ಕವಿತೆಯ ಮೂಲೋದ್ದೇಶವಾಗಿದೆ. ಕನ್ನಡ ಕಾವ್ಯಲೋಕದಲ್ಲಿ ಇಷ್ಟು ಶಕ್ತಿಶಾಲಿಯಾದ ಕವಿತೆಗಳು ವಿರಳ ಎನ್ನಬಹುದು. ಈ ಕವಿತೆ ನಮ್ಮ ಹಣದ ಹುಚ್ಚನ್ನು ಉಚ್ಚಾಟಿಸಿ, ವ್ಯಾಪಾರಿಸಂಸ್ಕೃತಿಯ ವಿರುದ್ಧ ಹೋರಾಡುವ ಕೆಚ್ಚನ್ನು ಪರೋಕ್ಷವಾಗಿ ನಮ್ಮಲ್ಲಿ ತುಂಬುತ್ತದೆ. ಈ ಕವಿತೆ ವಿದೇಶಿ ಮತ್ತು ಸ್ವದೇಶಿ ಹಿತಾಸಕ್ತಿಗಳಿಗೆ ಕೊಟ್ಟ ಪ್ರಹಾರದಂತಿದೆ.

ಕವಿತೆಯ ಕೊನೆಯಲ್ಲಿ ಹಣದ ಹೆಣ ಎತ್ತಿಕೊಂಡೊಯ್ಯುವ ರೂಪಕವಿದೆ. ಹಣದ ಅಗತ್ಯವೇ ಇಲ್ಲದ, ಅದರ ವ್ಯವಹಾರವೇ ಇಲ್ಲದ ಒಂದು ಅದ್ಭುತ ಸ್ಥಿತಿಯ ಸಂಕೇತವಾಗಿದೆ ಇದು. ನಮ್ಮ ಆದಿಮ ಸಮುದಾಯಗಳು ತಮ್ಮ ಪ್ರಾರಂಭಿಕ, ವಿಕಸನದ ಹಂತದಲ್ಲಿ ಹಣದ ಋಣವೇ ಇರದೆ, ಬರಿ ಸಾಟಿಪದ್ಧತಿಯಲ್ಲೆ ಸಕಲ ಲೇವಾದೇವಿಯನ್ನು ಮುಗಿಸುತ್ತಿರಲಿಲ್ಲವೆ? ಹಣದ ಹುಚ್ಚಿನ ಅತಿರೇಕದ ಶಿಖರವನ್ನೇರಿದ ಆಧುನಿಕ ನಾಗರಿಕತೆ ಅಲ್ಲಿಂದ ಇಳಿಲೇಬೇಕೆಂಬ ಸೂಚನೆಯ ಸಂಕೇತವೆ ಇದು? ಕವಿಯ ಕನಸು ಕುರುಡು ಕಾಂಚಾಣದ ಕ್ರೌರ್ಯದಿಂದ ಮುಕ್ತವಾದ ನಿರಾಳದ ನೆಮ್ಮದಿಯ ಸಮುದಾಯದ ಮೇಲೆ ಕಣ್ಣು ನೆಟ್ಟಿರುವಂತೆ ಕಾಣುತ್ತದೆ.

ಹೀಗೆ ನಿಸರ್ಗಾನುಭಾವ, ದಾಂಪತ್ಯಯೋಗ, ಅಲೌಕಿಕ ಅರಿವು ಹಾಗೂ ಅಪ್ಪಟ ಲೌಕಿಕನಿಲುವು ಎಂಬ ಚತುರ್ಮುಖಿ ಅಭಿವ್ಯಕ್ತಿಯುಳ್ಳ ಬೇಂದ್ರೆಯವರ ಕಾವ್ಯ ತನ್ನ ನಾಲ್ಕು ಮುಖಗಳಿಂದಲೂ ದೇಸಿತತ್ವವನ್ನೆ ಒಕ್ಕೊರಲಿನಿಂದ ಸಾರುತ್ತದೆ. ತಮ್ಮ ವೈಯಕ್ತಿಕ ಬದುಕಿನಲ್ಲು, ತಮ್ಮ ದೈನಂದಿನ ಇರುವಿಕೆಯಲ್ಲು ಅಪ್ಪಟ ದೇಸಿ ತತ್ವದ ಜ್ವಲಂತ ರೂಪದಂತೆಯೆ ಇದ್ದ ಬೇಂದ್ರೆಯವರು, ವಸಾಹತು ಶಾಹಿ ದಾಳಿ ಪ್ರಾರಂಭವಾಗುವುದಕ್ಕೂ ಮುಂಚೆ ನಮ್ಮ ನಾಡಿನಲ್ಲಿ ಬೇರೂರಿಕೊಂಡಿದ್ದ ಜಾನಪದ ಪರಂಪರೆ, ಶರಣರ ಅನುಭಾವಿಕ ಪರಂಪರೆ, ದಾಸರು ಮತ್ತು ಸಂತಕವಿಗಳ ಸ್ವಾನುಭಾವದ ಭಕ್ತಿ ಪರಂಪರೆ, ಇವೆಲ್ಲವನ್ನೂ ಸಾರಭೂತವಾಗಿ ಹಿಡಿದು ಆಧುನಿಕರಾದ ನಮ್ಮ ಬೊಗಸೆಯಲ್ಲಿಟ್ಟಿದ್ದಾರೆ–ತಮ್ಮ ಅನುಪಮವಾದ ದೇಸಿ ವಸ್ತುವಿನ್ಯಾಸದ ಕಾವ್ಯದ ಮೂಲಕ.

"ಬಗೆ ಪೊಸದಪ್ಪುದಾಗಿ, ಮೃದು ಬಂಧದೊಳೊಂದುವದೊಂದಿ ದೇಸಿಯೊಳ್ ಪುಗುವುದು, ಪೊಕ್ಕ ಮಾರ್ಗದೊಳೆ ತಳ್ವುದು, ತಳ್ತೊಡೆ ಕಾವ್ಯಮೊಪ್ಪುಗುಂ" ಎಂಬ ಆದಿ ಕವಿ ಪಂಪನ ವಾಣಿಯನ್ನು ಆಧುನಿಕ ಯುಗದ ಹೊಸಕಾವ್ಯದ ಅಗತ್ಯಗಳಿಗೆ ಒಗ್ಗಿಸಿಕೊಂಡು, ತಮ್ಮ ಕಾವ್ಯದ ವಸ್ತು ಮತ್ತು ವಿನ್ಯಾಸಗಳ ಮೂಲಕ ದೇಸಿತನವನ್ನು ಇನ್ನಿಲ್ಲದಂತೆ ಮೆರಿಸಿದ್ದಾರೆ ಕನ್ನಡದ ವರಕವಿ ಬೇಂದ್ರೆಯವರು.

ಬೇಂದ್ರೆ ಕಾವ್ಯದಲ್ಲಿನ ದೇಸಿ ವಸ್ತು ವಿನ್ಯಾಸ ಸ್ವರೂಪಕ್ಕೆ ಲಗತ್ತಾಗುವ ಒಂದು ಅಪ್ಪಟ ದೇಸಿರೂಪಕವನ್ನು ನಮ್ಮ ಹಬ್ಬಗಳಲ್ಲಿ ಕಾಣಬಹುದು. ಅವರ ಕಾವ್ಯದ ರುಚಿ ಸೊಗಸಾದ ಹೂರಣದ ಹೋಳಿಗೆಯದು. ಅದರ ಕಣಕದ ಹೊರಪದರವೂ ದೇಸಿ, ಹೂರಣದ ಒಳಸ್ವಾದ ದೇಸಿ. ಈ ಕಾವ್ಯದ ಹೋಳಿಗೆ ಬಿಸಿಬಿಸಿಯಾಗಿ ಬಂದಾಗ

ಒಂದು ರುಚಿ ಪಡೆದಿತ್ತು. ಈಗ, ಕವಿಯ ಬಾಳಿನ ಹಬ್ಬ ಮುಗಿದು, ಕಾಲದ ಗಾಳಿ ಬೀಸಿ ತಣಿದಿರುವ ಹೋಳಿಗೆ ಇನ್ನೊಂದು ಬಗೆಯ ರುಚಿ ಪಡೆದುಕೊಂಡಿದೆ. ಇದು ಎಂದಿಗೂ ಹಳಸದ. ಸಪ್ಪೆಯೆನಿಸದ ಹಸನಾದ ಕಾವ್ಯದ ಹೋಳಿಗೆ. ನೆಲದ ಒಡಲಿಂದ ಬಂದ ಬೇಳೆ-ಬೆಲ್ಲದ ಜೀವಂತಿಕೆ ಇದರಲ್ಲಿದೆ. ದೇಸಿನಾದದಎಣ್ಣೆಯಲ್ಲಿ ನಾದಿದ ಕಣಕದ ಜಿಗುಟು ಇದರಲ್ಲಿದೆ. ಮೇಲಾಗಿ ಅನುಭವದ ಬೆಂಕಿಯಲ್ಲಿ ಹದವಾಗಿ ಬೇಯಿಸಿದ ಈ ಕಾವ್ಯದ ಹೋಳಿಗೆಗೆ ಸಾರ್ವಕಾಲಿಕ ಸ್ವಾದ ದಕ್ಕಿದೆ. ಇದು ಕನ್ನಡದ ಸಾಂಸ್ಕೃತಿಕ ಅಭಿರುಚಿಯ ಅಭಿವ್ಯಕ್ತಿಯಾದ ಅಪ್ತ ಖಾದ್ಯ. ಇಂಥ ಕಾವ್ಯ ಕನ್ನಡದ ಪುಣ್ಯಫಲವಲ್ಲವೆ?

***

# ಕಣ್ಣುಗಳಿಲ್ಲ ಇಲ್ಲಿ

ಮೂಲ : ರಸ್ಕಿನ್ ಬಾಂಡ್ ಅನು : ಆಶಾ ರಬ್ಬ

ರೋಹನಾದವರೆಗೆ ಬೋಗಿಯಲ್ಲಿ ನಾನೊಬ್ಬನೇ ಇದ್ದಾಗ್ಯು ಒಬ್ಬ ಹುಡುಗಿಯು ಅಲ್ಲಿ ಪ್ರವೇಶಿಸಿದಳು. ಅವಳನ್ನು ಕಳುಹಿಸಲು ಬಂದವರು ಬಹುಶ; ಅವಳ ತಂದೆ–ತಾಯಿಗಳಾಗಿರಬಹುದು. ಕಾರಣ ಆವರಿಬ್ಬರೂ ಅವಳ ಬಗ್ಗೆ ಬಹಳ ಕಾಳಜಿಯನ್ನು ವಹಿಸುತ್ತಿದ್ದರು. ಆ ಮಹಿಳೆಯು ಹುಡುಗಿಗೆ ತನ್ನ ವಸ್ತುಗಳನ್ನು ಹೇಗೆ ಇಟ್ಟುಕೊಳ್ಳಬೇಕು. ಕಿಟಕಿಯಿಂದ ಯಾವಾಗ–ಹೊರಗೆ ವಾಲಬಾರದು ಮತ್ತು ಅಪರಿಚಿತರನ್ನು ಯಾವ ರೀತಿ ದೂರವಿಡಬೇಕು ಎಂಬುದರ ಬಗ್ಗೆ ವಿವರವಾಗಿ ತಿಳಿಸಿ ಕೊಡುತ್ತಿದ್ದರು. ಕೊನೆಗೆ ಅವರೆಲ್ಲರೂ ವಿದಾಯ ಹೇಳಿದರು . ರೈಲು ನಿಧಾನವಾಗಿ ಸ್ಟೇಷನ್‌ನಿಂದ ಹೊರಗೆ ಹೊರಟಿತು.

ನಾನು ಒಬ್ಬ ಸಂಪೂರ್ಣ ಕುರುಡನಾಗಿದ್ದರಿಂದ ನನ್ನ ಕಣ್ಣುಗಳು ಕೇವಲ ಬೆಳಕು ಮತ್ತು ಕತ್ತಲೆಗೆ ಮಾತ್ರ ಸ್ಪಂದಿಸುತ್ತಿದ್ದವು. ಹೀಗಾಗಿ ಆ ಹುಡುಗಿಯು ಕಾಣಲು ಹೇಗಿದ್ದಳು ಎಂಬುದನ್ನು ಹೇಳಲು ನಾನು ಅಸಮರ್ಥನಾಗಿದ್ದೇನೆ. ಆದರೆ ಅವಳು ಸ್ಲೀಪರ್ಸ್ ಧರಿಸಿದ್ದಳೆಂಬುದನ್ನು ನಾನು ಖಚಿತವಾಗಿ ಹೇಳಬಲ್ಲೆ ಕಾರಣ ಅವು ಅವಳ ಹಿಮ್ಮಡಿಗೆ ಬಡಿದು ಸಪ್ಪಳವನ್ನುಂಟುಮಾಡುತ್ತಿದ್ದವು. ಅವಳ ಮುಖ ಚರ್ಯೆಯ ಬಗ್ಗೆ ಅಥವಾ ಅವಳು ಕಾಣಲು ಹೇಗಿದ್ದಳೆಂದು ತಿಳಿದುಕೊಳ್ಳಲು ನನಗೆ ಸ್ವಲ್ಪ ಸಮಯ ಬೇಕಾಗುವುದು. ಬಹುಶ: ಅದು ನನಗೆ ಸಾಧ್ಯವಾಗಲಿಕ್ಕೂ ಇಲ್ಲ. ಆದರೆ ನನಗೆ ಅವಳ ಧ್ವನಿ ಹಾಗೂ ಚಪ್ಪಲಿಯ ಶಬ್ದ ಎರಡೂ ಇಷ್ಟವಾದವು.

"ನೀವು ಡೆಹರಾದವರೆಗೂ ಹೋಗುತ್ತಿದ್ದೀರಾ?" ಎಂದು ಪ್ರಶ್ನಿಸಿದೆ. ಬಹುಶ: ನಾನು ಕತ್ತಲಿನ ಮೂಲೆಯಲ್ಲಿ ಕುಳಿತಿರಬಹುದು. ಕಾರಣ ನನ್ನ ಧ್ವನಿಯು ಅವಳನ್ನು ಅಚ್ಚರಿಪಡಿಸಿತು. ಅವಳು ಆಶ್ಚರ್ಯವನ್ನು ವ್ಯಕ್ತಪಡಿಸುತ್ತ . "ಇಲ್ಲಿ ಇನ್ನೊಬ್ಬರು ಇರುವುದರ ಬಗ್ಗೆ ನನಗೆ ಗೊತ್ತಿರಲಿಲ್ಲ" ಎಂದು ನುಡಿದಳು .

ಹೌದು, ಕಣ್ಣಿರುವವರಿಗೆ ಹೀಗಾಗುವುದು ಸಹಜ. ತಮ್ಮ ಕಣ್ಣ ಮುಂದೆಯೇ ಇದ್ದುದನ್ನು ಅವರು ಗಮನಿಸುವುದಿಲ್ಲ. ಕಣ್ಣಿಲ್ಲದವರು ತಮ್ಮ ಇತರ ಇಂದ್ರಿಯಗಳ ಮೇಲೆ ಯಾವುದು ಪ್ರಖರವಾದ ಪ್ರಭಾವವನ್ನು ಬೀರುತ್ತಿದೆಯೋ ಅಂತಹ ಕೇವಲ ಅತ್ಯಾವಶ್ಯಕವಾದುದವುಗಳನ್ನು ಮಾತ್ರ ಗಮನಿಸುತ್ತಾರೆ.

"ನಾನೂ ಕೂಡ ನಿಮ್ಮನ್ನು ನೋಡಲಿಲ್ಲ" ನಾನು ಹೇಳಿದೆ. "ಆದರೆ ನೀವು ಬರುವುದನ್ನು ನಾನು ಕೇಳಿದೆ." ನಾನು ನನ್ನ ಕುರುಡುತನವನ್ನು ಅವಳಿಂದ ಮುಚ್ಚಿಟ್ಟುಕೊಳ್ಳಲು ಸಾಧ್ಯವೇ? ಎಂದು ಯೋಚಿಸತೊಡಗಿದೆ. ನಾನು ನನ್ನ ಸ್ಥಳದಲ್ಲಿಯೇ ಕುಳಿತುಕೊಂಡರೆ ಅದು ಅಷ್ಟೊಂದು ಕಠಿಣವಾಗಲಿಕ್ಕಿಲ್ಲ.

ಆ ಹುಡುಗಿಯು ಹೇಳಿದಳು, "ನಾನು ಸಹರಾನಪೂರಕ್ಕೆ ಹೋಗುತ್ತಿದ್ದೇನೆ. ಅಲ್ಲಿ. ನನ್ನ ಚಿಕ್ಕಮ್ಮ ನನ್ನನ್ನು ಕರೆದುಕೊಂಡು ಹೋಗಲು ಬರುತ್ತಾಳೆ." "ಹಾಗಿದ್ದರೆ ನಾನು ನಿಮ್ಮ ಜೊತೆ ಅತ್ಮೀಯತೆಯಿಂದ ಮಾತನಾಡಲಾಗದು," ಎಂದು ನಾನು ಹೇಳಿದೆ, "ಕಾರಣ ಚಿಕ್ಕಮ್ಮಂದಿರು ಬಹಳ ಭಯಂಕರವಾಗಿರುತ್ತಾರೆ." "ನೀವೆಲ್ಲಿಗೆ ಹೋಗುತ್ತಿರುವಿರಿ?" ಕೇಳಿದಳವಳು. "ಡೆಹರಾಗೆ. ಅಲ್ಲಿಂದ ಮಸೂರಿಗೆ"

"ಓ, ನೀವೆಷ್ಟು ಸುದೈವಿಗಳು! ನನಗೂ ಮಸೂರಿಗೆ ಹೋಗಬೇಕೆಂದು ಆಸೆಯಾಗುತ್ತದೆ. ಅಕ್ಟೋಬರ್ ತಿಂಗಳಿನ ಬೆಟ್ಟಗಳನ್ನು ನೋಡಲು ನನಗೆ ಬಹಳ ಪ್ರಿಯವಾದದ್ದು".

"ಹೌದು. ಅಕ್ಟೋಬರ್ ಅತೀ ಒಳ್ಳೆಯ ಸಮಯ," ನಾನು ನನ್ನ ನೆನಪುಗಳ ಆಧಾರದ ಮೇಲೆ ಅಕ್ಟೋಬರ್ ತಿಂಗಳಿನ ಸೌಂದರ್ಯವನ್ನು ವರ್ಣಿಸಲು ಪ್ರಾರಂಭಿಸಿದೆ, "ಬೆಟ್ಟಗಳು ಡೆಲಿಯಾ ಹೂವುಗಳಿಂದ ಆವೃತವಾಗಿರುತ್ತವೆ. ಸೂರ್ಯನು ಹಿತಕರನಾಗಿರುತ್ತಾನೆ. ರಾತ್ರಿ ಹೊತ್ತು ನೀವು ಸಂಗೀತವನ್ನಾಲಿಸುತ್ತ ಬೆಂಕಿಯ ಮುಂದೆ ಕುಳಿತುಕೊಳ್ಳಬಹುದು. ಆದರೆ ಈಗ ಬಹಳಷ್ಟು ಪ್ರವಾಸಿಗರು ಅಲ್ಲಿಂದ ಹಿಂದಿರುಗಿರುತ್ತಾರೆ. ಹೀಗಾಗಿ ದಾರಿಗಳೆಲ್ಲ ಶಾಂತ ಹಾಗೂ ನಿರ್ಜನವಾಗಿರುತ್ತವೆ. ನಿಜವಾಗಿಯೂ ಅಕ್ಟೋಬರ್ ಇದು ತುಂಬಾ ಒಳ್ಳೆಯ ಸಮಯ."

ಆಗ ಆ ಹುಡುಗಿ ಸುಮ್ಮನಾದಳು. ನನ್ನ ಮಾತುಗಳು ಅವಳಿಗೆ ನೋವನ್ನುಂಟು ಮಾಡಿದವೇ ಅಥವಾ ಅವಳು ನನ್ನನ್ನು ಒಬ್ಬ "ಹುಚ್ಚು ರಸಿಕ" ನೆಂದು ತಿಳಿದುಕೊಂಡಳೇ ಅಂತ ಯೋಚಿಸಿದೆ. ನಂತರ ನಾನು ಒಂದು ತಪ್ಪನ್ನ ಎಸಗಿದೆ "ಅದು ಹೇಗಿದೆ?" ಎಂದು ಪ್ರಶ್ನೆ ಮಾಡಿದೆ. ಆದರೆ ಅವಳಿಗೆ ನನ್ನ ಪ್ರಶ್ನೆಯಲ್ಲಿ ಯಾವುದೇ ವಿಚಿತ್ರತೆ ಕಾಣಲಿಲ್ಲ. ನನಗೆ ಕಣ್ಣು ಕಾಣಿಸುವುದಿಲ್ಲವೆಂಬುದು ಅವಳಿಗೆ ಗೊತ್ತಾಯಿತೇ? ಆದರೆ ಅವಳ ಮುಂದಿನ ಪ್ರಶ್ನೆ ನನ್ನ ಸಂಶಯವನ್ನು ಹೋಗಲಾಡಿಸಿತು.

"ನೀವು ಕಿಟಕಿಯಿಂದ ಹೊರಗೆ ಏಕೆ ನೋಡಬಾರದು?" ಎಂದು ಕೇಳಿದಳು. ನಾನು ನಿಧಾನವಾಗಿ ಬೆಂಚಿನ ಮೇಲೆ ಹಾಗೆಯೇ ಸರಿದು ಕಿಟಕಿಯ ಹತ್ತಿರ ಹೋಗಿ, ಕಿಟಕಿಯ ಅಂಚನ್ನು ಹುಡುಕಿದೆ. ಕಿಟಕಿಯು ತೆರೆದಿತ್ತು. ನಾನು ಹೊರಗಿನ ದೃಶ್ಯವನ್ನು ವೀಕ್ಷಿಸುವಂತೆ ನಟಿಸುತ್ತ ಹೊರಗೆ ನೋಡಿದೆ. ಇಂಜೀನಿನ ತೇಕು, ಗಾಲಿಗಳ ಗುಡು ಗುಡು ಶಬ್ದ ಕೇಳಿಸಿತು. ಟೆಲಿಗ್ರಾಫ್ ಕಂಬಗಳು ಹಿಂದೆ ಓಡಿಹೋಗುತ್ತಿರುವುದನ್ನು ನಾನು ಕಲ್ಪಿಸಿಕೊಂಡೆ.

"ಮರಗಳು ಓಡುತ್ತಿರುವಂತೆಯೂ ನಾವು ಮಾತ್ರ ನಿಂತ ಸ್ಥಳದಲ್ಲಿ ನಿಂತಂತೆ ಕಾಣುವುದನ್ನು ತಾವು ಗಮನಿಸಿದ್ದೀರಾ ?" ನಾನು ಧೈರ್ಯದಿಂದ ಕೇಳಿದೆ.

"ಅದು ಯಾವಾಗಲೂ ಹಾಗೆಯೇ ಕಾಣುತ್ತದೆ" ಎಂದು ಅವಳು ಹೇಳಿದಳು. "ನಿಮಗೆ ಹೊರಗೆ ಪ್ರಾಣಿಗಳು ಕಾಣಿಸುತ್ತಿವೆಯೇ? ದೆಹರಾನ ಹತ್ತಿರ ಈಗ ಕ್ವಚಿತ್ತಾಗಿ ಪ್ರಾಣಿಗಳು ಕಾಣಿಸಕೊಳ್ಳುತ್ತವೆ." ನಾನು ಕಿಟಕಿಯಿಂದ ಮುಖ ತಿರುಗಿಸಿ ಅವಳ ಕಡೆಗೆ ನೋಡಿದೆ. ಕೆಲವು ಕಾಲ ನಾವಿಬ್ಬರೂ ಸುಮ್ಮನೆ ಕುಳಿತೆವು. "ನಿಮ್ಮ ಮುಖ ಆಕರ್ಷಕವಾಗಿದೆ" ಎಂದು ನಾನು ಧೈರ್ಯಗೂಡಿಸಿಕೊಂಡು ಹೇಳಿದೆ. ಆದರೂ ಅದು ಸುರಕ್ಷಿತವಾದ ಮಾತಾಗಿತ್ತು.. ಕೆಲವೇ ಕೆಲವು ಹುಡುಗಿಯರು ಹೊಗಳಿಕೆಯನ್ನು ಅಲ್ಲಗಳೆಯುತ್ತಾರೆ. ಮತ್ತೆ ಕೆಲವರು ಉಪೇಕ್ಷಿಸುತ್ತಾರೆ. ಅವಳಂತೂ ಸಂತಸದಿಂದ ನಕ್ಕಳು. "ನಿಮ್ಮ ಮುಖ ಮುದ್ದಾಗಿದೆ ಎಂದು ಹೇಳಿಸಿಕೊಳ್ಳುವುದು ತುಂಬಾ ಸಂತಸ ನೀಡುತ್ತದೆ. ಆದರೂ ಜನರು ನನ್ನ ಮುಖ ಮುದ್ದಾಗಿದೆ ಎಂದು ಹೇಳುವುದನ್ನು ಕೇಳಿ ಕೇಳಿ ನನಗೆ ಬೇಸರವಾಗಿದೆ."

"ಓ. ಹಾಗಿದ್ದರೆ ನೀನು ಮುದ್ದಾಗಿದ್ದಿಯಾ ಎಂದು ಯೋಚಿಸುತ್ತ ನಾನು ಹೇಳಿದೆ. "ಹೌದು. ಆಕರ್ಷಕ ಮುಖ ಮುದ್ದಾಗಿರಲು ಸಾಧ್ಯವಿದೆ."

"ನೀವು ಬಹಳ ಧೈರ್ಯವಂತರು" ಆಕೆ ಹೇಳಿದಳು. "ಆದರೆ ನೀವೇಕೆ ಇಷ್ಟು ಗಂಭೀರವಾಗಿದ್ದಿ?" ಅವಳಿಗಾಗಿ ನಗಬೇಕೆಂದು ನಾನು ಯೋಚಿಸಿದೆ. ಆದರೆ ನಗಬೇಕೆಂಬ ನನ್ನ ಯೋಚನೆ ನನ್ನನ್ನು ಮತ್ತಷ್ಟು ಹಿಂಸಿಸಿತು.

"ಇನ್ನು ಕೆಲವೇ ಕೆಲವು ಸಮಯದಲ್ಲಿ ನಾನು ನಿಮ್ಮ ಸ್ಟೇಷನ್ ತಲುಪುತ್ತೇವೆ" ಎಂದೆನು ನಾನು. ಅದಕ್ಕವಳು. "ಸುದೈವದಿಂದ ಇದು ತುಂಬಾ.. ಚಿಕ್ಕ ಪ್ರವಾಸವಾಗಿದೆ. ನನಗೆ ಎರಡು ಅಥವಾ ಮೂರು ಘಂಟೆಗಳ ಕಾಲ ರೈಲಿನಲ್ಲಿ ಕುಳಿತುಕೊಳ್ಳಲು ಸಾಧ್ಯವಾಗುವುದಿಲ್ಲ."

ಆದರೆ ನಾನೋ! ಅವಳು ಮಾತನಾಡುವುದನ್ನು ಕೇಳುತ್ತ ನಾನು ಅಲ್ಲಿ ಎಷ್ಟು ಸಮಯ ಬೇಕಾದರೂ ಕುಳಿತುಕೊಳ್ಳಲು ಸಿದ್ಧನಾಗಿದ್ದೆ. ಪರ್ವತದಿಂದ ಹರಿಯುವ ತೊರೆಯ ಜುಳು ಜುಳು ಶಬ್ದದಂತೆ ಆಕೆಯ ಧ್ವನಿಯು ಮಂಜುಳನಾದವಾಗಿತ್ತು. ಅವಳು ರೈಲನ್ನು ಇಳಿದುಹೋದ ಮೇಲೆ ನಮ್ಮ ಈ ಸಂಕ್ಷಿಪ್ತ ಭೇಟಿಯನ್ನು ಮರೆಯಬಹುದು. ಆದರೆ ಈ ಘಟನೆ ನಾನು ಈ ಪ್ರವಾಸವನ್ನು ಮುಗಿಸುವವರೆಗೆ, ಅಥವಾ ತದನಂತರ ಕೆಲವು ಸಮಯದವರೆಗೆ ನನ್ನ ಜೊತೆಯಲ್ಲಿರಬಹುದು.

ಎಂಜಿನ್‌ನ ಶೀಟಿಯು ಹಾಗೂ ಗಾಲಿಗಳು ತಮ್ಮ ಧ್ವನಿಗಳನ್ನು ಬದಲಾಯಿಸಿದವು. ಆ ಹುಡುಗಿಯು ಎದ್ದು ನಿಂತು ತನ್ನ ಸಾಮಾನುಗಳನ್ನು ಒಂದುಗೂಡಿಸಲು ಪ್ರಾರಂಭಿಸಿದಳು. ಅವಳು ತನ್ನ ಕೂದಲನ್ನು ಯಾವ ರೀತಿಯಲ್ಲಿ ಕಟ್ಟಿಕೊಂಡಿರಬಹುದೆಂದು ತಿಳಿಯಲು ನಾನು ಕಾತರಗೊಂಡೆ. ಆಕೆ ತನ್ನ ಕೂದಲಿನ ತುರುಬು ಕಟ್ಟಿರಬಹುದೋ ಅಥವಾ ಜಡೆಯನ್ನು ಹೆಣೆದುಕೊಂಡಿದ್ದಾಳೋ ಅಥವಾ ಅವುಗಳನ್ನು ಹಾಗೆಯೇ ತನ್ನ ಹೆಗಲಮೇಲೆ ಇಳಿಬಿಟ್ಟಿದ್ದಾಳೋ, ಇಲ್ಲ, ಅವುಗಳನ್ನು ಚಿಕ್ಕದಾಗಿ ಕತ್ತರಿಸಿದ್ದಾಳೋ ಎಂದು ಯೋಚಿಸತೊಡಗಿದೆ.

ರೈಲು ಸ್ಟೇಷನ್ನನ್ನು ನಿಧಾನವಾಗಿ ಪ್ರವೇಶಿಸಿತು. ಹೊರಗಡೆ ಕೂಲಿಗಳ ಹಾಗೂ ಮಾರುವವರ ಧ್ವನಿಗಳು ಕೇಳಿ ಬಂದವು. ಅವುಗಳ ಮಧ್ಯೆಯೇ, ನಮ್ಮ ಬೋಗಿಯ ಹತ್ತಿರ ಒಬ್ಬ ಮಹಿಳೆಯ ಧ್ವನಿ ಕೇಳಿ ಬಂದಿತು. ಅದು ಬಹುಶ; ಆ ಹುಡುಗಿಯ ಚಿಕ್ಕಮ್ಮನದಾಗಿರಬಹುದು.

"ವಂದನೆಗಳು" ಎಂದಳು ಆ ಹುಡುಗಿ. ಅವಳು ನನ್ನ ಅತೀ ಸಮೀಪದಲ್ಲಿ ನಿಂತಿದ್ದಳೆಂದು ಅವಳು ಹಚ್ಚಿಕೊಂಡ ಸುವಾಸನೆಯ ಕೂದಲೆಣ್ಣೆಯಿಂದ ಗೊತ್ತಾಯಿತು. ಹಾಗೆಯೇ ನನ್ನ ಕೈ ಎತ್ತಿ ಅವಳ ಕೂದಲನ್ನು ಮುಟ್ಟಬೇಕೆಂದೆನಿಸಿತು. ಆದರೆ ಅವಳು ಅಲ್ಲಿಂದ ದೂರ ಸರಿದಳು. ಆದರೆ ಅವಳು ನಿಂತ ಸ್ಥಳದಲ್ಲಿ ಅವಳ ಕೂದಲೆಣ್ಣೆಯ ಸುವಾಸನೆ ಮಾತ್ರ ಅಲ್ಲಿಯೇ ಸುಳಿದಾಡುತ್ತಿತ್ತು.

"ಬೇಕಾದರೆ ನೀವು ಹೂದಾನಿಯನ್ನು ಒಡೆಯಿರಿ. ಇಲ್ಲಿ ಚೂರು ಚೂರು ಮಾಡಿ ಬಿಸಾಕಿ. ಆದರೆ ಗುಲಾಬಿಯ ಸುವಾಸನೆಗೆ ನೀವು ಏನೂ ಮಾಡಲಾರಿರಿ. ಅದು ಅಲ್ಲಿಯೇ ಸುಳಿದಾಡುತ್ತಿರುತ್ತದೆ..." ಅಷ್ಟರಲ್ಲಿ ಬಾಗಿಲಲ್ಲಿ ಏನೋ ಗದ್ದಲ ಉಂಟಾಯಿತು. ಒಳಗೆ ಪ್ರವೇಶಿಸುತ್ತಿದ್ದ ವ್ಯಕ್ತಿಯು ಯಾರಿಗೋ ಕ್ಷಮೆ ಯಾಚಿಸಿದನು. ಆನಂತರ ಜಗತ್ತು ನನಗೆ ಮುಚ್ಚಲ್ಪಟ್ಟಿತು. ನಾನು ನನ್ನ ಸೀಟಗೆ ಹಿಂದಿರುಗಿದೆ. ಗಾರ್ಡ್ ತನ್ನ ಸೀಟಿ ಊದಿದಾಗ ನಮ್ಮ ರೈಲು ಮುನ್ನಡೆಯಿತು. ಈಗ ನಾನು ನನ್ನ ಸಹ ಪ್ರಯಾಣಿಕನ ಜೊತೆ ಮತ್ತೆ ಅದೇ ಆಟವಾಡಬಹುದಾಗಿತ್ತು.

ರೈಲು ಜೋರಾಗಿ ಓಡಲು ಪ್ರಾರಂಭಿಸಿತು. ಗಾಲಿಗಳು ತಮ್ಮ ಹಾಡನ್ನು ಪುನರಾರಂಭಿಸಿದವು. ನಾನು ಕಿಟಕಿಯನ್ನು ಹುಡುಕಿ, ಅದರ ಮುಂದೆ ನನಗೆ ಕತ್ತಲಾಗಿದ್ದ ಬೆಳಕನ್ನು ವೀಕ್ಷಿಸುತ್ತ ಕುಳಿತೆ.

ಕಿಟಕಿಯ ಹೊರಗೆ ಎಷ್ಟೋ ಘಟನೆಗಳು ಸಂಭವಿಸುತ್ತಿರಬಹುದು. ಅಲ್ಲಿ ಏನೇನು ನಡೆದಿದೆ ಎಂಬುವದನ್ನು ಕಲ್ಪಿಸುವುದೇ ಒಂದು ರೋಮಾಂಚಕ ಆಟವಾಗಬಹುದು.

ಬೋಗಿಯನ್ನು ಪ್ರವೇಶಿಸಿದ ಆ ವ್ಯಕ್ತಿ ನನ್ನ ಹಗಲುಗನಸನ್ನು ಭಂಗಿಸಿ, "ನಿಮಗೆ ಬಹಳ ನಿರಾಶೆಯಾಗಿರಬಹುದು" ಎಂದನವನು. "ನೀವು ನನ್ನನ್ನು ಕ್ಷಮಿಸಬೇಕು. ಕಾರಣ ನಿಮ್ಮನ್ನು ಬಿಟ್ಟು ಹೋದ ಆ ಮೊದಲಿನ ಸಹ ಪ್ರಯಾಣಿಕಳಷ್ಟು ಆಕರ್ಷಕ ನಾನಿಲ್ಲ" ಎಂದು ಹೇಳಿದನು.

"ಆ ಹುಡುಗಿಯು ಆಕರ್ಷಕವಾಗಿದ್ದಳು" ಎಂದು ನಾನು ಅವನಿಗೆ ಹೇಳಿದೆ. "ಆ ಹುಡುಗಿಯ ಕೂದಲು ಉದ್ದವಾಗಿತ್ತೋ ಅಥವಾ ಚಿಕ್ಕದಾಗಿತ್ತೋ ಎಂಬುವದನ್ನು ತಾವು ಹೇಳಬಲ್ಲಿರಾ?"

ಅವನು ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾ ಕೇಳಿದನು "ನನಗೆ ನೆನಪಿಲ್ಲ . ನಾನು ಅವಳ ಕಣ್ಣುಗಳನ್ನು ಗಮನಿಸುತ್ತಿದ್ದೆ. ಅವು ಅತೀ ಸುಂದರವಾಗಿದ್ದವು: ಆದರೆ ಅವು ಸಂಪೂರ್ಣ ನಿರುಪಯುಕ್ತವಾಗಿದ್ದವು. ಕಾರಣ, ಅವಳು ಕುರುಡಿಯಾಗಿದ್ದಳು. ನೀವು ಅದನ್ನು ಗಮನಿಸಲಿಲ್ಲವೇ?"

***

# ಶ್ವಾನಾಯಣ

**ತೆಲುಗು ಮೂಲ: ಕೇತು ವಿಶ್ವನಾಥ್ ರೆಡ್ಡಿ        ಅನು : ಡಾ. ಮೀರಾಸಾಬಿಹಳ್ಳಿ ಶಿವಣ್ಣ**

ಅತಿಥಿಗೃಹದ ಹವಾನಿಯಂತ್ರಿತ ಕೋಣೆ. ಆ ಸಂಜೆ ಸುಧಾರಾಣಿಗೆ ಸ್ವಲ್ಪವೂ ಆರಾಮ ಅನಿಸಲಿಲ್ಲ. ಫೋಮ್ ಬೆಡ್ ಮೇಲೆ ಅಸಹನೆಯಿಂದ ಹೊರಳಾಡಿದಳು. ಸುತ್ತ ಮುತ್ತ ಬಿಸಾಡಿದ ಸಚಿತ್ರ ಪತ್ರಿಕೆಗಳು ಥಳ ಥಳ ಹೊಳೆಯುತ್ತಿದ್ದವು. ಬೇಸರದಿಂದ ಎದ್ದು ಸ್ವಲ್ಪ ಹೊತ್ತು ಅಲಂಕಾರದ ಕನ್ನಡಿಯ ಮುಂದೆ ನಿಂತು ಕೊರಳಲ್ಲಿನ ಮುತ್ತಿನ ಹಾರದೊಂದಿಗೆ ಆಟವಾಡಿದಳು. ಏನೋ ನೆನಪಾದಂತೆ ಫೋಮ್ ಬೆಡ್ ಮೇಲಿದ್ದ ಫಿಲಂಫೇರ್ ತೆಗೆದುಕೊಂಡು ಪುಟ ತಿರುಗಿಸಿದಳು.

ಚಲನಚಿತ್ರ ಪ್ರಪಂಚದ ಸುಪ್ರಸಿದ್ಧ ಸಿನಿಮಾ ತಾರೆಯ ಕೊರಳಲ್ಲಿಯ ಹವಳದ ಹಾರವನ್ನು ಮತ್ತೆ ಮತ್ತೆ ನೋಡುತ್ತಾ 'ಇದು ನನಗೆ ಬೇಕು, ಗಂಡ ಬರುತ್ತಲೇ ಹೇಳಬೇಕು' ಎಂದುಕೊಂಡಳು. ಅಷ್ಟರಲ್ಲೇ ಕಲ್ಯಾಣೋತ್ಸವ ಸಂದರ್ಭದಲ್ಲಿ ನಿನ್ನೆ ತಾನು ಕಂಡ ಶ್ರೀವೆಂಕಟೇಶ್ವರ ಸ್ವಾಮಿಯ ಆಭರಣಗಳು ಸುಧಾರಾಣಿಗೆ ನೆನಪಾಗಿ ಕನವರಿಸಿದಳು. ಅವು ತನಗೆ ಬೇಕು ಎಂದು ಭಾವಿಸಿಕೊಳ್ಳಲು ಹೆದರಿದಳು. ಮಧ್ಯಾಹ್ನ ಎರಡು ಗಂಟೆಗೆ ತನ್ನನ್ನು ಬಿಟ್ಟು ಮಂತ್ರಿಯನ್ನು ವಿಮಾನ ಹತ್ತಿಸಲೆಂದು ಹೋಗಿದ್ದ, ಇನ್ನೂ ಬಾರದ ಗಂಡು ಸುಧಾಕರರಾವು ಮೇಲೆ ಸುಧಾರಾಣಿಗೆ ಕೋಪ ಬಂತು . ಬೆಳಿಗ್ಗೆಯೇ ಕರ್ನೂಲಿಗೆ ಹೋಗದಂತೆ ಮಾಡಿದ ಮಂತ್ರಿಯ ಮೇಲೆ ಆಕೆಗೆ ಆಕ್ರೋಶ ಮೂಡಿತು .

ಈ ಸಾರಾಯಿ ಮಂತ್ರಿಗೆ ಎನಂಥ ಕಿತ್ಕೊಂಡು ಹೋಗೋದಿತ್ತೋ ತಾವು ತಿರುಪತಿಯಲ್ಲಿರುವಾಗಲೇ ಬರಬೇಕೇ? ಈ ಮಂತ್ರಿಗಳಿಗೆ ಕೆಲಸ ಇರೋಲ್ಲ. ಇವರು ಎಲ್ಲಿಗೆ ಬಂದರೂ ಡೆಪ್ಯುಟಿ ಕಮೀಷನರಂಥವರೂ ಕೂಡ ಹಿಂದೆಯೇ ಇರಬೇಕು. ಕನಿಷ್ಠ ನಾಲ್ಕು ದಿನ ಅಧಿಕಾರದಲ್ಲಿರದ ಈ ಮಂತ್ರಿಗಳಿಗೆ ವಿಮಾನ ಇಳಿದಾಗಿನಿಂದ ಪ್ರಾರಂಭಿಸಿ ಮತ್ತೆ ಹತ್ತುವವರೆಗೂ ಬಿಟ್ಟಿ ಸೇವೆಗಳು, ಕಲ್ಯಾಣೋತ್ಸವಗಳು ನಡೆಯಬೇಕು. ಸುಧಾರಾಣಿ ಟೈಂ ನೋಡಿಕೊಂಡಳು.

ಹೈದರಾಬಾದ್ ವಿಮಾನ ಹೋಗಿರಬಹುದು, ಇವರು ಬರುತ್ತಿರಬಹುದು ಎಂದುಕೊಂಡಳು. ಕೋಣೆಯ ಬಾಗಿಲು ತೆಗೆದು ಹೊರಬಂದಳು. ಕೋಣೆಯ ಹೊರಗೆ ಒಂದು ಮೂಲೆಯಲ್ಲಿ ಮಾತುಗಳಲ್ಲಿ ಮುಳುಗಿದ್ದ ಪೋಲೀಸ್ ಪೇದೆಗಳಿಬ್ಬರು

ಅಮ್ಮನವರನ್ನು ನೋಡಿ ಬಾಯಿ ಮುಚ್ಚಿಕೊಂಡರು. ಕೈಗಳನ್ನು ಕಟ್ಟಿಕೊಂಡು ಆಕೆಯ ಆಜ್ಞೆಗೋಸ್ಕರ ಸಿದ್ಧವಾಗಿ ಸ್ವಲ್ಪ ಬಗ್ಗಿ ನಿಂತರು .

ಈ ಮಿನಿಸ್ಟರ್ ಬರದಿದ್ದರೆ ಇಲ್ಲಿ ಸರ್ಕಲ್ ಇನ್‌ಸ್ಪೆಕ್ಟರುಗಳು ಇರುತ್ತಿದ್ದರು. ಅವಶ್ಯಕತೆಗಳನ್ನು ತಿಳಿಸಲು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಇರುತ್ತಿದ್ದ. ಈಗ ಕನಿಷ್ಟ ಸಬ್ ಇನ್‌ಸ್ಪೆಕ್ಟರೂ ಇಲ್ಲ. ಆ ಕ್ಷಣದಲ್ಲಿ ತಾನು ಮಂತ್ರಿಯ ಹೆಂಡತಿಯಾಗದಿರುವುದಕ್ಕೆ ಸುಧಾರಾಣಿ ವ್ಯಥೆ ಪಟ್ಟಳು. ಯಾವ ಆಜ್ಞೆಗಳನ್ನು ನೀಡದೆ ಅಮ್ಮನವರು ಮೌನವಾಗಿ ಅತಿಥಿಗೃಹದ ಮೆಟ್ಟಲುಗಳನ್ನು ಇಳಿದು ಹೂಗಿಡಗಳ ಮಧ್ಯದಲ್ಲಿ ಹೋಗುತ್ತಿರುವುದಕ್ಕೆ ಪೇದೆಗಳಿಗೆ ಆಶ್ಚರ್ಯವಾಯಿತು. ತಮ್ಮ ಆಶ್ಚರ್ಯ ನೀರ ಗುಳ್ಳೆಯಂತಹುದು ಎಂಬುದು ಅವರಿಗೆ ಅನುಭವದ ವಿಷಯವೇ ಆಗಿದ್ದರಿಂದ ಅತಿಥಿಗೃಹದ ಹೊರಕ್ಕೆ ಬಂದು ಜಯ–ವಿಜಯರಂತೆ ನಿಂತರು. ತಮ್ಮ ಅಮ್ಮನವರು ಯಾವ ಕ್ಷಣದಲ್ಲಾದರೂ ಹಿಂದಕ್ಕೆ ತಿರುಗಿ ಆಜ್ಞೆಗಳನ್ನು ಜಾರಿಮಾಡಬಹುದೆಂದು ಆಲೋಚಿಸುತ್ತಾ ಸಿದ್ಧವಾಗಿ ನಿಂತರು.

ತಿರುಪತಿಯಲ್ಲಿ ಅಂಥ ಮುಖ್ಯವಾದ ಕೆಲಸವಿಲ್ಲದಿದ್ದರೂ ಕ್ಯಾಂಪ್‌ಗಳ ಹೆಸರಿನಲ್ಲಿ ಯಾತ್ರೆಗಳಿಗೆ, ಮದುವೆ–ಮುಂಜಿಗಳಿಗೆ ಬಂದು ಹೋಗುವ ಮೇಲಧಿಕಾರಿಗಳಿಗೆ, ಅವರ ಹೆಸರು ಹೇಳಿಕೊಂಡು ಬರುವ ಬಂಧು–ಮಿತ್ರರಿಗೆ ಸೇವೆ ಮಾಡುವ ಉದ್ಯೋಗವನ್ನು ಬಯ್ದುಕೊಳ್ಳುತ್ತಾ, ತನ್ನ ಸಂಸಾರದ ವ್ಯಥೆಗಳನ್ನು ತಲೆಯಲ್ಲಿ ತುಂಬಿಕೊಂಡು ಒಂದು ಮರದ ಕೆಳಗೆ ಸಿಗರೇಟ್ ಸೇದುತ್ತಿದ್ದ ಹೆಡ್ ಕಾನ್‌ಸ್ಟೇಬಲ್ ಗಂಗಣ್ಣ ಸುಧಾರಾಣಿಯನ್ನು ನೋಡುತ್ತಲೇ ಬೆಚ್ಚಿದ. ಅರಿವಿಲ್ಲದಂತೆ ಸಿಗರೇಟ್ ಕೈಯಿಂದ ಜಾರಿತ್ತು. ಅಟೆನ್‌ಷನ್‌ನಲ್ಲಿ ನಿಲ್ಲುವ ಗಡಿಬಿಡಿಯಲ್ಲಿ ಕಂಕುಳಲ್ಲಿದ್ದ ಮಡಚಿದ ಪತ್ರಿಕೆ ಜಾರಿ ಕೆಳಗೆ ಬಿತ್ತು.

ಗಂಗಣ್ಣನ ಅವಸ್ಥೆಯನ್ನು ನೋಡಿ ಸುಧಾರಾಣಿಗೆ ನಗು ಬಂತು. ತನ್ನ ಸ್ಥಾನ–ಮಾನ ನೆನಪಿಗೆ ಬರುತ್ತಲೇ ಬಂದ ನಗು ತುಟಿಗಳಲ್ಲೇ ಇಂಗಿಹೋಯಿತು. ಹತ್ತಿರಕ್ಕೆ ಬಾ ಎಂದು ಕೈ ಬೀಸಿ, ಹಿಂದಕ್ಕೆ ತಿರುಗಿ ಹೋಗಿ ಹಾಲಲ್ಲಿದ್ದ ಸೋಫಾದಲ್ಲಿ ಕೂತಳು. ಇವಳ ಗಂಡನಲ್ಲ, ಇವಳೇ ಡೆಪ್ಯುಟಿ ಕಮೀಷನರ್. ಯಾವಾಗ ಯಾವ ಕೆಲಸ ಬಂದು ಬೀಳುತ್ತದೋ, ಎಲ್ಲಿಗೆ ಓಡಿಸುತ್ತಾಳೋ? ಎರಡು ದಿನಗಳಿಂದ ಪ್ರಾಣ ತೆಗೀತಾ ಇದ್ದಾಳೆ. ಇದಕ್ಕಿಂತ ಹಳ್ಳಿಗಳಲ್ಲಿಯ ದೊಡ್ಡ ರೆಡ್ಡಿಯವರ ಹೆಂಡತಿಯವರು ಮೇಲು ಅಂದುಕೊಳ್ಳುತ್ತಾ ಗಂಗಣ್ಣ ಹೆಚ್ಚು ಕಡಿಮೆ ಓಡಿ ಬಂದು ಹಾಲಿನಲ್ಲಿ ಅಮ್ಮನವರ ಮುಂದೆ ನಿಂತ. ಅಮ್ಮನವರು ಕೈ ಬೀಸುವದು, ಗಂಗಣ್ಣ ಓಡಿಬರುವುದನ್ನು ನೋಡಿದ ಜಯ–ವಿಜಯರಿಬ್ಬರೂ 'ಅದೇನೋ ಕೇಳುತ್ತೆ, ಅದಕ್ಕೋಸ್ಕರ ನಾಯಿಯ ಹಾಗೆ ಓಡಿಹೋಗಬೇಕು' ಅಂದುಕೊಂಡರು.

ತನ್ನ ಮುಂದೆ ಗಂಗಣ್ಣನನ್ನು ನೋಡಿ ರಾಣಿಗೆ ಕರ್ನೂಲಿನ ತಮ್ಮ ಬಂಗಲೆಯಲ್ಲಿ ತನ್ನ ಸುತ್ತ ತಿರುಗುವ ಕಪ್ಪು ನಾಯಿಮರಿ ನೆನಪಿಗೆ ಬಂತು.

'ನಿನ್ನ ಹತ್ತಿರ ಇರೋ ಆ ಪತ್ರಿಕೆ ಯಾವುದು?'ಎಂದು ಕೇಳಿದಳು. ಗಂಗಣ್ಣ ಗಡಿಬಿಡಿಯಿಂದ ಓಡಿ ಹೋಗಿ ಮರದ ಕೆಳಗೆ ಉದುರಿಸಿದ್ದ ವಾರಪತ್ರಿಕೆ ತಂದು ಅತಿವಿನಯದಿಂದ ಸುಧಾರಾಣಿಗೆ ಕೊಟ್ಟು ಸ್ವಲ್ಪ ದೂರಕ್ಕೆ ಸರಿದು ನಿಂತ.

"ಹೊರಗೇ ಇರು. ಸಾಹೇಬರು ಬರೋ ಟೈಂ ಆಯಿತು" ಎನ್ನುತ್ತಾ ಸುಧಾರಾಣಿ ನಿರ್ಲಕ್ಷ್ಯದಿಂದ ವಾರಪತ್ರಿಕೆಯ ಪುಟಗಳನ್ನು ತಿರುಗಿಸಲು ಪ್ರಾರಂಭಿಸಿದಳು. ಗಂಗಣ್ಣ ಮನಸ್ಸಿನಲ್ಲೇ ಕೆಟ್ಟ ಮಾತಿನಲ್ಲಿ ಬಯ್ದುಕೊಳ್ಳುತ್ತಾ ಹೊರಗೆ ಹೋದ. ವಾರಪತ್ರಿಕೆಯಲ್ಲಿ ಬಾಕ್ಸ್‌ನಲ್ಲಿಯ 'ಪ್ರಾಣಿ ಪ್ರೇಮ'ದ ವಾರ್ತೆ ಸುಧಾರಾಣಿಯ ಕಣ್ಣಿಗೆ ಬಿತ್ತು.

ಒಬ್ಬ ಮುಖ್ಯಮಂತ್ರಿಯ ಸೊಸೆ–ನಾನಾರೀತಿಯ ಪಕ್ಷಿಗಳ, ಬಣ್ಣ ಬಣ್ಣದ ಮಾತನಾಡುವ ಪಕ್ಷಿಗಳ, ಗಿಳಿಗಳು, ಮೈನಾಗಳು ಮುಂತಾದ ಹೂವಿನಂತಹ ಹಕ್ಕಿಗಳನ್ನು ಬೆಳೆಸುತ್ತಿದ್ದಾಳೆಂದು. ಆಕೆಯ ಬಳಿ ಇರುವ ಐರಿಷ್ ವುಲ್ಫ್ ಹೌಂಡ್ ಪ್ರಪಂಚದಲ್ಲಿಯೇ ಅತ್ಯಂತ ಕಡಿಮೆ ಸಂಖ್ಯೆಯಲ್ಲಿರುವ ಅಪರೂಪದ ದೊಡ್ಡನಾಯಿ ಎಂದು, ಆಕೆಯ ಪ್ರಾಣಿಪ್ರೇಮ ಅದ್ವಿತೀಯವಾದುದು ಎಂಬ ವಾರ್ತೆ!

ಮುಖ್ಯಮಂತ್ರಿ ಸೊಸೆಯ ಪ್ರಾಣಿ ಪ್ರೇಮದ ಬಗ್ಗೆ ಸುಧಾರಾಣಿ ಅಸೂಯೆಯಿಂದ ತಲ್ಲಣಿಸಿದಳು. ಅಸಹನೆಯಿಂದ ಉರಿದು ಹೋದಳು.

ಪ್ರತಿ ವಿಷಯದಲ್ಲೂ ಮಂತ್ರಿಗಳು, ಅವರ ಮಕ್ಕಳು, ಸೊಸೆಯಂದಿರು, ಹೆಂಡತಿಯರು, ಸಂಬಂಧಿಗಳು–ಇವರಿಗೆ ಎಲ್ಲ ಹೆಸರು, ಪ್ರಖ್ಯಾತಿಗಳು! ಪತ್ರಿಕೆಗಳಲ್ಲಿ ಅವರನ್ನು ಕುರಿತೇ ಬರಹಗಳು! ಪ್ರಾಣಿಪ್ರೇಮ ಮುಖ್ಯಮಂತ್ರಿ ಸೊಸೆಯೊಬ್ಬಳಿಗೇ ಇರುವಂತೆ!

ಇತ್ತೀಚೆಗೆ ಇನ್ಯಾವುದೋ ಪತ್ರಿಕೆಯಲ್ಲಿ ಸಿನಿಮಾತಾರೆಯ ನಾಯಿ ಪ್ರೇಮ ಕುರಿತ ಲೇಖನ ಬಂತು. ತನ್ನ ಬಂಗಲೆಯಲ್ಲೂ ನಾನಾ ರೀತಿಯ ನಾಯಿಗಳಿವೆ. ಐರಿಷ್ ವುಲ್ಫ್ ಹೌಂಡ್ ಇಲ್ಲದಿರಬಹುದು. ತಾನು ಮನಸ್ಸು ಮಾಡಬೇಕೇ ವಿನಾ ತರಿಸಬೇಕೆಂದರೆ ಎಷ್ಟು ಹೊತ್ತು? ಅಷ್ಟೇ! ಐರಿಷ್ ವುಲ್ಫ್ ಹೌಂಡನ್ನು ತರಿಸಿ ಪತ್ರಿಕೆಯಲ್ಲಿ ಫೋಟೋ ಹಾಕಿಸಿಕೊಳ್ಳಬೇಕೆಂದು ಸುಧಾರಾಣಿ ನಿರ್ಣಯಿಸಿಕೊಂಡಳು. ಆಕೆಯ ಅಸಹನೆ ಮತ್ತಷ್ಟು ಹೆಚ್ಚಿತು.

ಅತಿಥಿಗೃಹದ ಹೊರಗೆ ಕಾರು ನಿಂತ ಶಬ್ದ ಕೇಳಿಸಿತು. ಸುಧಾರಾಣಿ ಹಾಲಿನಿಂದ ಎದ್ದು ತನ್ನ ಕೋಣೆಯೊಳಕ್ಕೆ ಹೋಗಿ ಕೂತಳು. ಸುಧಾಕರರಾವು ಕೋಣೆಯೊಳಗೆ ಬರುತ್ತಲೇ ತಡವಾದುದಕ್ಕೆ ಕ್ಷಮಾಪಣೆ ಕೇಳಿದ. ಹೆಂಡತಿಯ ಮೌನವನ್ನು ನೋಡಿ ಅನಾಹುತವನ್ನು ಶಂಕಿಸಿದ. "ನಾಳೆ ಬೆಳಿಗ್ಗೆಯೇ ನಮ್ಮ ಕರ್ನೂಲು ಪ್ರಯಾಣ" ಎಂದು ಹೇಳಿ ಬಟ್ಟೆಗಳನ್ನು ಬದಲಾಯಿಸಿಕೊಳ್ಳತೊಡಗಿದ. ಸುಧಾರಾಣಿ ನಯವಾಗಿ, ಆದರೆ ಹಠದಿಂದ ಹೇಳಿದಳು; "ನನಗೆ ಐರಿಷ್ ವುಲ್ಫ್‌ಹೌಂಡ್ ಬೇಕು". ಸುಧಾಕರರಾವು ಬೂಟಿನ ಲೇಸ್ ಬಿಚ್ಚುತ್ತಾ ನಗುತ್ತಾ ಕೇಳಿದ;

"ತರಿಸಿಕೊಳ್ಳೋಕೆ ಆಗಲಿಲ್ಲವಾ? ಇಲ್ಲಿ ಒಳ್ಳೆಯ ಪುಸ್ತಕಗಳ ಷಾಪುಗಳೇನೋ ಇರೋ ಹಾಗಿವೆ, ಈಗಲೇ ಕಳಿಸಲಾ ಸರ್ಕಲ್ ಇನ್‌ಸ್ಪೆಕ್ಟರ್‌ನಾ? ಇಷ್ಟಕ್ಕೂ ಯಾರು ಬರೆದ ಕಾದಂಬರಿ ಅದು?" ಸುಧಾರಾಣಿಗೆ ಅಂಗಾಲುಗಳ ಕಿಚ್ಚು ನಡುನೆತ್ತಿಗೇರಿತು. ಈ ಉದ್ಯೋಗವೇ ಇಲ್ಲದಿದ್ದರೆ ತಮ್ಮ ತಂಬಾಕು ಕಂಪನಿಯಲ್ಲಿ ಗುಮಾಸ್ತನಾಗಲೂ ಕೆಲಸಕ್ಕೆ ಬಾರದ ಮನುಷ್ಯ. ಕುಟುಂಬದ ಸ್ಥಾನ-ಮಾನ, ಮುದ್ದು-ಸಂಸ್ಕಾರ, ಏನೂ ಇಲ್ಲದಿದ್ದರೂ ತನ್ನ ತಂದೆ-ಎರಡು ತಂಬಾಕು ಕಂಪನಿಗಳ ಯಜಮಾನ- ಉದ್ಯೋಗವನ್ನು ನೋಡಿ ಮಗಳನ್ನು ಕೊಟ್ಟ. ಕರ್ಮ ಅಂದುಕೊಳ್ಳುತ್ತಾ ಕಿರುಚುತ್ತಾ ಚೀರಿದಳು;

"ಕಾದಂಬರಿ ಅಲ್ಲ, ಒಂದು ಅಪರೂಪದ ಪ್ರಿಸ್ಟೀಜಿಯಸ್ ಡಾಗ್. ಅಂದರೆ ನಾಯಿ. ಐರಿಷ್ ಹೌಂಡ್ ಅಂತ...ಈ ಪತ್ರಿಕೆ ನೋಡಿ". ಹೆಂಡತಿ ಬೇಸರದಿಂದ ಕೊಟ್ಟ ಪತ್ರಿಕೆಯಲ್ಲಿಯ ವಾರ್ತೆಯನ್ನು ಸುಧಾಕರರಾವು ನೋಡಿದ. ಈ ಪತ್ರಿಕೆಯವರು, ಈ ದೇಶದಲ್ಲಿಯ ರಾಜಕೀಯ ನಾಯಕರು, ಅವರ ಕುಟುಂಬದವರೂ ಬೇರೆಯವರ ನೆತ್ತಿಯ ಮೇಲೆ ಪೀಡೆ ತರುವುದರಲ್ಲಿ ನಿಸ್ಸೀಮರು ಎಂದು ಬೇಸರ ಪಟ್ಟುಕೊಂಡ. ಆ 'ರೇರ್ ಕೈಂಡ್ ಆಫ್ ಪ್ರಿಸ್ಟೀಜಿಯಸ್ ಡಾಗ್ ಐರಿಷ್ ಹೌಂಡ್‌ನ್ನು ಎಲ್ಲಿಂದ ತರುವುದು? ಆ ಕ್ಷಣದಲ್ಲಿ ಸುಧಾಕರರಾವುಗೆ ತೋಚಲಿಲ್ಲ. ಸ್ಫೂರ್ತಿಯಿಂದ ಹೆಂಡತಿಗೆ ಹೇಳಿದ; "ಹೇಗೂ ಬರೋ ತಿಂಗಳು ಬೆಂಗಳೂರಿಗೆ ಹೋಗ್ತೀವಲ್ಲಾ? ಅಲ್ಲೇ ಟ್ರೈ ಮಾಡೋಣ". ಸುಧಾರಾಣಿ ಮುಖ ಅರಳಿತು. "ನಿಮ್ಮ ಸೂಪರಿನ್‌ಟೆಂಡೆಂಟನ್ನು ಕರೆಸಿ" ಎಂದಳು. ಆಜ್ಞೆ ಜಾರಿಯಾಯಿತು. ಜಿಲ್ಲಾ ಸೂಪರಿನ್‌ಟೆಂಡೆಂಟ್ ಸಂತೋಷದಿಂದ ಕೋಣೆಯೊಳಗೆ ಬಂದ. ಸುಧಾರಾಣಿಯ ಮಾತಿನಲ್ಲಿಯ ಧಿಮಾಕಿಗಿಂತ ಆಕೆಯ ಕೋರಿಕೆ ಕೇಳಿ ಆತನ ತಲೆ ಕೆಟ್ಟಿತು. ಬಾಂಬೆ ಆಗಲಿ, ಬೆಂಗಳೂರು ಆಗಲಿ. ಜಾಲಾಡಿ ತನಗೆ ಆ 'ಹೌಂಡ'ನ್ನು ತರಿಸಬೇಕೆಂದು ಸುಧಾರಾಣಿ ಹೇಳಿದಳು. ತನ್ನ ಹೆಂಡತಿಗಿರುವ ಪ್ರಾಣಿ ಪ್ರೇಮವನ್ನು ಕುರಿತು ಸುಧಾಕರರಾವು ಹದಿನೈದು ನಿಮಿಷ ಸೂಪರಿನ್‌ಟೆಂಡೆಂಟ್‌ಗೆ ಉಪನ್ಯಾಸ ನೀಡಿದ. ಅಷ್ಟು ಹೊತ್ತು ಸೂಪರಿನ್‌ಟೆಂಡೆಂಟ್ ತಲೆ ಆಡಿಸುತ್ತಲೇ ಇದ್ದ.
"ವಾರದೊಳಗಾಗಿ ತರಿಸಿಕೊಡಬೇಕು, ಪ್ರಾಮಿಸ್"ಎಂದಳು ಸುಧಾರಾಣಿ.
"ಖಂಡಿತ ಮೇಡಂ!" ಎಂದ ಜಿಲ್ಲಾ ಸೂಪರಿನ್‌ಟೆಂಡೆಂಟ್.
"ನಮ್ಮವರು ಮನಸ್ಸು ಮಾಡಿದರೆ ದೊಡ್ಡ ಕಷ್ಟವೇನೂ ಅಲ್ಲ"ಎಂದ ಸುಧಾಕರರಾವು.
"ಎಸ್, ಸರ್....ತಕ್ಷಣವೇ ವ್ಯವಸ್ಥೆ ಮಾಡುತ್ತೇನೆ".
ಜಿಲ್ಲಾ ಸೂಪರಿನ್‌ಟೆಂಡೆಂಟ್ ಹಾಗೆ ಪ್ರಾಮಿಸ್ ಮಾಡಿ ಓಗೆ ಕೋಣೆಯಿಂದ ಹೊರಗೆ ಬಂದು ತಲೆ ಕೊಡವಿಕೊಂಡ. ಇದು ತುರ್ತು ಕೋರಿಕೆ. ಈಡೇರಿಸದೆ ಬೇರೆ ದಾರಿ ಇಲ್ಲ ಅಂದುಕೊಳ್ಳುತ್ತಾ ತನ್ನ ಬೋಳುತಲೆಯನ್ನು ಸವರಿಕೊಂಡ.

ಐರಿಷ್ ವುಲ್ಫ್ ಹೌಂಡ್‌ನ ಅಸ್ಪಷ್ಟವಾದ ಆಕಾರದ ಹಿಂದೆ ಬಾಸ್‌ನ ಅಧಿಕಾರ, ಸುಧಾರಾಣಿ ತಂದೆಯ ತಂಬಾಕು ಕಂಪನಿಗಳು ಹಾಗೂ ಅವುಗಳಲ್ಲಿರುವ ರಾಜಕೀಯ ಪ್ರಾಬಲ್ಯ ನೆನಪಾದವು. ಇನ್ನೂ ತನಗಿರುವ ಬಂಗಾರದ

ಬಾತುಕೋಳಿಯಂಥ ಐದು ವರ್ಷದ ಸರ್ವೀಸಿನ ಜಿಲ್ಲಾ ಸೂಪರಿನ್‌ಟೆಂಡೆಂಟ್ ಮದ್ದೆ ಮನಸ್ಸಿನಲ್ಲಿ ಮಿಂಚಿತು. 'ಎಮರ್ಜೆನ್ಸಿ' ಕಾಲದಲ್ಲಿ ಇಲಾಖೆಯಿಂದ ತನ್ನ ಮೇಲೆ ಬಂದ ಪ್ರಕರಣಗಳು ಮೇಲಿನವರೆಗೂ ಹೋಗಿ ವಜಾ ಆಜ್ಞೆ ಬರುವ ಮುಂಚೆಯೇ ಎಚ್ಚರಗೊಳ್ಳುವ ಅವಕಾಶ ಈಗ ಲಭಿಸಿತು ಎಂದುಕೊಂಡ. ತಾನೆಂದೂ ನೋಡದ ಆ ನಾಯಿಗೆ ಮನಸ್ಸಿನಲ್ಲೇ ಧನ್ಯವಾದ ಅರ್ಪಿಸಿದ.

ಲಕ್ಷಾಂತರ ನಾಯಿಗಳ ತಳಿಯಲ್ಲಿ ಯಾವ ನಾಯಿಯ ಗೋಜಲೂ ತಿಳಿಯದ ತಾನು ಈ ಐರಿಷ್ ನಾಯಿಯನ್ನು ಯಾವ ರೀತಿಯಲ್ಲಿ ಸಂಪಾದಿಸಬೇಕೆಂಬ ಪ್ರಶ್ನೆ ಜಿಲ್ಲಾ ಸೂಪರಿನ್‌ಟೆಂಡೆಂಟ್ ಮನಸ್ಸಿನಲ್ಲಿ ಉಂಟಾಯಿತು. ಮಾಮೂಲು ಜನರೊಂದಿಗೆ ತನ್ನನ್ನೇ ತಾನು ಹೋಲಿಸಿಕೊಂಡಿದ್ದಕ್ಕೆ ತನಗೆ ತಾನೇ ಅಸಹ್ಯಪಟ್ಟುಕೊಂಡ.

ಮರುದಿನವೇ ಡೆಪ್ಯುಟಿ ಕಮಿಷನರ್ ಮತ್ತು ಅವರ ಪತ್ನಿ ಕಾರು ಹತ್ತಿ ಹೋಗುತ್ತಲೇ ಜಿಲ್ಲಾ ಸೂಪರಿನ್‌ಟೆಂಡೆಂಟ್ ಸರ್ಕಲ್ ಇನ್‌ಸ್ಪೆಕ್ಟರನ್ನೆಲ್ಲಾ ಸೇರಿಸಿದ. ಅವರ ಮೇಲೆ ಐರಿಷ್ ವುಲ್ಫ್ ಹೌಂಡ್‌ನ ಸಂಪಾದನೆಯ ಜವಾಬ್ದಾರಿಯನ್ನು ಹಾಕಿದ. ಹಾಕಿ ಬೋಳು ತಲೆಯನ್ನು ನಿಧಾನವಾಗಿ ತಡವಿಕೊಂಡ.

ಅವರಷ್ಟಕ್ಕೆ ಅವರೇ ಡಿ.ಸಿ. 'ಅಮ್ಮನವರಿಗೆ' ಆ ಯಾವುದೋ ನಾಯಿ ಸಂಪಾದಿಸಿ, ಹೂವಿನಲ್ಲಿ ಇಟ್ಟು ಕೊಡಬೇಕೆಂದುಕೊಂಡರೂ, ಯಾವ ತಾಪತ್ರಯದಲ್ಲಿ ಸಿಕ್ಕಿ ಹಾಕಿಕೊಳ್ಳಬೇಕಾಗುತ್ತದೋ ಎಂದು ಸುಮ್ಮನಾದರು. ತಮ್ಮ ತಮ್ಮ ಪಾಲು ಕೊಟ್ಟರೆ ತನಗೆ ಯಾವ ಅಭ್ಯಂತರವೂ ಇಲ್ಲವೆಂದು, ತನಗೆ ಸ್ವಲ್ಪ ನಾಯಿಗಳ ಜ್ಞಾನ ಗೊತ್ತು ಎಂದು ಸರ್ಕಲ್ ಇನ್‌ಸ್ಪೆಕ್ಟರ್ ರಾಮುಡು ಮುಂದಕ್ಕೆ ಬಂದ.

ರಾಮುಡು ಸಾಹಸ ಮಾಡಿ ಮುಂದೆ ಬರಲು ಕಾರಣ ಇಲ್ಲದಿರಲಿಲ್ಲ. ಆರು ತಿಂಗಳ ಕೆಳಗೆ ಆತ ಅನಂತಪುರದಲ್ಲಿ ಕೆಲಸ ಮಾಡುವಾಗ ಡಿ. ಸಿ. ಕ್ಯಾಂಪಿಗೆ ಬಂದಿದ್ದರು. ಸುಧಾರಾಣಿಗೆ ಸೀಗಡಿ ಮೀನು ತಿನ್ನಬೇಕೆಂಬ ಬುದ್ಧಿ ಹುಟ್ಟಿತು. ಆಕೆಗೆ ಸೀಗಡಿ ಎಂದರೆ ತುಂಬಾ ಇಷ್ಟ. ಆದರೆ ಮನಸ್ಸಿಗೆ ಸೀಗಡಿ ಮೀಸೆಗಳೆಂದರೆ ಆಗದು. ಆದರೆ ಟೇಬಲ್ ಮೇಲೆ ಜಿಂಜರ್ ಫ್ರೈ ಇರಲೇಬೇಕು ಎನ್ನುತ್ತಾಳೆ. ಅನಂತಪುರದಲ್ಲಿ ಆ ದಿನ ಹಸಿ ಸೀಗಡಿ ದೊರೆಯಲಿಲ್ಲ. ರಾಮುಡು ಸ್ವಯಂ ಬೆಂಗಳೂರಿಗೇ ಹೋದ. ದುರದೃಷ್ಟದಿಂದ ಅಲ್ಲೇನಾದರೂ ದೊರೆಯದಿದ್ದರೆ ಕೊಚ್ಚಿನ್‌ಗೆ ಟ್ರಂಕ್‌ಕಾಲ್ ಮಾಡಿ ವಿಮಾನದಲ್ಲಿ ಬೆಂಗಳೂರಿಗೆ ತರಿಸಿದರಾಯಿತು ಎಂದುಕೊಂಡ. ಅಂತೂ ಸಮಯಕ್ಕೆ ಸರಿಯಾಗಿ ಸೀಗಡಿಯನ್ನು ಕಾರಿನಲ್ಲಿ ತೆಗೆದುಕೊಂಡು ಪೆನಕಚೆರ್ಲ ಡ್ಯಾಮ್‌ನ ಅತಿಥಿಗೃಹಕ್ಕೆ ತಂದು, ಸ್ವಯಂ ಮುಂದೆ ನಿಂತು ಮಾಡಿಸಿ–ಬಡಿಸಿ ಹೊಗಳಿಕೆಯನ್ನು ಪಡೆದ ಘನತೆ ರಾಮುಡುಗೇ ದಕ್ಕುತ್ತದೆ. ಆ ಟ್ರಿಪ್ಪಿನಲ್ಲಿ ರಿಸ್ಕ್ ತೆಗೆದುಕೊಂಡದ್ದರಿಂದಲೇ ಕೆಲಸದಲ್ಲಿಯ ಕೆಲಸವಾಗಿದ್ದರಿಂದ ಒಂದಷ್ಟು ದುಡ್ಡು ಕೂಡಾ ಉಳಿಯಿತು. ಹೀಗಾಗಿ ಡಿ. ಸಿ. ಹತ್ತಿರ ಒಳ್ಳೆಯ ಹೆಸರಿದೆ. ಆ ಹೆಸರನ್ನು ಬೆಳೆಸಿ ಪೋಷಿಸಿಕೊಳ್ಳಲು, ತಾನು ಮಾಡುತ್ತಿರುವ ಎಲ್ಲ ಬಗೆಯ ವ್ಯವಹಾರಗಳ ರಕ್ಷಣೆಗೆ ಇದೊಂದು ಒಳ್ಳೆಯ ಅವಕಾಶವೆಂದು ರಾಮುಡು

ಮುಂದಕ್ಕೆ ಬಂದ. ಐರಿಷ್ ವುಲ್ಫ್ ಹೌಂಡ್ ಕೊಳ್ಳಲು ಜಿಲ್ಲೆಯಾದ್ಯಂತ ನಿಧಿ ಶೇಖರಣೆ ನಡೆಯಿತು. ಯಾವ ಯಾವ ಕೇಂದ್ರದಿಂದ ಎಷ್ಟು ವಸೂಲಾಯಿತೋ ವಸೂಲು ಮಾಡಿದವರಿಗೆ ಬಿಟ್ಟರೆ ಬೇರೆಯವರಿಗೆ ತಿಳಿಯದು. ಆದರೆ ರಾಮುಡು ಬಳಿ ಹತ್ತು ಹನ್ನೆರಡು ಸಾವಿರಕ್ಕಿಂತ ಹೆಚ್ಚಿನ ಹಣ ಸೇರಿತು.

ಇಷ್ಟು ದೊಡ್ಡ ಪ್ರಮಾಣದಲ್ಲಿ ಡಿ.ಸಿ. ಯವರ ವ್ಯವಹಾರ ಇಟ್ಟುಕೊಂಡ ಮೇಲೆ ಗಂಗೆತ್ತಿನಂತೆ ತಲೆಯಾಡಿಸುವವನ್ಯಾರಾದರು ಒಬ್ಬರು ತನ್ನ ಕೈಕೆಳಗೆ ಬಿದ್ದಿರುವವನು ಇರುವುದು ಒಳ್ಳೆಯದೆಂದು ರಾಮುಡು ಗಂಗಣ್ಣನನ್ನ ತನ್ನ ಹಿಂದೆ ಬೆಂಗಳೂರಿಗೆ ಕರೆದುಕೊಂಡು ಹೋಗಲು ನಿರ್ಧರಿಸಿದ. ಕುಪ್ಪಂನಲ್ಲಿಯ ಕಾಂಟ್ರ್ಯಾಕ್ಟರ ಕಾರನ್ನು ಮತ್ತೊಬ್ಬ ಸಿ. ಐ. ವ್ಯವಸ್ಥೆ ಮಾಡಿದ.

ಬೆಂಗಳೂರಿನಲ್ಲಿ ಐರಿಷ್ ವುಲ್ಫ್ ಹೌಂಡ್‌ನ ಅನ್ವೇಷಣೆ ನಡೆಯಿತು. ಒಂಭತ್ತನೇ ದಿನ–ವಾರದೊಳಗೆ ದೇಶ ಬಿಟ್ಟು ಹೋಗುತ್ತಿರುವ ವಿದೇಶೀಯನೊಬ್ಬನ ಬಳಿ ಐರಿಷ್ ವುಲ್ಫ್ ಹೌಂಡ್ ಇರುವ ಸುದ್ದಿ ತಿಳಿಯಿತು. ಆ ವಿದೇಶೀಯ ಎರಡು ಮೂರು ಗಂಟೆಗಳವರೆಗೆ ಆ ಮೇಲು ಜಾತಿಯ ನಾಯಿಯನ್ನು ತಾನೆಷ್ಟು ಆತ್ಮೀಯತೆಯಿಂದ ಸಾಕಿದ್ದೇನೆಂದೂ ಅದೆಷ್ಟು ಸಾತ್ವಿಕವಾದದ್ದೆಂದೂ. ಅದನ್ನೆಷ್ಟು ಹುಷಾರಾಗಿ ಸಾಕಬೇಕು, ಭಾರತದಲ್ಲಿ ಆ ತಳಿ ಅದೆಷ್ಟು ಅಪರೂಪದ್ದೆಂದು ಉಪನ್ಯಾಸ ನೀಡಿದನೆ ವಿನಾ ಮಾರಲಿಲ್ಲ!

ಕೊನೆಗೆ ನಾನಾ ಅವಸ್ಥೆಪಟ್ಟು ಐರಿಷ್ ವುಲ್ಫ್ ಹೌಂಡ್‌ನ್ನು ಸಂಪಾದಿಸಿದಾಗ ರಾಮುಡುಗೆ ಆದ ಆನಂದ ಅಷ್ಟಿಷ್ಟು ಅಲ್ಲ. ಆ ರಾತ್ರಿ ಅನುಭವಿಸುವವನದೇ ಆನಂದ ಎಂದು ವಸೂಲಿಯ ಹಣದಲ್ಲೇ ಸ್ವಂತ ಖುಷಿಗೆ ಅಂತ ಸಾವಿರ ರೂಪಾಯಿ ಖರ್ಚು ಮಾಡಿದ. ಮಜಾ ಮಾಡು ಎಂದು ಗಂಗಣ್ಣನ ಕೈಯಲ್ಲಿ ನೂರು ರೂಪಾಯಿ ಇಟ್ಟ.

ಈ ವ್ಯವಹಾರವನ್ನೆಲ್ಲಾ ನೋಡಿದ ಗಂಗಣ್ಣನ ಕಣ್ಣುಗಳಿಗೆ ಕತ್ತಲೆ ಕವಿಯಿತು. ಈ ನಾಯಿಗೆ ಮಾಡಿದ ಖರ್ಚಿನಲ್ಲಿ ಇನ್ನೂ ಮದುವೆಯಾಗದ ತನ್ನ ನಾಲ್ವರು ತಂಗಿಯರಲ್ಲಿ ಇಬ್ಬರಿಗೆ ಮದುವೆಯಾಗುತ್ತಿತ್ತು ಅಂದುಕೊಂಡ. ಆದರೆ ಆ ನಾಯಿಗಾದ ಖರ್ಚಿನ ಪಾಲನ್ನು ಆಶಿಸುತ್ತಿರುವ ತನ್ನ ಬದುಕಿನ ಮೇಲೆ ಮೊದಲ ಬಾರಿಗೆ ಅಸಹ್ಯ ಉಂಟಾಯಿತು. ಕಾರಿನಲ್ಲಿ ರಾಜಮರ್ಯಾದೆಯೊಂದಿಗೆ ಆ ನಾಯಿಯನ್ನು ಹತ್ತಿಸಿಕೊಂಡು ಕರ್ನೂಲಿಗೆ ಬಂದರು.

ಡಿ. ಸಿ. ಬಂಗಲೆಯ ಬಳಿ ಕಾರು ನಿಲ್ಲಿಸಿ. ನಾಯಿಯನ್ನು ಹಿಂದಿಟ್ಟುಕೊಂಡು ಕಾಂಪೌಂಡ್ ಪ್ರವೇಶಿಸಿದರು. ರಾಮುಡು– ಇದ್ದರೆ ಇಂತಹ ಬಂಗಲೆಯಲ್ಲಿ ಇರಬೇಕು ಅಂದುಕೊಂಡ. ನಾನಾರೀತಿಯ ಹೂವಿನ ಗಿಡಗಳಿಗೆ ನೀರು ಹಾಕುತ್ತಿರುವ ಖಾಕಿ ನಿಕ್ಕರ್‌ಗಳನ್ನು ನೋಡಿದ ಗಂಗಣ್ಣ ತಮ್ಮ ಬದುಕು ಇಷ್ಟೇ ಅಂದುಕೊಂಡ. ತೋಟದ ಮಧ್ಯೆ ತಿರುಗಾಡುತ್ತಿರುವ ಸುಧಾರಾಣಿ ನಾಯಿಯೊಂದಿಗೆ ಬರುತ್ತಿರುವ ರಾಜಭಟರನ್ನು ನೋಡಿದಳು. ಕೆಲವು ಕ್ಷಣ ಅವರ ಹಿಂದೆ ಬರುತ್ತಿದ್ದ ನಾಯಿಯ ಮೇಲೆ ಆಕೆಯ ದೃಷ್ಟಿ ಬಿತ್ತು.

ಭವಿಷ್ಯದಲ್ಲಿ ಮತ್ತೊಂದು ಹುಚ್ಚು ಹತ್ಕೊಳ್ಳೋಲ್ಲ ಅಂತ ಯಾವ ಗ್ಯಾರಂಟಿ? ಆಗ ಮತ್ತೆ ಎಲ್ಲರದೂ ನಾಯಿಪಾಡೇ....ಮಾತಿಗೆ ಮಾತು ಸೇರಿಸಿದ ಯುವಕನನ್ನು ರಾಮುಡು, ಗಂಗಣ್ಣ ವಿಚಿತ್ರವಾಗಿ ನೋಡಿದರು.

"ಲೋ ನೀನೇ ಏನೋ ಸುಬ್ಬಣ್ಣ? ಎಲ್ಲಾ ಕೇಳಿದೆಯಾ? ಕೇಳಿರ್ತಿಯೇಳು. ನೀನು ಗೇಟು ಹತ್ತಿರ ಇಲ್ಲಾಂತ ಅಮ್ಮನವರು ಉರಿದು ಬೀಳ್ತಿದ್ದರು. ನಿನಗೆ ತಿಥಿ ಕಾದಿದೆ."

"ಅಷ್ಟೇ ಅಲ್ಲವಾ? ಡಿಸ್ಮಿಸ್ ಮಾಡಿಸ್ತಾಳೆ. ಅದಕ್ಕಿಂತ ಹಾಳಾಗೋಗೋಕೆ ಸಾಧ್ಯಾನಾ?" ಸುಬ್ಬಣ್ಣನ ಸಹನೆಯನ್ನು ನೋಡಿ ಗಂಗಣ್ಣ ಅವದಕ್ಕಾದ. ರಾಮುಡು ಅವರನ್ನು ಕಾನ್‌ಸ್ಟೇಬಲ್ ಕೇಳಿದ;

"ಸಾರ್ ! ಒಂದೈವತ್ತು ಕೊಟ್ಟು ಹೋಗಿ ಸಾರ್ ! ಬಹಳ ತೊಂದರೆ ಆಗಿದೆ. ಆ ನಾಯಿಖರ್ಚಿನಲ್ಲೇ..." ರಾಮುಡು ಐವತ್ತು ತೆಗೆದು ಯಾಂತ್ರಿಕವಾಗಿ ಕೊಡುತ್ತಿದ್ದಾಗ, ಸುಬ್ಬಣ್ಣ "ಆ ನಾಯಿಪಾಡೇ" ಅಂದ. "ಹೋಗೋ ಹುಡುಗಬಚ್ಚಿ, ನಿನಗೇನು ಗೊತ್ತು?ಸಾರ್, ಕಾರ್ ಹತ್ತಿ, ಬರ್ತೀನಿಸಾರ್! ಲೋ ಸುಬ್ಬಣ್ಣಾ, ನೀನಿನ್ನು ಮನೆಗೆ ಹೋಗಬಹುದು, ಇವತ್ತಿನಿಂದ...." ಕಾನ್‌ಸ್ಟೇಬಲ್ ನಗುತ್ತಾ ಒಳಕ್ಕೆ ಹೊರಟುಹೋದ. ಸೂಪರಿನ್‌ಟೆಂಡೆಂಟ್ ಮುಖಿತ; ಒಪ್ಪಿಸಿದ ಕೆಲಸ ಎಡವಟ್ಟಾದುದಕ್ಕೆ ಕಾರಿನಲ್ಲಿ ಕುಳಿತು ವಿಷಾದಿಸುತ್ತಾ, ಈ ನಾಯಿಯನ್ನು ಏನು ಮಾಡಲಿ? ಎಂದು ರಾಮುಡು ಆಲೋಚಿಸತೊಡಗಿದ. ಗಂಗಣ್ಣ ಗೊಣಗಿದಂತೆ ಕೇಳಿದ;

"ಅಮ್ಮನವರು ಇಂಗ್ಯಾಕೆ ಆಡ್ತಾರೆ?"

"ಮೇಲಿನವರು ಹೇಳಿದಂತೆಲ್ಲಾ ಆಡುವವರು ಇರುವವರೆಗೂ, ಕೀಳು ನಾಯಿಯ ಹಾಗೆ ಜನ ಹಿಂದೆ ಬಿದ್ದು ಅಟ್ಟಿಸಿಕೊಂಡು ಹೋಗುವವರೆಗೂ ಅಮ್ಮನವರದು, ಸಾಹೇಬರದು, ಅವರ ಮಕ್ಕಳದು, ಬಂಧುಗಳದು ಇಂಥ ಹುಡುಗಾಟಗಳೇ...." ಸುಬ್ಬಣ್ಣ ಬಾಯಿಯಿಂದ ತುಪುಕ್ಕನೆ ಉಗಿದು ಅಂದ.

ಬೇರೆ ಸಮಯದಲ್ಲಾಗಿದ್ದರೆ ಹಾಗೆ ಅಂದ ಮನುಷ್ಯನನ್ನು ರಾಮುಡು ಬೂಟುಗಾಲಿಂದ ಒದೆಯುತ್ತಿದ್ದ. ಆದರೆ ಏನೂ ಅನ್ನದೆ ಕಾರ್ ಡ್ರೈವರ್‌ಗೆ ನೀರಸವಾಗಿ 'ಹೋಗು' ಎಂದ.

ಸುಬ್ಬಣ್ಣನಿಗೆ ಈ ಸಾಹಸ ಎಲ್ಲಿಂದ ಬಂತು? ಇವತ್ತು ಡಿಸ್ಮಿಸ್ ಖಾಯಂ. ಆಗಲೂ ಹೀಗೆಯೇ ಮಾತಾಡ್ತಾನಾ? ಹಿಂದಿನಿಂದ ನಾಯಿಗಳ ಬೊಗಳಾಟ ಕೇಳುತ್ತಿಲ್ಲವಲ್ಲ ಎಂದು ಗಂಗಣ್ಣ ಯೋಚಿಸತೊಡಗಿದ. ಮಾತುಗಳು ಕೇವಲ ಬೆನ್ನ ಹಿಂದೆ ಮಾತನಾಡಿಕೊಳ್ಳುವ ಮಾತುಗಳಾಗಕೂಡದು..... ಚಲಿಸುತ್ತಿರುವ ಕಾರಿನಲ್ಲಿ ಕುಳಿತ ಗಂಗಣ್ಣನ ಮನಸ್ಸು, ನೋವನ್ನು ಧ್ವನಿಸುತ್ತಿರುವ ಸುಬ್ಬಣ್ಣನತ್ತ ಪ್ರೇಮದಿಂದ ನೋಡಿತು.....

* * *

## ಭಕ್ಷೀಸು

ಇಂಗ್ಲಿಷ್ ಮೂಲ : ಆರ್ .ಕೆ. ನಾರಾಯಣ ಅನು : ವೀರಭದ್ರ ಕೌದಿ

ಒಬ್ಬನ ಚಿತ್ತಸ್ವಾಸ್ಥ್ಯವನ್ನು ಸುಮಾರು ಜನ ನೇರವಾಗಿಯೇ ಆಗಲಿ ಅಥವಾ ಕಪಟತನದಿಂದ ಪ್ರಶ್ನಿಸಿದರೆ ಅವನಲ್ಲಿ ತನ್ನ ಬಗ್ಗೆ ಕೆಲವು ಸಂಶಯಗಳು ಹುಟ್ಟಿ ಕಾಡತೊಡಗುತ್ತವೆ. ಮಾಜಿ ವಾಚಮನ್ ಗೋವಿಂದಸಿಂಗ್‌ನಿಗೆ ಆದದ್ದೂ ಇದೇ. ಹೀಗಾಗುವುದಕ್ಕೆ ಕಾರಣರಾದವರನ್ನು ನೀವು ದೂಷಿಸಲಾರಿರಿ. ತನ್ನ ಕೈಯಲ್ಲಿ ಒಂದು ರಜಿಸ್ಟರ್ಡ್ ಪೋಸ್ಟ್ ಲಕೋಟೆ ಹಿಡಿದುಕೊಂಡು 'ದಯವಿಟ್ಟು ಇದರ ಒಳಗೆ ಏನಿದೆ ಹೇಳುವಿರಾ?' ಎಂದು ನಿಮ್ಮನ್ನು ಕೇಳಿದರೆ ಸ್ಪಷ್ಟವಾಗಿ ನೀವೇನು ಹೇಳಬಲ್ಲಿರಿ? ಕವರ್ ತೆರೆದು ನೋಡೊ.... ಎಂದೇ ಅಲ್ಲವೇ? ಜನರೂ ಕೂಡ ಅದನ್ನೇ ಹೇಳಿದರು. ಅವರ ಉತ್ತರದಿಂದ ಈ ಸಿಂಗ್ ಬೆಚ್ಚಿಬೆದರಿದ. 'ಇಲ್ಲ ಇಲ್ಲ. ಅದು ಸಾಧ್ಯವಿಲ್ಲ' ಎನ್ನುತ್ತ ಮತ್ತೊಬ್ಬ ಗೆಳೆಯನನ್ನೋ ಅಥವಾ ಪರಿಚಿತನನ್ನೋ ಹುಡುಕುತ್ತ ಮುಂದೆ ನಡೆದ. ಎಲ್ಲರಿಂದಲೂ ಇದೇ ಉತ್ತರ ಬಂದಾಗ 'ಜನರ ತಲೆ ಕೆಟ್ಟಿದೆ' ಎಂದುಕೊಂಡ. ಕೊನೆಗೆ ಮುಂದಿನ ಓಣಿಯಲ್ಲಿ ವಾಸವಾಗಿದ್ದ ಮಾಜಿ ಕಂಪೌಂಡರ್ 'ಇದನ್ನು ತೆರೆಯಲು ನಿನಗೆ ಮನಸ್ಸಿಲ್ಲ. ಆದರೂ ಒಳಗೆ ಏನಿದೆ ಎಂದು ತಿಳಿದು ಕೊಳ್ಳಬೇಕಾಗಿದೆ. ಹಾಗಾದರೆ ನೀನು ಇದನ್ನು ಎಕ್ಸರೇ ಕೇಂದ್ರಕ್ಕೆ ತೆಗೆದುಕೊಂಡು ಹೋಗು' ಎಂದನು. 'ಎಕ್ಸರೇ ಅಂದರೇನು?' ಗೋವಿಂದ ಸಿಂಗ್ ಕೇಳಿದ. ಕಂಪೌಂಡರ್ ಅವನಿಗೆ ವಿವರಿಸಿ ತಿಳಿಸಿದ. 'ಅದು ಎಲ್ಲಿದೆ?' ಕೇಳಿದ ಗೋವಿಂದ ಸಿಂಗ್‌ನಿಗೆ ಎಕ್ಸರೇ ಕೇಂದ್ರಕ್ಕೆ ಹೋಗುವ ದಾರಿ ತೋರಿಸಿದ.

ಇವನ ಮುಂದಿನ ಕಥೆ ಏನಾಯಿತು ಎಂದು ಹೇಳುವುದಕ್ಕಿಂತ ಮೊದಲು ಇವನ ಬದುಕಿನ ಇತಿಹಾಸದ ಹಿಂದಿನ ಅಧ್ಯಾಯ ತಿಳಿದುಕೊಳ್ಳುವದು ಹೆಚ್ಚು ಉಪಯುಕ್ತವಾದೀತು. 1916-18ರ ಯುದ್ಧದಲ್ಲಿ ಸೇವೆ ಸಲ್ಲಿಸಿದ ನಂತರ ಒಂದು ಬ್ರಿಟೀಷ್ ಕಛೇರಿಯಲ್ಲಿ ವಾಚಮನ್ ಕೆಲಸಕ್ಕೆ ಆತನ ಹೆಸರು ಶಿಫಾರಸ್ಸು ಮಾಡಲಾಯಿತು. ಈ ಹೊಸ ಕೆಲಸವನ್ನು ಅವನು ತುಂಬಾ ಮೆಚ್ಚಿಕೊಂಡಿದ್ದನು. ಅವನಿಗೆ ಅಲ್ಲಿ ಖಾಕಿ ಯುನಿಫಾರ್ಮ್, ಭುಜದ ಮೇಲೆ ಹೊಳೆಯುವ ಪಟ್ಟಿ ಹಾಗೂ ಕೈಯಲ್ಲೊಂದು ಪುಟ್ಟ ಕೋಲನ್ನು ಕೊಟ್ಟಿದ್ದರು. ಆ ಕೋಲನ್ನು ಗಟ್ಟಿಯಾಗಿ ಹಿಡಿದುಕೊಂಡು ಪ್ರವೇಶದ್ವಾರದ ಬಳಿ ಸ್ಟೂಲ್ ಮೇಲೆ ಕುಳಿತುಕೊಳ್ಳುತ್ತಿದ್ದನು. ಕಛೇರಿಯ ಮುಖ್ಯಸ್ಥರು,

ಕಾರು ಗೇಟ್ ಬಳಿ ಬಂದಾಗ ನೇರವಾಗಿ ಎದ್ದುನಿಂತು ಮಿಲಿಟರಿ ಸಲಾಮು ಹೊಡೆಯುತ್ತಿದ್ದನು. ಆಫೀಸಿನಲ್ಲಿ ನೂರರ ಮೇಲೆ ಸಿಬ್ಬಂದಿಗಳು ಕೆಲಸ ಮಾಡುತ್ತಿದ್ದರು. ಪ್ರತಿದಿನ ಅವರು ಆಫೀಸ್ ಒಳಗೆ ಹೋಗುವಾಗ ಮತ್ತು ಹೊರಗೆ ಹೋಗುವಾಗ ಅವರ ಮೇಲೆ ಒಂದು ಕಣ್ಣು ಇಟ್ಟಿರುತ್ತಿದ್ದನು. ದಿನದ ಕೊನೆಗೆ ಮೆಟ್ಟಲುಗಳ ಮೇಲೆ ಇಳಿದು ಬರುವ ಜನರಲ್ ಮ್ಯಾನೆಜರರ ಹೆಜ್ಜೆ ಸಪ್ಪಳದ ನಿರೀಕ್ಷೆಯಲ್ಲಿರುತ್ತಿದ್ದ. ಸಾಹೇಬರ ಹೆಜ್ಜೆ ಸದ್ದು ಕೇಳುತ್ತಿದ್ದಂತೆ ಗಟ್ಟಿಯಾಗಿ ಎದ್ದು ಸಾವಧಾನದಲ್ಲಿ ನಿಲ್ಲುತ್ತಿದ್ದನು. ಸಾಹೇಬರು ಮತ್ತು ಉಳಿದ ಸಿಬ್ಬಂದಿ ಹೋಗುತ್ತಿದ್ದಂತೆ ಆಫೀಸಿನ ಬಾಗಿಲಗಳನ್ನು ಮುಚ್ಚಿ ಗೋಪಿಂದಸಿಂಗ್ ತನ್ನ ಸ್ಟೂಲನ್ನು ಒಳಗೊಯ್ದು, ಮೆಟ್ಟಲುಗಳ ಕೆಳಗಿಟ್ಟು ಅದರ ಮೇಲೆ ತನ್ನ ಪುಟ್ಟ ಕೋಲನ್ನು ಇಟ್ಟು ಹೊರಬಂದು ಮೇನ್ ಡೋರಿಗೆ ಕೀಲಿ ಹಾಕಿ ಅದನ್ನು ಸೀಲು ಮಾಡುತ್ತಿದ್ದನು. ಇದೇ ರೀತಿಯಾಗಿ ಇಪ್ಪತ್ತೈದು ವರುಷಗಳವರೆಗೆ ನಿರಂತರ ಸೇವೆ ಸಲ್ಲಿಸಿ ಈಗ ನಿವೃತ್ತಿಗಾಗಿ ಮನವಿ ಸಲ್ಲಿಸಿದ್ದ. ಇಷ್ಟು ಬೇಗ ನಿವೃತ್ತಿ ಬಗ್ಗೆ ಅವನು ವಿಚಾರಿಸಬಾರದಿತ್ತು. ಆದರೆ ಅವನ ಕಣ್ಣು ಮತ್ತು ಕಿವಿಗಳು ತಮ್ಮ ಆಟವನ್ನು ಸುರುವಿಟ್ಟುಕೊಂಡಿದ್ದವು. ಮೆಟ್ಟಲು ಮೇಲೆ ಇಳಿದು ಬರುತ್ತಿದ್ದ ಮ್ಯಾನೇಜರರ ಹೆಜ್ಜೆ ಸಪ್ಪಳ ಕಿವಿಗಳಿಗೆ ಕೇಳಿಸುತ್ತಿಲ್ಲ. ಹತ್ತು ಯಾರ್ಡ್ ದೂರದಲ್ಲಿರುವ ಸಾಹೇಬರು ಕಣ್ಣಿಗೆ ಕಾಣ್ಣಿಸುತ್ತಿದ್ದಿಲ್ಲ. ಹೀಗಾಗಿ ಸೇವೆಯಲ್ಲಿ ಮುಂದುವರೆಯುವದು ಸರಿಕಾಣದ್ದರಿಂದ ಸ್ವಯಂನಿವೃತ್ತಿಗಾಗಿ ಅರ್ಜಿ ಸಲ್ಲಿಸಿದ. ಕರೆಕಳಿಸಿದ ಸಾಹೇಬರ ಎದುರು ಹೋಗಿ ನಿಂತನು. ಆತನ ಕಾಗದ ಪತ್ರಗಳನ್ನು ಪರಿಶೀಲಿಸುತ್ತಿದ್ದ ಸಾಹೇಬರು ತಮ್ಮ ಮುಖ ಮೇಲೆತ್ತಿ – 'ನಿನ್ನ ಸೇವೆಯಿಂದ ನಮಗೆ ಸಂತೋಷವಾಗಿದೆ. ನಮ್ಮ ಕಂಪನಿ ನಿನ್ನ ಮುಂದಿನ ಜೀವನಕ್ಕಾಗಿ ಪ್ರತಿ ತಿಂಗಳು ಹನ್ನೆರಡು ರೂಪಾಯಿ ಪೆನಷನ್ ನೀಡುತ್ತದೆ' ಎಂದರು.

ಸಿಂಗ್ ತನ್ನ ಹಿಮ್ಮಡಿಗಳನ್ನು ಜೋಡಿಸಿ ಸೆಲ್ಯೂಟ್ ಹೊಡೆದು ತಿರುಗಿ ಸಾಹೇಬರ ರೂಮಿನಿಂದ ಹೊರನಡೆದ. ಅವನ ಹೃದಯ ಕೃತಜ್ಞತೆ ಹಾಗೂ ಹೆಮ್ಮೆಯಿಂದ ತುಂಬಿ ಬಂದಿತು. ದೊಡ್ಡ ಸಾಹೇಬರು ಅವನೊಂದಿಗೆ ಮಾತನಾಡಿದ್ದು ಇದು ಎರಡನೇ ಸಲ. ಅವನು ಸೇವೆಗೆ ಸೇರಿದ ಮೊದಲನೇ ದಿನ ಅವರು ಅವನೊಂದಿಗೆ ಮೊದಲ ಸಲ–ಮಾತನಾಡಿದ್ದರು. ಅಂದು ಅದೇ ತಾನೇ ಆಫೀಸಿನ ಒಳಗಡೆ ಬರುತ್ತಿದ್ದ ಸಾಹೇಬರು, ಎದ್ದು ನಿಂತಿದ್ದ ಅವನನ್ನು ನೋಡಿ 'ಯಾರಪ್ಪಾ ನೀನು?' ಎಂದು ಕೇಳಿದರು.

'ನಾನು ಹೊಸ ವಾಚಮನ್ ಸಾಹೇಬರೇ' ಎಂದು ಉತ್ತರಿಸಿದ್ದ . ಅನಂತರ ಅವನೊಂದಿಗೆ ಅವರು ಮಾತನಾಡಿದ್ದು ಇಂದೇ. ಸ್ವಲ್ಪೇ ಮಾತನಾಡಿದ್ದರೂ ಸಾಹೇಬರ ಮಾತಿನಿಂದ ಎರಡೂ ಸಂದರ್ಭಗಳಲ್ಲೂ ಸಿಂಗ್‌ನಲ್ಲಿ ವಿದ್ಯುತ್ ಸಂಚಾರವಾಯಿತು. ಅವನ ಕಣ್ಣಲ್ಲಿ ಅವರು ದೇವರಂತೆ ಕಂಡರು. ಮನುಷ್ಯನ ಜೀವನದಲ್ಲಿ ಅವನೊಂದಿಗೆ ದೇವರು ಮಾತನಾಡುವದು ಕೇವಲ ಒಂದು ಸಲ, ಹೆಚ್ಚೆಂದರೆ ಎರಡು ಸಲ

ಮಾತ್ರ ಅಲ್ಲವೇ? ಸಿಂಗ್‌ನ ಮನಸ್ಸಿನಲ್ಲಿ ಸಾಹೇಬರ ಮತು ಅವರ ವ್ಯಕ್ತಿತ್ವ ರಿಂಗಣಿಸುತ್ತಿದ್ದವು .

ಅವನ ಬದುಕು ಸುಗಮವಾಗಿ ಸಾಗಿತ್ತು. ಅವನ ಪಿಂಚಣಿ ಜೊತೆ ಅವನ ಹೆಂಡತಿ ಒಂದೆರಡು ಮನೆಯ ಕಸ ಬಳಿದು, ಬಟ್ಟೆ ತೊಳೆದು ಸಂಪಾದಿಸುತ್ತಿದ್ದುದು ಅವನ ಕುಟುಂಬಕ್ಕೆ ಸಾಕಾಗುತ್ತಿತ್ತು. ಮುಂಜಾನೆ ಊಟ ಮಾಡಿ, ಹೊರ ಹೋಗಿ ಕೆಲವು ಗೆಳೆಯರನ್ನು ಭೇಟಿಯಾಗಿ , ಮಧ್ಯಾಹ್ನ ಒಂದು ಸಣ್ಣ ನಿದ್ದೆ ಮಾಡಿ, ಸಾಯಂಕಾಲ ಸೋದರ ಸಂಬಂಧಿಯೊಬ್ಬರ ಬೀಡಿ ಅಂಗಡಿಯಲ್ಲಿ ಕೂಡ್ರುತ್ತಿದ್ದನು. ಅವನ ಈ ದಿನಚರಿ ಪ್ರತಿ ತಿಂಗಳು ಮೊದಲ ತಾರೀಖಿನಿಂದ ಮಾತ್ರ ಬದಲಾಗುತ್ತಿತ್ತು. ಅಂದು ಅವನು ತನ್ನ ಹಳೆಯ ಖಾಕಿ ಯುನಿಫಾರ್ಮ್ ಧರಿಸಿ, ಆಫೀಸಿಗೆ ಹೋಗಿ, ಕೌಂಟರ್‌ನಲ್ಲಿದ್ದ ಅಕೌಂಟೆಂಟನಿಗೆ ಒಂದು ಸೆಲ್ಯೂಟ್ ಹೊಡೆದು ಪಿಂಚಣಿ ತೆಗೆದುಕೊಂಡು ಬರುತ್ತಿದ್ದನು. ಕೆಲವೊಮ್ಮೆ ಆಫೀಸು ಮುಚ್ಚುವ ಹೊತ್ತಿನವರಿಗೂ ರಸ್ತೆ ಬದಿಯಲ್ಲಿ ಕಾಯ್ದು ಸಾಹೇಬರು ಕೆಳಗೆ ಬಂದು ಕಾರು ಹತ್ತುವಾಗ ಸೆಲ್ಯೂಟ್ ಹೊಡೆಯುತ್ತಿದ್ದನು.

ಅವನಿಗೆ ಈಗ ಸಾಕಷ್ಟು ಸಮಯ ಮತ್ತು ಬಿಡುವು ಇದ್ದಿತು. ಈ ಸಂದರ್ಭದಲ್ಲಿ ಜೇಡಿ ಮಣ್ಣು ಮತ್ತು ಕಟ್ಟಿಗೆಯ ಪುಡಿಯಿಂದ ಆಕರ್ಷಕ ಬೊಂಬೆಗಳನ್ನು ಮಾಡುವ ಹೊಸ ಕಲೆಯನ್ನು ಶೋಧಿಸಿದ್ದನು. ಇದು ನಡೆದದ್ದು ಆಕಸ್ಮಿಕವಾಗಿ. ಒಂದು ದಿನ ನೆರೆಮನೆಯ ಮಗು ಬಂದು ಮುರಿದ ಬೊಂಬೆಯನ್ನು ಅವನ ಬಳಿ ರಿಪೇರಿಗಾಗಿ ತಂದಿತು. ಅದನ್ನು ಅವನು ಎಷ್ಟು ಚೆನ್ನಾಗಿ ರಿಪೇರಿ ಮಾಡಿದನೆಂದರೆ ಅದು ಹೊಸ ಬೊಂಬೆಯಂತೆ ಕಾಣಿಸತೊಡಗಿತು. ಅವನ ಈ ಕಲಾಶೋಧನೆ ಅವನಿಗೆ ಎಷ್ಟು ಖುಷಿ ಕೊಟ್ಟಿತ್ತೆಂದರೆ ಅವನು ಅದರಲ್ಲಿಯೇ ಸಂಪೂರ್ಣತನ್ಮಯನಾದನು. ತನ್ನ ಮನೆಯ ಹಿತ್ತಲಿನಲ್ಲಿ ಹೇರಳವಾಗಿದ್ದ ಮೆದು ಜೇಡಿ ಮಣ್ಣು, ಸೋದರ ಸಂಬಂಧಿಯ ಬೀಡಿ ಅಂಗಡಿಯ ಆಚೆಗಿರುವ ಬಡಗಿಯ ಅಂಗಡಿಯಿಂದ ಕಟ್ಟಿಗೆಯ ಪುಡಿ, ಕೆಲವು ಆಣೆಗಳ ಬಣ್ಣ ಖರೀದಿಸಿ ಬೊಂಬೆಗಳನ್ನು ತಯಾರಿಸುವುದರಲ್ಲಿ ಮುಳುಗಿ ಹೋದನು. ವೇಳೆ ಕಳೆದಿದ್ದೇ ಗೊತ್ತಾಗಲಿಲ್ಲ .

ಮನೆಯ ಮುಂಭಾಗದ ಛಾವಣಿಯಲ್ಲಿ ಕುಳಿತು ಬೊಂಬೆಗಳನ್ನು ಮಾಡತೊಡಗಿದ. ತನ್ನ ಅದ್ಭುತ ಕೈ ಚಳಕದಿಂದ ಪುಟ್ಟ ಜಗತ್ತನ್ನು ತನ್ನ ಛಾವಣಿಯಲ್ಲಿ ನಿರ್ಮಿಸಿದ. ಜಗತ್ತಿನ ಸಕಲ ಜೀವಿಗಳು, ಎಲ್ಲ ರೂಪಗಳು, ಎಲ್ಲ ಬಣ್ಣಗಳು, ಮಧ್ಯದ ಬೆರಳುಗಾತ್ರದಲ್ಲಿ ಜೀವ ಪಡೆದುಕೊಂಡವು. ಹಳ್ಳಿಗಳು, ಪಟ್ಟಣಗಳು , ವಾಚಮನ್‌ನಾಗಿ ಆಫೀಸ್ ಮುಂದೆ ಕುಳಿತಾಗ ಅವನ ಎದುರು ಹಾಯ್ದು ಹೋದ ಮಧ್ಯಾಹ್ನ ಬರುತ್ತಿದ್ದ ಭಿಕ್ಷುಕ, ಸೌತೆಕಾಯಿ ಮಾರುವವ ಮುಂತಾದ ಎಲ್ಲರು ಜೇಡಿಮಣ್ಣಿನಲ್ಲಿ ಜೀವ ತಳೆದರು. ಪುಟ್ಟ ಜಗತ್ತೇ ಅಲ್ಲಿ ಅದ್ಭುತವಾಗಿ ಮೈ ತಳೆದಿತ್ತು ಅವನ್ನು ತೆಳುವಾದ ಕಟ್ಟಿಗೆಯ ಹಲಗೆಗೆ ಓರಣವಾಗಿ ಅಂಟಿಸಿದ್ದರಿಂದ ಅದರ

ಆಕರ್ಷಣೆ ಇನ್ನೂ ವೃದ್ಧಿಸಿತ್ತು. ತನ್ನ ಈ ಕೃತಿಗಳನ್ನು ಸೋದರ ಸಂಬಂಧಿಯ ಬೀಡಿ ಅಂಗಡಿಯಲ್ಲಿ ಒಯ್ದು ಮಾರಾಟಕ್ಕಿಟ್ಟನು. ಹೆಚ್ಚು ಜನರನ್ನು ಆಕರ್ಷಿಸುವಲ್ಲಿ ಯಶಸ್ವಿಯಾದ ಕಲಾಕೃತಿಗಳು ಬೇಗನೆ ಬಿಕರಿಯಾದವು. ಸುತ್ತಲೂ ಸೇರಿದ ಜನ ಆತನ ಕರಕೌಶಲವನ್ನು ಮೆಚ್ಚಿ ಹೊಗಳಿದ್ದು ಆತನಿಗೆ ಹೆಚ್ಚು ಆನಂದವನ್ನುಂಟು ಮಾಡಿತು.

ಮುಂದಿನ ಪಿಂಚಣಿ ದಿನ ತನಗೆ ಅತ್ಯುತ್ತಮವೆನಿಸಿದ ರಸ್ತೆ ದೃಶ್ಯವನ್ನು ತನ್ನ ಆಫೀಸಿಗೆ ಒಯ್ದನು. ಕೌಂಟರಿನಲ್ಲಿದ್ದ ಅಕೌಂಟೆಂಟನಿಗೆ ಅದನ್ನು ಕೊಡುತ್ತ 'ದಯಮಾಡಿ ಇದನ್ನು ಸಾಹೇಬರಿಗೆ ಕೊಡಿರಿ' ಎಂದು ವಿನಂತಿಸಿಕೊಂಡನು. 'ಆಗಲಿ, ಕೊಡುವೆ' ಎಂದನು ಅಕೌಂಟೆಂಟ್ ಮುಗುಳ್ನಗುತ್ತ.

ಅದನ್ನು ನೋಡಿದ ಆಫೀಸ್ ಸಿಬ್ಬಂದಿಯಲ್ಲಿ ಒಂದು ಹೊಸ ಸಂವೇದನೆ ಸಂಚರಿಸಿ ದೈನಂದಿನ ಆಫೀಸುಕೆಲಸಕ್ಕೆ ಸುಮಾರು ಅರ್ಧಘಂಟೆ ಅಡಚಣೆಯುಂಟಾಯಿತು. ಅದರ ಮುಂದಿನ ಪಿಂಚಣಿ ದಿನದಂದು, ಆಡುತ್ತಿರುವ ಮಕ್ಕಳ ಮತ್ತೊಂದು ಮಾದರಿಯನ್ನು ಆಫೀಸಿಗೆ ಒಯ್ದು ಕೌಂಟರಿನಲ್ಲಿಟ್ಟು "ಕಳೆದ ಬಾರಿ ಕೊಟ್ಟದ್ದು" ಸಾಹೇಬರಿಗೆ ಮೆಚ್ಚಿಗೆಯಾಯಿತೆ? ಆಕೌಂಟನನ್ನು ವಿಚಾರಿಸಿದ. 'ಹೌದು. ಸಾಹೇಬರು ಮೆಚ್ಚಿಕೊಂಡರು' ಎಂದನು .

'ದಯಮಾಡಿ ಇದೂ ಒಂದನ್ನು ಅವರಿಗೆ ಕೊಡಿರಿ' ಎಂದು ಕೌಂಟರಿನ ಮೇಲೆ ಹಾಯಿಸಿಕೊಟ್ಟನು. ಪ್ರತಿ ತಿಂಗಳು ಪಿಂಚಣಿ ದಿನದಂದು ತನ್ನ ಒಂದು ಕೃತಿಯನ್ನು ಸಾಹೇಬರಿಗೆ ಕೊಡುವುದನ್ನು ಒಂದು ರಿವಾಜು ಮಾಡಿಕೊಂಡನು. ಪ್ರತಿ ಸಲ ಕೊಡುವಾಗ ಅಕೌಂಟೆಂಟನನ್ನು 'ಸಾಹೇಬರು ಏನೆಂದರು?' ಎಂದು ಕೇಳುವದು. ಅವನು 'ಬಹಳ ಚೆನ್ನಾಗಿದೆ ಎಂದರು' ಎಂದು ಹೇಳುವದು ಒಂದು ವಾಡಿಕೆಯಾಯಿತು. ಕೊನೆಗೆ ಅವನು ತನ್ನ ಶ್ರೇಷ್ಠಕೃತಿ–ತನ್ನ ಆಫೀಸಿನ ಮುಂಭಾಗ–ರಚಿಸಿದನು. ಅಲ್ಲಿ ಸ್ಟೂಲಿನ ಮೇಲೆ ಕುಳಿತಿದ್ದ ತನ್ನನ್ನು, ಪ್ರವೇಶದ್ವಾರವಲ್ಲಿ ನಿಂತ ಕಾರು, ಅದರಿಂದ ಇಳಿಯುತ್ತಿದ್ದ ಸಾಹೇಬರನ್ನು ರಚಿಸಿದನು. ಹೀಗೆ ಸಮ್ಮಿಲಿತಗೊಂಡ ಕೃತಿ ತುಂಬಾ ನೈಜವಾಗಿತ್ತು. ತದೇಕಚಿತ್ತದಿಂದ ಅದನ್ನು ನೋಡುತ್ತ ಕುಳಿತಾಗ ಅವನ ಸ್ಮೃತಿಪಟಲದಲ್ಲಿ ಆಫೀಸಿನ ಹಿಂದಿನ ದಿನಗಳ ನೆನಪು ಮರುಕಳಿಸಿತು. ಪಿಂಚಣಿಯ ದಿನ ಅದನ್ನು ಕೌಂಟರಿನಲ್ಲಿ ಕೊಟ್ಟನು. ನೋಡಿದ ಆಫೀಸಿನ ಸಿಬ್ಬಂದಿಯಲ್ಲಿ ಅದು ಒಂದು ಅದ್ಭುತ ಸಂಚಾರವನ್ನು ಹುಟ್ಟುಹಾಕಿತು. ಸಿಬ್ಬಂದಿ 'ಬೆರಿಕಿ, ತನ್ನನ್ನು ಮರೆತಿಲ್ಲಾ' ಎನ್ನುತ್ತ ಅವನ ಕಡೆ ಮೆಚ್ಚುಗೆಯ ನೋಟ ಬೀರಿದರು. ತಕ್ಷಣ ಭಯಭೀತಿಗೊಂಡ ಸಿಂಗ್ 'ಸಾಹೇಬರು ಸಿಟ್ಟಾಗಲಿಕ್ಕಿಲ್ಲ ಅಲ್ಲವೇ?' ಎಂದು ಕೇಳಿದ. 'ಇಲ್ಲಪ್ಪ, ಅವರೇಕೆ ಸಿಟ್ಟಿಗೇಳುತ್ತಾರೆ?' ಎಂದ ಅಕೌಂಟೆಂಟನಿಂದ ಪಿಂಚಣಿ ಪಡೆದು ಮನೆಗೆ ನಡೆದ .

ಒಂದು ವಾರದ ನಂತರ ಒಂದು ದಿನ ಸಿಂಗ್ ಜೇಡಿಮಣ್ಣನ್ನು ಹದಗೊಳಿಸುತ್ತ ಕುಳಿತಾಗ ಪೋಸ್ಟ್‌ಮನ್ ಬಂದು 'ನಿಮಗೆ ಒಂದು ರಜಿಸ್ಟರ್ಡ್

ಲಕೋಟೆ ಬಂದಿದೆ' ಎಂದನು. 'ನನಗೆ' ಯಾವುದೇ ಪತ್ರ ಸಿಂಗ್‌ನನ್ನು ಗಲಿಬಿಲಿಗೊಳಿಸುತ್ತಿತ್ತು. ತನ್ನ ಜೀವಮಾನವಿಡೀ ಅವನಿಗೆ ಮೂರಕ್ಕಿಂತ ಕಡಿಮೆ ಪತ್ರಗಳು ಬಂದಿದ್ದವು. ಪ್ರತಿ ಪತ್ರವು ಓದುವವರೆಗೂ ಅವನಿಗೆ ಹಿಂಸೆಯನ್ನು ಕೊಟ್ಟಿದ್ದವು. ಹೀಗಿರುವಾಗ ಈಗ ರಜಿಸ್ಟರ್ಡ್ ಪತ್ರ ಬಂದಿದೆ. ಇದು ಅವನಿಗೆ ಬಂದ ಮೊದಲ ರಜಿಸ್ಟರ್ಡ್ ಪತ್ರ

'ವಕೀಲರು ಮಾತ್ರ ರಜಿಸ್ಟರ್ಡ್ ಪತ್ರ ಕಳಿಸುತ್ತಾರಲ್ಲವೆ?' ಪೋಸ್ಟ್‌ಮನ್‌ನನ್ನು ಕೇಳಿದ.

'ಬಹುತೇಕ' ಪೋಸ್ಟ್‌ಮನ್ ಎಂದ.

'ದಯಮಾಡಿ ಇದನ್ನು ವಾಪಸು ತೆಗೆದುಕೊಳ್ಳಿರಿ. ನಾನೊಲ್ಲೆ' ಎಂದ . 'ಸ್ವೀಕರಿಸಲಿಲ್ಲ ಎಂದು ಬರೆಯಲೆ?' ಪೋಸ್ಟಮನ್ ಕೇಳಿದಾಗ 'ಬೇಡ, ಬೇಡ. ಹಾಗೇ ಹಿಂದಕ್ಕೆ ತೆಗೆದುಕೊಳ್ಳಿರಿ. ನಾನು ಸಿಗಲಿಲ್ಲ ಎಂದು ಹೇಳಿಬಿಡಿರಿ' ಎಂದ. ಈಗ ತುಸು ಗಂಭೀರನಾದ ಪೋಸ್ಟ್‌ಮನ್ 'ನಾನು ಹಾಗೆ ಮಾಡಲಾರೆ' ಎಂದನು.

ಸಿಂಗ್‌ನಿಗೆ ಈಗ ಬೇರೆ ದಾರಿಯೇ ಉಳಿಯಲಿಲ್ಲ. ಸಹಿಯನ್ನು ಗೀಚಿ ಲಕೋಟೆ ತೆಗೆದುಕೊಂಡ. ಮಂಕು ಬಡಿದಂತಾಗಿ ನೆಲವನ್ನೇ ದಿಟ್ಟಿಸುತ್ತ ಕುಳಿತ. ಹೊರಗಿನಿಂದ ಬಂದ ಅವನ ಹೆಂಡತಿ ಅವನ ಸ್ಥಿತಿಯನ್ನು ನೋಡಿ ಕೇಳಿದಳು.

'ಏನಿದು?'

'ನೋಡು ಇದು ಬಂದಿದೆ' ಉಸಿರು ಗಂಟಲಲ್ಲಿ ಸಿಕ್ಕಿಕೊಂಡಿತು. ರಜಿಸ್ಟರ್ಡ್ ಪತ್ರವನ್ನು ಅವಳ ಕಡೆಗೆ ಎಸೆದನು.

'ಏನಿದು?' ಅವಳು ಕೇಳಿದಳು.

'ನನಗೇನು ಗೊತ್ತು! ಬಹುತೇಕ ನಮ್ಮನ್ನು ಹಾಳು ಮಾಡಲು ಬಂದಿದೆ' ಎನ್ನುತ್ತ ಕುಸಿದು ಕುಳಿತನು.

ಒಂದು ಕ್ಷಣ ಅವನನ್ನು ನೋಡಿ ಮನೆಕೆಲಸ ಮಾಡಲು ಒಳಗೆ ನಡೆದಳು. ಸ್ವಲ್ಪ ಸಮಯದ ನಂತರ ಮತ್ತೆ ಹೊರಬಂದು ನೋಡಿದಳು ಅವನು ಅದೇ ಸ್ಥಿತಿಯಲ್ಲಿ ಕುಳಿತಿದ್ದನು.

'ಅದನ್ನು ಒಡೆದು ಯಾಕೆ ನೋಡಬಾರದು? ಬೇರೆ ಯಾರಿಗಾದರೂ ತೋರಿಸಿ ಓದಿಸಬಾರದು?' ಕೇಳಿದಳು. ಭಯದಿಂದ ತನ್ನ ತೋಳುಗಳನ್ನು ಮೇಲಕ್ಕೆ ಹಾರಿಸಿ 'ಹೆಣ್ಣೇ ನೀನು ಏನು ಹೇಳುತ್ತಿರುವೆ ಎನ್ನುವದು ನಿನಗೆ ಗೊತ್ತಿಲ್ಲ. ಇದನ್ನು ಒಡೆಯಲಾಗದು. ಅವರು ನನ್ನ ಪೆನ್‌ಶನ್ ನಿಲ್ಲಿಸಿದ್ದೇವೆ ಎಂದು ಬರೆದರೆ ಏನು ಮಾಡುವೆ? ಆ ಸಾಹೇಬರು ಮತ್ತೇನು ಬರೆದಿರುವರೋ ಆ ದೇವರೇ ಬಲ್ಲ' ಎಂದನು.

'ನೀವೇ ಆಫೀಸಿಗೆ ಹೋಗಿ ವಿಷಯ ಕೇಳಿಕೊಂಡು ಬರಬಹುದಲ್ಲ' ಎಂದಳು.

'ನಾನು ಹೋಗುವುದಿಲ್ಲ! ಮತ್ತೊಮ್ಮೆ ನಾನು ಅಲ್ಲಿ ನನ್ನ ಮುಖವನ್ನು ತೋರಿಸಲಾರೆ. ನನ್ನ ಜೀವನ ಪರ್ಯಂತ ನನ್ನ ವಿರುದ್ಧ ಒಂದೂ ಕಪ್ಪುಚುಕ್ಕೆ ಇಲ್ಲದೇ ಬಾಳಿದವ

ನಾನು. ಅಂತಾದ್ದರಲ್ಲಿ ಈ ಮುಖ ಹೊತ್ತಿಕೊಂಡು ಈಗ....ಛೇ;ಛೇ ಸಾಧ್ಯವಿಲ್ಲ' ಆಫೀಸಿಗೆ ಹೋಗುವ ವಿಚಾರದಿಂದಾಗಿ ಒಮ್ಮೆ ನಡುಗಿದ. 'ಆಫೀಸಿನ ಮಾಡೆಲ್ ಮಾಡಿದಾಗಲೇ ನನಗೆ ಅನಿಸಿತ್ತು. ನಾನು ತೊಂದರೆಯಲ್ಲಿ ಸಿಲುಕುತ್ತೇನೆ ಎಂದು ಗಹನವಾಗಿ ನೆನಪಿಸಿಕೊಂಡು ಹೇಳಿದ.' ಪ್ರತಿಸಲ ಅಲ್ಲಿಗೆ ಹೋದಾಗ ಏನನ್ನಾದರೂ ತೆಗೆದುಕೊಂಡು ಹೋಗುತ್ತಿದ್ದೆ. ನನ್ನ ಸುತ್ತ ಜನಜಾತ್ರೆ ಸೇರುತ್ತಿತ್ತು. ಆಫೀಸ್-ಕೆಲಸ ಸುಮಾರು ಒಂದು ತಾಸು ನಿಂತುಬಿಡುತ್ತಿತ್ತು .... ಈ ವಿಷಯ ಸಾಹೇಬರ ಕಿವಿಮೇಲೆ ಬಿದ್ದಿರಬಹುದು.

ಲಕೋಟೆಯನ್ನು ತನ್ನ ಜೇಬಿನಲ್ಲಿಟ್ಟುಕೊಂಡು ಹೇಳಿದ ಮಾತನ್ನೇ ಮತ್ತೆ ಮತ್ತೆ ಹೇಳುತ್ತ ಅತ್ತಿತ್ತ ತಿರುಗಾಡಿದ. ಅನ್ನ ರುಚಿಸುತ್ತಿಲ್ಲ, ಹಸಿವು ಆಗುತ್ತಿಲ್ಲ, ಕೆದರಿದ ತಲೆಗೂದಲು ಮೇಲಕ್ಕೆದ್ದು ನಿಂತು ತಲೆಯ ಸುತ್ತ ಪ್ರಭಾವಲಯದಂತೆ ಕಾಣುತ್ತಿತ್ತು. ಬಹಳ ದಿನಗಳ ಮಿಲಿಟರಿ ಸೇವೆಯಿಂದಾಗಿ ಅಚ್ಚುಕಟ್ಟುತನ ಅವನಲ್ಲಿ ಮನೆಮಾಡಿತ್ತು. ಅವನ ಇಂದಿನ ಸ್ಥಿತಿ ಮಾತ್ರ ವ್ಯತಿರಿಕ್ತವಾಗಿತ್ತು. ಅವನ ಹೆಂಡತಿ ತನ್ನ ಮನಶ್ಶಾಂತಿ ಕಳೆದುಕೊಂಡು ಅವನ ಸ್ಥಿತಿಯ ಬಗ್ಗೆ ಮರುಗಿದಳು. ಕೈಯಲ್ಲಿ ಲಕೋಟೆ ತೆಗೆದುಕೊಂಡು ನಾಲ್ಕು ರಸ್ತೆ ಕೂಡುವಲ್ಲಿ ನಿಂತು, ಕಣ್ಣಿಗೆ ಬಿದ್ದ ಪ್ರತಿಯೊಬ್ಬರನ್ನು ಕೇಳುತ್ತಿದ್ದ. 'ದಯಮಾಡಿ ಇದರಲ್ಲಿ ಏನಿದೆ, 'ಹೇಳಿ?' ತೆಗೆದುನೋಡು. ಏನಿದೆ ಎಂಬುದು ತಿಳಿಯುತ್ತದೆ' ಎಂಬ ಅವರ ಸಲಹೆಯನ್ನು ಮಾತ್ರ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಕೊನೆಗೆ ಸಿಂಗ್ ರೇಸ್‌ಕೋರ್ಸ್ ರಸ್ತೆಯಲ್ಲಿರುವ ಸಿಟಿ ಎಕ್ಸರೇ ಇನ್‌ಸ್ಟಿಟ್ಯೂಟ್ ಕಡೆಗೆ ನಡೆದ. ಗೇಟನ್ನು ಗಮನಿಸಿದ. ಗೇಟಿನಲ್ಲಿ ಒಬ್ಬ ಗೂರ್ಖಾ ನಿಂತಿದ್ದನು. ಸೋಫಾದ ಮೇಲೆ ಕುಳಿತ ಕೆಲವು ಜನ ಪುಸ್ತಕ, ಪತ್ರಿಕೆಗಳನ್ನು ಓದುತ್ತಿದ್ದರು. ಅವರು ಮುಖ ತಿರುಗಿಸಿ ಇವನೆಡೆ ಕೀಳ್ನೋಟ ಬೀರಿ ಮತ್ತೆ ಓದಿನಲ್ಲಿ ಮುಳುಗಿದರು. ಅತ್ತಿತ್ತ ನೋಡುತ್ತ ಸಿಂಗ್ ಹಾದಿಗೆ ಅಡ್ಡಲಾಗಿ ನಿಂತಾಗ ಒಬ್ಬ ಅಸಿಸ್ಟಂಟ್ ಬಂದು ಕೇಳಿದ 'ನಿನಗೇನು ಬೇಕಿತ್ತು?'

ಸಿಂಗ್ ಅವನಿಗೊಂದು ಸೆಲ್ಯೂಟ್ ಹೊಡೆದು ಸಂಶಯದಿಂದ ಲಕೋಟೆ ಮೇಲೆತ್ತಿ ಗೊಣಗಿದ! 'ಈ ಲಕೋಟೆಯಲ್ಲೇನಿದೆ ಎಂದು ತಿಳಿಸುವಿರಾ?' ಅವನೂ ಕೂಡ ಈ ಹಿಂದೆ ಹಲವರೂ ಹೇಳಿದ್ದನ್ನೇ ಸ್ಪಷ್ಟವಾಗಿ ಹೇಳಿದ. ಆಗ ಸಿಂಗ್ ' ಮತ್ತೇ ಅವರು ನೀವು ಇದನ್ನು ತೆಗೆಯಲಾರದೇ ಹೇಳಬಲ್ಲರು ಎಂದರು' ಎಂದನು.

ಅಸಿಸ್ಟಂಟ್ 'ನಿಮ್ಮದು ಯಾವೂರು?' ಎಂದು ಕೇಳಿದ. ಸಿಂಗ್ ತನ್ನ ಊರು, ಬದುಕು, ಮನೋಭಾವಗಳ ಬಗ್ಗೆ ಹೇಳಿ 'ನನ್ನ ಬದುಕಿನುದ್ದಕ್ಕೂ ಒಂದೂ ಕಪ್ಪುಚುಕ್ಕೆ ಯಿಲ್ಲದೇ ಬಾಳಿದವ ನಾನು. ಆದರೆ ಈಗ ತೊಂದರೆ ಬರುತ್ತಿದೆ ಎಂದು ನನಗೆ ಗೊತ್ತೆ ಎಂದು ಮಾತು ಮುಗಿಸುತ್ತಿದ್ದಂತೆ ಅವನ ಕಪೋಲದ ಮೇಲೆ ಕಣ್ಣೀರು ಸುರಿದವು. ಅಸಿಸ್ಟಂಟ್ ಈ ಮುಂಚಿನ ಹಲವರಂತೆ ಅವನೆಡೆ ಆಶ್ಚರ್ಯದಿಂದ

ಕೆಸರು ಸಿಡಿದಿತ್ತು. ಉಲ್ಲಾಸದಿಂದ. ಉಸಿರುಗಟ್ಟಿದಂತಾಗಿ ಅವನಿಗೆ ತಕ್ಷಣ ಉತ್ತರಿಸಲಾಗಲಿಲ್ಲ. ಸ್ವಲ್ಪ ಸಮಯದ ನಂತರ 'ಭ್ರಮೆ, ನಾನು ಹುಚ್ಚ!' ಎಂದನು.

ಮನೆಯ ಮೂಲೆಯಲ್ಲಿದ್ದ ತನ್ನ ಬುಟ್ಟಿಯ ಕಡೆಗೆ ನೋಡಿದ . ಅದರಲ್ಲಿಯ ಹದ ಮಾಡಿದ ಮಣ್ಣನ್ನು ತೆಗೆದು, ಅದರಿಂದ ಒಂದು ಹೆಲ್ಮೆಟ್ಟು ಮಾಡಿ, ಅದನ್ನು ತನ್ನ ತಲೆಯ ಮೇಲಿಟ್ಟುಕೊಂಡ. ನೆಲದ ಮೇಲೆ ಅವನ ಇತ್ತೀಚಿನ ಕಲಾಕೃತಿ ಜೋಡಿಸಿಡಲಾಗಿತ್ತು. ಕೊನೆ ಸಲ ಆಫೀಸಿಗೆ ಭೇಟಿ ಕೊಟ್ಟಾಗಿನಿಂದ ಅವನು ಒಂದು ಹಳ್ಳಿಯ ಮಾದರಿಯನ್ನು ಮಾಡುವುದರಲ್ಲಿ ನಿರತನಾಗಿದ್ದ. ಅದೊಂದು ಭವ್ಯ ಕೃತಿಯಾಗಿತ್ತು. ಧೂಳುತುಂಬಿದ ಕಚ್ಚಾ ರಸ್ತೆ, ಕೆಂಪುಹಂಚುಗಳು, ಜೋಲಾಡುವ ಹಸಿರು ತೆಂಗಿನ ಗಿಡಗಳು, ನೀರಿನ ಕೊಡಗಳನ್ನು ಹೊತ್ತ ಹಳ್ಳಿಯ ಹೆಣ್ಣು ಮಕ್ಕಳು, ಅವರುಟ್ಟುಕೊಂಡ ಬಣ್ಣದ ಸೀರೆಗಳು, ಎಲ್ಲವೂ ಅದ್ಭುತವಾಗಿದ್ದವು. ಅವನು ಹಳ್ಳಿಯಲ್ಲಿದ್ದಾಗಿನ ತನ್ನ ನೆನಪುಗಳಿಂದ ಈ ಕೃತಿಗೆ ಸ್ಫೂರ್ತಿ ಪಡೆದಿದ್ದ. ಇಲ್ಲಿಯವರೆಗೂ ಮಾಡಿದ ಎಲ್ಲ ಕೃತಿಗಳಲ್ಲಿ ಅತಿ ಹೆಚ್ಚು ಆನಂದಿಸಬಹುದಾದ ಕೃತಿ ಇದಾಗಿತ್ತು. ಅದನ್ನು ತಯಾರಿಸುವಾಗ ಒಂದು ರೀತಿಯ ಆನಂದದ ಅನುಭೂತಿ ಅವನಲ್ಲಾಗಿತ್ತು. 'ಇದನ್ನು ನಾನು ಯಾರಿಗೂ ಕೊಡದೆ, ನನ್ನ ತಂದೆಯ ಸವಿ ನೆನಪಿಗಾಗಿ ಇಟ್ಟುಕೊಳ್ಳುತ್ತೇನೆ. ಇದನ್ನು ಪ್ರದರ್ಶನದಲ್ಲಿಡುವೆ. ಅವರು ನನಗೆ ಮೆಡಲ್ ಕೊಡುವರು' ಎಂದುಕೊಂಡನು. ಅದನ್ನು ನಿಧಿಯಂತೆ ಕಾಯುತ್ತಿದ್ದನು. ಅದು ಹಸಿ ಇದ್ದಾಗ ಅದರಿಂದ ಹತ್ತು ಯಾರ್ಡ್ ಒಳಗೆ ತನ್ನ ಹೆಂಡತಿಗೆ ಅಡ್ಡಾಡಲು ಅವಕಾಶ ಕೊಡಲಿಲ್ಲ. 'ದೂರ ಸರಿ. ನಿನ್ನ ಕಾಲ ಧೂಳು ಈ ಹಳ್ಳಿಯ ಮೇಲೆ ಬೀಳಬಾರದು' ಎನ್ನುತ್ತಿದ್ದನು.

ಈಗ ಹುಚ್ಚಿನ ಭ್ರಮೆಯಲ್ಲಿ ಆ ಕೃತಿಯನ್ನು ನೋಡಿದನು. ಕಾಲನ್ನು ಎತ್ತಿ ಹಲವು ಬಣ್ಣಗಳ ಪಾಕದ ಮೇಲೆ ಒತ್ತಿದನು. ಅವು ಇನ್ನೂ ಅರೆ ಹಸಿ ಯಾಗಿದ್ದವು. ಓಣಿಯಲ್ಲಿ ಮೇಯುತ್ತಿದ್ದ ಕತ್ತೆಯೊಂದು ಕಣ್ಣಿಗೆ ಬಿತ್ತು. ಪಾಕವನ್ನೆತ್ತಿ ಕತ್ತೆಯ ಕಡೆಗೆ ಎಸೆಯುತ್ತ 'ಬೇಕಿದ್ದರೆ ಇದನ್ನು ತಿನ್ನು, ಇದು ಒಂದು ಒಳ್ಳೆಯ ಹಳ್ಳಿ.' ಎಂದನು. ಎರಡನೇ ಸಲ ಮನೆಯಿಂದ ಹೊರ ನಡೆದ. ಈಗ ಶಾಂತನಾಗಿದ್ದ. ದೀರ್ಘವಾಗಿ ಉಸಿರಾಡುತ್ತಿದ್ದ. ತಲೆಯಲ್ಲಿರುವ ಬಿಳಿ ಕೂದಲೂ ಮಣ್ಣಿನ ಹೆಲ್ಮೆಟ್ಟಿನಿಂದ ಹೊರಗೆ ಇಣುಕುತ್ತಿದ್ದವು. ಎರಡೂ ಕೈಗಳನ್ನು ಹಿಂದೆ ಕಟ್ಟಿಕೊಂಡು, ಅವನ ಈ ಸ್ಥಿತಿಗೆ ಕಾರಣವಾದ ಲಕೋಟೆಯನ್ನು ಬೆರಳಲ್ಲಿ ಗಟ್ಟಿಯಾಗಿ ಹಿಡಿದುಕೊಂಡು. ಮುಖವನ್ನು ಆಕಾಶದ ಕಡೆಗೆತ್ತಿ ಮಾರ್ಕೆಟ್ ರಸ್ತೆಯ ಕಡೆಗೆ ದಾಪುಗಾಲು ಹಾಕಿದ. ಇಡೀ ಭೂಮಂಡಲದ ಮೇಲೆ ತಾನೊಬ್ಬನೆ ಇರುವುದು ಎಂದುಕೊಂಡ. ಅವನ ಹುಚ್ಚು ಅವನಿಗೆ ಮಿತಿ ಮೀರಿದ ಸ್ವಾತಂತ್ರ್ಯ, ಶಕ್ತಿ, ಸಂತೋಷವನ್ನು ಕೊಟ್ಟಿತ್ತು, ಸುತ್ತಲಿನ ಜನರು ಅವನನ್ನು ನೋಡಿ ವ್ಯಕ್ತಪಡಿಸಿದ ಅಭಿಪ್ರಾಯಗಳಾಗಲೀ, ಅಪಹಾಸ್ಯವಾಗಲೀ ಅವನ ಮೇಲೆ ಎಳ್ಳಷ್ಟೂ ಪರಿಣಾಮ ಬೀರಲಿಲ್ಲ.

ಈ ರೀತಿ ನಡೆಯುತ್ತಿದ್ದಾಗ ಅವನ ದೃಷ್ಟಿ ಎತ್ತರವಾದ ದಾರಿದೀಪದ ಕಂಬದಲ್ಲಿದ್ದ ಬಲ್ಬಿನ ಮೇಲೆ ಬಿತ್ತು. 'ಪಪಾಯಿ ಹಣ್ಣಿನ ಸೈಜಿನ ಬಲ್ಬು!' ಒಳಗೊಳಗೆ ಖುಷಿ ಪಡುತ್ತ ಗೊಣಗಿಕೊಂಡ. ಅದಕ್ಕೆ ಒಂದು ಕಲ್ಲು ಹೊಡೆಯಬೇಕೆಂಬುದು ಅವನ ಬಹಳ ದಿನಗಳ ಬಯಕೆಯಾಗಿತ್ತು. ಸಾಂಪ್ರದಾಯಿಕ ಅಡ್ಡಿ, ಆತಂಕದಿಂದ ಈಗ ಮುಕ್ತವಾಗಿದ್ದು, ಸಂತೋಷದ ಸ್ಥಿತಿಯಲ್ಲಿ ಯಾವುದೇ ಬಯಕೆಯನ್ನು ಹಿಂದಕ್ಕೆ ತಳ್ಳಬಾರದು ಎಂದುಕೊಂಡನು. ಒಂದು ಬೆಣಚುಗಲ್ಲು ಎತ್ತಿಕೊಂಡು ಗುರಿ ಇಟ್ಟು ಬಲ್ಬಿಗೆ ಎಸೆದನು. ಅದು ಒಡೆದ ಸದ್ದು ಆತನಿಗೆ ಸಂಗೀತದಂತೆ ಕೇಳಿತು. ಇದನ್ನು ನೋಡಿದ ಪೊಲೀಸ್ ಅವನ ಭುಜದ ಮೇಲೆ ಕೈ ಇಟ್ಟು 'ಇದನ್ನೇಕೆ ಒಡೆದೆ?' ಎಂದು ಕೇಳಿದ.

ಸಿಂಗ್ ಅವನನ್ನು ಕೆಕ್ಕರಿಸಿ ನೋಡಿ 'ನಾನು ಗಾಜಿನ ಪಪಾಯಿ ಒಡೆಯುವುದನ್ನು ಇಷ್ಟಪಡುತ್ತೇನೆ ! ಎಂದ. 'ಸ್ಟೇಷನ್‌ಗೆ ನಡೆ' ಪೊಲೀಸ್ ದಬಾಯಿಸಿದ. 'ಓಹೊ, ನಾನು ಮೆಸೊಪೊಟೇಮಿಯಾದಲ್ಲಿದ್ದಾಗ ಅವರು ನನ್ನನ್ನು ಅರೆ ಹೊಟ್ಟೆಯಲ್ಲಿಟ್ಟಿದ್ದರು' ಎನ್ನುತ್ತ ಸ್ಟೇಶನ್ ಕಡೆ ನಡೆದ. ಗಕ್ಕನೆ ನಿಂತು, ತಲೆಯನ್ನು ವಾಲಿಸಿ ನೋಡಿ 'ರಸ್ತೆ ನೇರವಾಗಿಲ್ಲ' ಎಂದನು. ಅವನ ಕಡೆ ಬರುತ್ತಿದ್ದ ಗಾಡಿಗಳು ಮತ್ತು ಸೈಕಲ್ಲುಗಳಲ್ಲಿ ಎಲ್ಲ ತೊಂದರೆ ಇವೆ ಎಂದುಕೊಂಡ. ಅವುಗಳಿಗೆ ಮಾರ್ಗದರ್ಶನದ ಅವಶ್ಯಕತೆ ಇದೆ ಎನಿಸಿತು. ಮಾರ್ಗಮಧ್ಯ ನಿಂತು ಕೈಗಳನ್ನು ಚಾಚಿ 'ನಿಲ್ಲಿ' ಎಂದು ಕೂಗಿದ. ಗಾಡಿಗಳು ನಿಂತವು. ಸೈಕಲ್ ಸವಾರರು ಸೈಕಲ್‌ಗಳಿಂದ ಕೆಳಗಿಳಿದರು. ಆಗ ಸಿಂಗ್ ಭಾಷಣ ಸುರು ಮಾಡಿದ– 'ನಾನು ಮೆಸೊಪೊಟೇಮಿಯಾ ದಲ್ಲಿದ್ದಾಗ, ನಿಮಗೆ ಹೇಳುತ್ತೇನೆ . ನಿಮಗೆ ಯಾವುದರ ಬಗ್ಗೆಯೂ ಏನೂ ಗೊತ್ತಿಲ್ಲ. ಪೊಲೀಸ್ ಅವನನ್ನು ರಸ್ತೆಯ ಬದಿಗೆ ಎಳೆದೊಯ್ದು, ಸಂಚಾರ ಸುರುವಾಗುವಂತೆ ಕೈ ಬೀಸಿದ. ಸೈಕಲ್ ಮೇಲೆ ಹೊರಟಿದ್ದವರಲ್ಲಿ ಒಬ್ಬ ಪುನಃ ಸೈಕಲ್ ಸೀಟಿನಿಂದ ಜಿಗಿದು, ಅವನೆಡೆಗೆ ಬಂದು, 'ಅರೆ, ಇವನು ಸಿಂಗ್! ಏ ಸಿಂಗ್, ಇದೇನು ನಿನ್ನ ಮೋಜಿನ ಉಡುಗೆ? ಏನು ಸಮಾಚಾರ?' ತನ್ನ ಹುಚ್ಚು ನೋಟದಿಂದ ಅವನ ಧ್ವನಿಯಿಂದ ಅವನು ಆಫೀಸಿನ ಅಕೌಂಟಂಟ್ ಎಂದು ಗುರುತಿಸಿದ. ಹಿಮ್ಮಡ ಜೋಡಿಸಿ ಒಂದು ಸೆಲ್ಯೂಟ್ ಹೊಡೆದ. 'ಕ್ಷಮಿಸಿ ಸಾರ್, ನಿಮ್ಮನ್ನು ನಿಲ್ಲಿಸಬೇಕೆಂಬ ಉದ್ದೇಶ ನನಗಿರಲಿಲ್ಲ. ನೀವು ಹೋಗಿ ಸಾರ್...' ಎನ್ನುತ್ತ ಕೈಯಿಂದ ದಾರಿ ತೋರಿಸಿದ. ಅವನ ಕೈಯಲ್ಲಿಯ ಲಕೋಟೆ ಕೆಸರು ಮೆತ್ತಿ, ಮುದ್ದೆಯಾಗಿದ್ದರೂ ಅಕೌಂಟೆಂಟ್ ಅದನ್ನು ಗುರುತು ಹಿಡಿದ. 'ಸಿಂಗ್ ನಿನಗೆ ನಮ್ಮ ಪತ್ರ ತಲುಪಿತೆ?' ಕೇಳಿದ. 'ಹೌದು ಸಾರ್, ನೀವು ಹೋಗಿ ಸಾರ್, ಆ ಪತ್ರದ ಸುದ್ದಿ ಎತ್ತಬೇಡಿ...ಎಂದ. 'ಏನು ವಿಷಯ?' ಸಿಂಗನ ಕೈಯಿಂದ ಪತ್ರ ಕಸಿದುಕೊಂಡು 'ಇದನ್ನು ಯಾಕೆ ಒಡೆದಿಲ್ಲ !' ಆಶ್ಚರ್ಯದಿಂದ ಕೇಳಿದ. ಆ ಲಕೋಟೆಯನ್ನು ಹರಿದು, ಅದರಲ್ಲಿದ್ದ ಪತ್ರ ಹೊರ ತೆಗೆದು 'ನಮ್ಮ ಜನರಲ್

ಮ್ಯಾನೆಜರ್ ಸಾಹೇಬರು ನೀನು ಕಳಿಸಿದ ಕಲಾತ್ಮಕ ಮಾದರಿಗಳನ್ನು ಮೆಚ್ಚಿ ತುಂಬಾ ಶ್ಲಾಘಿಸಿದ್ದಾರೆ. ಪ್ರತಿಫಲವಾಗಿ ರೂ.100 ಭಕ್ಷೀಸನ್ನು ನಿನಗೆ ಸಂತೋಷದಿಂದ ನೀಡಿದ್ದಾರೆ. ಈ ಭಕ್ಷೀಸು ನೀನು ನಿನ್ನ ಕಲೆಯ ಹವ್ಯಾಸವನ್ನು ಮುಂದುವರಿಸಿಕೊಂಡು ಹೋಗುವದರಲ್ಲಿ ಪ್ರೇರಕವಾಗಲಿ ಎಂದು ಹಾರೈಸಿದ್ದಾರೆ' ಗಟ್ಟಿಯಾಗಿ ಓದಿದರು.

ಪ್ರತಿ ಶಬ್ದವನ್ನು ಸಿಂಗನಿಗೆ ವಿವರಿಸಿ ತಿಳಿಸಿದರು. ಪತ್ರದ ಜೊತೆಗೆ ನೂರು ರೂಪಾಯಿಯ ಚೆಕ್ಕನ್ನು ನೀಡಿದರು. ಇದನ್ನು ನೋಡಲು ಸುತ್ತಲೂ ಜನರ ದೊಡ್ಡ ಗುಂಪು ಸೇರಿತು. ಸಿಂಗ್ ಪತ್ರವನ್ನು ಎತ್ತಿ ಕಣ್ಣಿಗೊತ್ತಿಕೊಂಡನು. ಕಣ್ಣನ್ನು ಒತ್ತಿಕೊಳ್ಳುತ್ತ, ಗಟ್ಟಿಯಾಗಿ ಅಳುತ್ತ 'ಹೇಳಿ ಸಾರ್, ನಾನು ಹುಚ್ಚನೋ ಅಲ್ಲವೋ?' ಕೇಳಿದನು. 'ನೀನು ಚೆನ್ನಾಗಿದ್ದೀಯಾ, ಹುಚ್ಚನಲ್ಲ' ಅಕೌಂಟಂಟ್ ಹೇಳಿದಾಗ ಸಿಂಗ್ ಅವನ ಕಾಲಿಗೆ ಬಿದ್ದನು. ತೀವ್ರ ದು:ಖದಿಂದ ಉಸಿರು ಗಟ್ಟುತ್ತಿತ್ತು. 'ನನ್ನನ್ನು ಹುಚ್ಚ ಅಲ್ಲ ಎಂದು ಹೇಳಿದ ನೀವು ದೇವರು ಸಾರ್. ನಿಮ್ಮಿಂದ ಇದನ್ನು ಕೇಳಲು ನನಗೆ ಬಹಳ ಸಂತೋಷವಾಗಿದೆ' ಎಂದನು.

ಮುಂದಿನ ಪೆನಶನ್ ದಿನ ಎಂದಿನಂತೆ ಓರಣವಾಗಿ ಆಫೀಸು ಕೌಂಟರಿನಲ್ಲಿ ಹಾಜರಾದನು. ಪೆನಶನ್ ಕವರನ್ನು ಅವನ ಕೈಗಿಡುತ್ತ 'ಈಗ ಯಾವ ಬೊಂಬೆಗಳನ್ನು ಮಾಡುತ್ತಿದ್ದೀಯಾ?' ಎಂದು ಕೇಳಿದರು. 'ಯಾವುದೂ ಇಲ್ಲಾ ಸಾರ್. ಇನ್ನೊಮ್ಮೆ ಎಂದೂ ಮಾಡುವದಿಲ್ಲ. ಒಬ್ಬ ಬುದ್ಧಿವಂತ ಮಾಡುವ ಕೆಲಸವಲ್ಲ ಅದು....' ಎಂದು ಹೇಳಿ ಪೆನಶನ್ ಪಡೆದುಕೊಂಡು ಆಫೀಸಿನಿಂದ ಬೀಗುತ್ತ ಹೊರ ನಡೆದ.

***

# ಹೀಗೊಂದು ದಿನ

ಬಿ.ಪ್ರಭಾಕರ ವರ್ಣ

ಆಫೀಸಿನಿಂದ ಸಂಜೆ ಮನೆಗೆ ಹಿಂದಿರುಗಿದಾಗ ರಮೇಶನಿಗೆ ಹೆಂಡತಿಯ ಮುಖದಲ್ಲಿ ಲವಲವಿಕೆ ಕಾಣಲಿಲ್ಲ. ಮನೆಯ ಬಾಗಿಲ ಕರೆಗಂಟೆ ಒತ್ತಿದಾಗ ಬಾಗಿಲು ತೆಗೆದ ಹೆಂಡತಿ ಸುಜಾತಾಳ ಮುಖದಲ್ಲಿ ಎಂದಿನ ಕಳೆ ಇರಲಿಲ್ಲ. ಮಕ್ಕಳಲ್ಲಿ ಯಾರಾದರೂ ಒಬ್ಬರು ಏನಾದರೂ ಒಂದು ಕಿತಾಪತಿ ಮಾಡಿರಬೇಕು ಅಂತ ಅನ್ನಿಸಿತು ರಮೇಶನಿಗೆ.

'ಏನೇ.. ಅಷ್ಟೊಂದು ಡಲ್ ಆಗಿದ್ದೀಯಾ..' ಕೇಳಿದ ರಮೇಶ.

'ಹಾಗೇನಿಲ್ಲಾ..' ನೀರಸದಲ್ಲಿ ಹೇಳಿದಳು ಸುಜಾತಾ.

'ಮಕ್ಕಳೇನಾದರೂ....' ಕೇಳಿದ ರಮೇಶ.

'ಮೊದಲು ಕೈ-ಕಾಲು ತೊಳೆದುಕೊಂಡು ಬನ್ನಿ. ತಿಂಡಿ ಕೊಡ್ತೀನಿ' ಎಂದು ಹೇಳಿ ಅಡಿಗೆಯ ಮನೆಗೆ ನಡೆದಳು ಸುಜಾತಾ. ಮಕ್ಕಳು ಏನೋ ಕಿತಾಪತಿ ಮಾಡಿರುವುದು ಖಾತ್ರಿಯಾಯಿತು ರಮೇಶನಿಗೆ. ತಿಂಡಿ ತಿಂದಾದ ಮೇಲೆ ವಿಚಾರಿಸಿದರಾಯಿತೆಂದು ಕೈ-ಕಾಲು ತೊಳೆಯಲು ಹೊರಟ ರಮೇಶ.

ರಮೇಶ, ಸುಜಾತಾರ ಮದುವೆಯಾಗಿ ಹತ್ತು ವರ್ಷ ಕಳೆದಿದೆ. ರಮೇಶನಿಗೆ ಎರಡು ಮಕ್ಕಳು. ಮೊದಲನೆಯವನು ಹುಡುಗ. ಎರಡನೆಯವಳು ಹುಡುಗಿ. ಬೆಂಗಳೂರಿನ ಕಂಪನಿಯಲ್ಲಿ ಇಂಜಿನಿಯರ್ ಆಗಿ ದುಡಿಯುತ್ತಿರುವ ರಮೇಶನಿಗೆ ಸಂಸಾರದಲ್ಲಿ ಯಾವುದೇ ತಾಪತ್ರಯಗಳಿಲ್ಲ. ತಂದೆ, ತಾಯಿ ಅಣ್ಣನ ಜೊತೆ ಊರಿನಲ್ಲಿ ನೆಲೆಸಿದ್ದಾರೆ. ಬೆಂಗಳೂರಿನಲ್ಲಿರುವುದು ರಮೇಶನ ಚಿಕ್ಕ ಕುಟುಂಬ. ಕಂಪನಿಯ ಕ್ವಾರ್ಟರ್ಸಿನಲ್ಲಿ ನೆಲೆಸಿರುವ ರಮೇಶನಿಗೆ ಮಕ್ಕಳ ಕಿತಾಪತಿಯನ್ನು ನಿಭಾಯಿಸುವುದೇ ಒಂದು ಚಿಂತೆಯಾಗಿದೆ!

ರಮೇಶ ಮೊದಲಿನಿಂದಲೂ ಶಿಸ್ತಿನ ಮನುಷ್ಯ. ಸುಜಾತಾಳಿಗೆ ಮದುವೆಯಾದ ಹೊಸತರಲ್ಲಿ ರಮೇಶನೊಂದಿಗೆ ಹೊಂದಿಕೊಳ್ಳಲು ಬಹಳ ಕಷ್ಟವಾಗಿತ್ತು. ರಮೇಶನಿಗೆ ನಿತ್ಯೋಪಯೋಗಿ ಯಾವುದೇ ವಸ್ತುವನ್ನು ತೆಗೆದುಕೊಂಡರೂ ಅದನ್ನು ಉಪಯೋಗಿಸಿದ ಮೇಲೆ ಯಥಾಸ್ಥಳದಲ್ಲಿಯೇ ಇಡಬೇಕು. ರಮೇಶನಿಗೆ ಜೋಡಿಸಿದ ಯಾವುದೇ ಕಾಗದ-ಪತ್ರಗಳು ಅತ್ತಿತ್ತ ಸ್ವಲ್ಪ ಸರಿದರೂ ಕೂಡಲೆ ತಿಳಿಯುತ್ತಿತ್ತು ! ರಮೇಶನಿಗೆ ಬಾಚಣಿಗೆಯಾಗಲಿ ಇಲ್ಲವೆ ಅಂಗಿ, ಬಟ್ಟೆಗಳ ಸ್ಥಾನಪಲ್ಲಟವಾದರೂ

ಸಹಿಸುವುದಕ್ಕಾಗುತ್ತಿರಲಿಲ್ಲ. ಆದರೆ ತಾಳ್ಮೆಯ ಸ್ವಭಾವದ ರಮೇಶ ಸಿಟ್ಟು ಮಾಡಿದ್ದು ಕಡಿಮೆ. ಇವರಿಬ್ಬರಲ್ಲಿ ಸುಜಾತಳಿಗೇ ಸಿಟ್ಟು ಜಾಸ್ತಿ. ರಮೇಶನ ಶಿಸ್ತಿನ ಜೀವನಕ್ಕೆ ಸುಜಾತಾ ಹೊಂದಿಕೊಂಡಳು. ಆದರೆ ಮಕ್ಕಳಾದ ಮೇಲೆ ರಮೇಶನ ಶಿಸ್ತು ಗಾಳಿಗೆ ತೂರಿದಂತಾಗಿತ್ತು. ಮನೆಯಲ್ಲಿ ಮಕ್ಕಳ ಆಟದ ಸಾಮಾನು ಚೆಲ್ಲಾಪಿಲ್ಲಿಯಾಗಿ ಬಿದ್ದಿರುವುದು ಸಾಮಾನ್ಯ. ಶಿಸ್ತಿನ ಮನುಷ್ಯ ರಮೇಶ ಅದನ್ನು ನೋಡಿಯೂ ನೋಡದಂತೆ ಇರುವುದನ್ನು ಈಗ ಅಭ್ಯಾಸ ಮಾಡಿಕೊಂಡಿದ್ದಾನೆ! ಮಕ್ಕಳು ಏನೊಂದೂ ಕಿತಾಪತಿ ಮಾಡದೆ ಆಡಿಕೊಂಡಿದ್ದರೆ ಸಾಕಾಗಿತ್ತು.

ರಮೇಶನ ಮಕ್ಕಳು ಮನೆಯೊಳಗೆ ಒಂದು ಕ್ಷಣ ಸುಮ್ಮನೆ ಕುಳಿತುಕೊಳ್ಳುವದಿಲ್ಲ. ಹೊರಗೆ ಬಿಟ್ಟರೆ ನಿಂತಲ್ಲಿ ನಿಲ್ಲುವುದಿಲ್ಲ. ಹೊರಗೆ ಹೋದಾಗ ಆ ಕಡೆ ಈ ಕಡೆ ಓಡಿ ಯಾವುದರ ಕೆಳಗೆ ಯಾವಾಗ ಬೀಳ್ತಾರೋ ಎನ್ನುವ ಹೆದರಿಕೆ ರಮೇಶದಂಪತಿಗಳಿಗೆ. ಅಕ್ಕ ಪಕ್ಕದ ಮನೆಗೆ ಕಳುಹಿಸುವುದಕ್ಕೂ ಹೆದರಿಕೆ. ಅಲ್ಲಿ ಏನಾದರೂ ಕಿತಾಪತಿ ಮಾಡಿ ಬಂದರೆ ಅವರನ್ನು ಹೇಗೆ ಎದುರಿಸುವುದು ಎನ್ನುವ ಆತಂಕ. ಶಾಲೆಗೆ ಹೋದಾಗ ಮಾತ್ರ ತುಸು ನೆಮ್ಮದಿ. ಆದರೆ ಶಾಲೆಯವರು ಮಧ್ಯಾಹ್ನದ ಒಳಗೇ ಮನೆಗೆ ಕಳುಹಿಸಿ ಬಿಡುತ್ತಾರೆ. ಮನೆಯ ಒಳಗೆ ಇದ್ದರೆ ಇನ್ನೊಂದು ರೀತಿಯ ತೊಂದರೆ.

ಒಮ್ಮೆ ಮನೆಯೊಳಗೇ ಮಕ್ಕಳು ಕ್ರಿಕೆಟ್ ಆಡುವಾಗ, ಬ್ಯಾಟ್ ಬೀಳುವ ರಭಸದಲ್ಲಿ ಮಗನ ಕೈ ಜಾರಿ ಶೊ ಕೇಸ್ ತಾಗಿ ಅದರ ಗ್ಲಾಸ್ ಒಡೆದು ಹೋಗಿತ್ತು. 'ನಿನಗೆ ನೋಡಿಕೊಳ್ಳುವುದಕ್ಕೆ ಆಗುವುದಿಲ್ಲವೇ..' ಎಂದು ಹೆಂಡತಿಯನ್ನು ಕೇಳಿದ. 'ಎಷ್ಟು ಹೊತ್ತು ಅಂತ ಅವರ ಹಿಂದೆಯೇ ಇರುವುದಕ್ಕಾಗುತ್ತದೆ? ನಾನು ಅಡಿಗೆ ಮಾಡುವುದು ಬೇಡವೇ..?' ಎಂದು ಉತ್ತರಿಸಿದ್ದಳು ಸುಜಾತಾ. ರಮೇಶನಿಗೂ ಅದು ಸರಿ ಅನ್ನಿಸಿತ್ತು.

'ಹಿಂದಿನವರೆಲ್ಲಾ ಅಷ್ಟೊಂದು ಮಕ್ಕಳನ್ನು ಹೇಗೆ ಸುಧಾರಿಸುತ್ತಾ ಇದ್ದರೋ? ಗೊತ್ತಾಗುವುದಿಲ್ಲ. ನಮಗೆ ಎರಡು ಮಕ್ಕಳನ್ನೇ ಸುಧಾರಿಸುವುದಕ್ಕಾಗುವದಿಲ್ಲ. ನಾವೆಲ್ಲಾ ಅಷ್ಟೊಂದು ಕಷ್ಟ ಕೊಡುತ್ತಿರಲಿಲ್ಲವೋ ಏನೋ... ನಾವು ಬೆಳೆಸುವ ರೀತಿಯಲ್ಲಿಯೇ ಏನಾದರೂ ತಪ್ಪಿದೆಯೋ...' ಎಂದು ಹೆಂಡತಿಯಲ್ಲಿ ಒಮ್ಮೆ ಕೇಳಿದ ರಮೇಶ. "ಅತ್ತೆ ಹೇಳಿದಂತೆ ನಾವು ನಮ್ಮ ಮಕ್ಕಳಿಗೆ ವಿಟ್‌ಮಿನ್‌ಯುಕ್ತ ಆಹಾರ ಲೆಕ್ಕ ಹಾಕಿ ಸಮಯಕ್ಕೆ ಸರಿಯಾಗಿ ಕೊಡುತ್ತೇವೆ ನೋಡಿ....ಅದಕ್ಕೇ ನಮ್ಮ ಮಕ್ಕಳು ಹೀಗಿರಬೇಕು' ತಮಾಷೆಯಾಗಿ ಅತ್ತೆ ಹೇಳಿದ್ದ ಮಾತನ್ನು ಹೇಳಿದ್ದಳು ಸುಜಾತಾ. ಆದರೆ ಎಷ್ಟು ಆಲೋಚನೆ ಮಾಡಿದರೂ ಇದು ಹೀಗೇಕೆ? ಎಂದು ತಿಳಿಯದಾಗಿತ್ತು ರಮೇಶನಿಗೆ.

ಹೆಂಡತಿಗೆ ಸಿಟ್ಟು ಬಂದರೆ ಮಕ್ಕಳಿಗೆ ನಾಲ್ಕು ಬಾರಿಸುತ್ತಾಳೆ. ಆದರೆ ಮಕ್ಕಳಿಗೆ ಸಿಟ್ಟು ಬಂದರೆ ಕೈಯಲ್ಲಿರುವುದನ್ನೇ ಎಸೆದು ಬಿಡುತ್ತಾರೆ. ಒಮ್ಮೆ ಹೀಗೆಯೇ ಆಯಿತು, ಆ ಚಾನಲ್ ಹಾಕು, ಈ ಟಿ. ವಿ ಚಾನಲ್ ಬೇಕು ಎಂದು ಮಕ್ಕಳಿಬ್ಬರಲ್ಲಿ ಜಗಳವಾಗಿ ಮಗಳಿಗೆ ಸಿಟ್ಟು ಬಂದು ಕೈಯಲ್ಲಿರುವ ಟಿ. ವಿ. ರಿಮೋಟ್ ಬೀಸಾಡಿ ಬಿಡುವುದೇ? ಆಮೇಲೆ ರಿಮೋಟ್ ರಿಪೇರಿ ಮಾಡಿಸಿದ್ದಾಯಿತು. ಮಕ್ಕಳನ್ನು ಗದರಿಸಿದಾಗ ಅರ್ಥ

ಗಂಟೆ ಸುಮ್ಮನಿರುತ್ತಾರೆ. ಆಮೇಲೆ ಯಥಾ ಪ್ರಕಾರ ತುಂಟಾಟ ಪ್ರಾರಂಭ. ಮನೆಯಲ್ಲಿ ಒಂದೇ ಮಗುವಿದ್ದಾಗ ಗಲಾಟೆ ಕಡಿಮೆ. ಆದರೆ ಅಂಥ ಸಂದರ್ಭ ಕಡಿಮೆ!

'ಮಕ್ಕಳು ಕಾಣಿಸುತ್ತಾ ಇಲ್ಲ?' ಎಂದು ತಿಂಡಿ ತಿನ್ನುವಾಗ ಕೇಳಿದ ರಮೇಶ.

'ಮಕ್ಕಳು ರೂಮಿನಲ್ಲಿ ಇದ್ದಾರೆ'

'ಏನು, ಇವತ್ತು ಮಕ್ಕಳು ಇದ್ದಿದ್ದೇ ಗೊತ್ತಾಗುದಿಲ್ಲ.' ಕೇಳಿದ ರಮೇಶ

'ನೀವು ಬಯ್ಯುತ್ತೀರಿ ಅಂತ ಮಕ್ಕಳು ಹೆದರಿದ್ದಾರೆ'

'ಸುಮ್ಮ ಸುಮ್ಮನೆ ನಾನ್ಯಾಕೆ ಬಯ್ಯುತ್ತೇನೆ' ಕೇಳಿದ ರಮೇಶ.

'ಇವತ್ತು ನೀವು ಆಫೀಸ್‌ಗೆ ಹೋದಾಗ ಏನಾಯಿತು ಅಂದರೆ..'

'ಏನಾಯಿತು.?' ರಮೇಶನ ಸ್ವರ ಏರಿತು.

'ನಮ್ಮ ಮದುವೆಯಲ್ಲಿ ನೆನಪಿಗಾಗಿ ನಿಮ್ಮ ತಂಗಿ ಕೊಟ್ಟಿದ್ದ ಗಾಜಿನ ಮನೆಯನ್ನು ಶೋಕೇಸ್‌ನಿಂದ ತೆಗೆದುಕೊಂಡು ಮಕ್ಕಳು ಆಡುತ್ತಾ ಇದ್ದರು. ನನಗೆ ಅದು ಗೊತ್ತಾಗಲಿಲ್ಲ. ಆಟದ ಮಧ್ಯದಲ್ಲಿ ಇಬ್ಬರಿಗೆ ಜಗಳವಾಗಿ, ಆ ಜಗಳದ ಗಲಾಟೆಯಲ್ಲಿ ಗಾಜಿನ ಮನೆ ಒಡೆದು ಹೋಯಿತು. ಮಕ್ಕಳಿಗೆ ಎರಡು ಹೊಡೆದು ಕೂಡಿಸಿದ್ದೇನೆ' ಒಂದೇ ಉಸಿರಿನಲ್ಲಿ ಹೇಳಿದಳು ಸುಜಾತಾ.

"ಮಕ್ಕಳಿಗೆ ಯಾಕೆ ಹೊಡೆದೆ? ಮಕ್ಕಳಿಗಿಂತ ನಿರ್ಜೀವ ವಸ್ತು ಹೆಚ್ಚಾ..? ತಮ್ಮ ಆಟ, ಚೇಷ್ಟೆಗಳಿಂದ ಖುಷಿ, ಸಂತೋಷ ಕೊಡುವ ಮಕ್ಕಳನ್ಯಾಕೆ ಹೊಡೆಯಬೇಕು? ನಾವೂ ಕೂಡ ಸ್ವಲ್ಪ ಹೊಂದಿಕೊಂಡು ಹೋಗಬೇಕಲ್ಲವೆ? ಮಕ್ಕಳು ಓಡಾಡಿಕೊಂಡು ಇದ್ದಾಗಲೇ ಚೆನ್ನ. ಈ ಮೌನ ಸಹಿಸುವುದಕ್ಕೆ ಆಗಲ್ಲ. ಅಲ್ಲವೆ..?' ಕೇಳಿದ ರಮೇಶ.

'ಮಕ್ಕಳಿಗೆ ಹೊಡೆಯಬಾರದು ಅಂತ ಎಷ್ಟೇ ಕಂಟ್ರೋಲ್ ಮಾಡಿದರೂ ಕೆಲವೊಮ್ಮೆ ಸಿಟ್ಟನ್ನು ತಡೆಯುವುದಕ್ಕಾಗದೆ ಹೊಡೆಯುತ್ತೇನೆ' ಎಂದು ನುಡಿದಳು ಸುಜಾತಾ.

'ಅದಕ್ಕೇ.. ನೀನು ಸ್ವಲ್ಪ ಸಿಟ್ಟನ್ನು ಕಡಿಮೆ ಮಾಡಬೇಕು ಅಂತ ನಾನು ಯಾವಾಗಲೂ ಹೇಳ್ತಾ ಇರುವುದು' ಎಂದು ಹೇಳಿದ ರಮೇಶ ಮಕ್ಕಳನ್ನು ರೂಮಿನಿಂದ ಹೊರಗೆ ಕರೆದ.

'ಸಾರಿ ಅಪ್ಪ' ಎಂದು ಹೇಳಿದ ಮಕ್ಕಳು ಅಪ್ಪನನ್ನು ಮುತ್ತಿದರು.

ಅಪ್ಪ ಮಕ್ಕಳನ್ನು ಸಂತೈಸುವಾಗ, 'ನನಗೆ ಏನು ತಂದಿದ್ದೀಯಾ..' ಎಂದು ಕೇಳಿದ ಮಗ ಅಪ್ಪನ ಕಿಸೆಗೆ ಕೈ ಹಾಕಿದ.

'ನನಗೆ ಫಸ್ಟ್ ..' ಎಂದು ಮಗಳೂ ಅಪ್ಪನ ಅಂಗಿಯ ಕಿಸೆಗೆ ಕೈ ಹಾಕಿ ಎಳೆದಳು. ರಮೇಶ ಎಚ್ಚರಗೊಳ್ಳುವುದರೊಳಗೆ ಅಂಗಿಯ ಕಿಸೆಯಲ್ಲಿದ್ದ ಕನ್ನಡಕ ಕೆಳಗೆ ಬಿದ್ದು 'ಠಳ್' ಎಂದು ಸದ್ದಾಯಿತು.

'ಪ'.. ಎಂದು ಸಿಟ್ಟಿನಿಂದ ಕೂಗಿದ ರಮೇಶನ ಕೈ ಮೇಲೆ ಹೋಯಿತು ! ಹೆಂಡತಿಯ ನಗುವನ್ನು ನೋಡಿ ಎತ್ತಿದ ಕೈಯನ್ನು ಅಲ್ಲಿಗೇ ನಿಲ್ಲಿಸಿದ ರಮೇಶ.

* * *

# ಮೃದಂಗಿ ಮತ್ತು ಮುತ್ತು

ಇಂಗ್ಲಿಷ್ ಮೂಲ : ವಿಲಿಯಂ ಸಾರೋಯಾನ್   ಅನು : ಶ್ರೀನಿವಾಸ ವಿ. ಸುತ್ರಾವೆ

## ಪಾತ್ರವರ್ಗ

| | | |
|---|---|---|
| **ಹ್ಯಾರಿ ವ್ಯಾನ್ ಡುಸೆನ್** | : | ಕ್ಷೌರಿಕ |
| **ಕ್ಲೇ ಲಾರಾಬೀ** | : | ಶನಿವಾರದ ಸ್ಕೂಲಿಗೆ ಚಕ್ಕರ್ ಹೊಡೆದು ಬಂದ ಹುಡುಗ |
| **ವಿವಿಯನ್ ಮ್ಯಾಕ್‌ಕಚಿಯನ್** | : | ಹೊಸ ಸ್ಕೂಲ್ ಟೀಚರ್ |
| **ಕ್ಲಾರ್ಕ ಲಾರಾಬೀ** | : | ಕ್ಲೇನ ತಂದೆ |
| **ವ್ಯಕಿ** | : | ಒಬ್ಬ ಲೇಖಕ |
| **ರೊಕ್ಸಾನಾ ಲಾರಾಬೀ** | : | ಕ್ಲೇನ ತಂಗಿ |
| **ಗ್ರೀಲಿ** | : | ಕ್ಲೇನ ಗೆಳೆಯ |
| **ಜಡ್ಜ್ ಆಪಲ್ ಗಾರ್ತ್** | : | ಸಮುದ ತೀರದಲ್ಲಿ ಮುತ್ತಿನ ಚಿಪ್ಪು ಮುಂತಾದ ವಸ್ತುಗಳನ್ನು ಸಂಗ್ರಹಿಸುವವನು. |
| **ವೊಜೆಕ್** | : | ಒಬ್ಬ ವಾಚ್ ರಿಪೇರಿಯವನು ಒಬ್ಬ ಗ್ಯಾರೇಜ್ ಹುಡುಗ |

[ದೃಶ್ಯ; ಹ್ಯಾರಿ ವ್ಯಾನ್ ಡುಸೆನ್ನನ ಕ್ಷೌರದ ಅಂಗಡಿ, ಸ್ಥಳ: ಓ. ಕೆ. –ಬೈ–ದ–ಸೀ ಕ್ಯಾಲಿಫೋರ್ನಿಯಾ , ಜನಸಂಖ್ಯೆ 909 ' ಹ್ಯಾರಿ ವ್ಯಾನ್ ಡುಸೆನ್, ಕ್ಷೌರಿಕ ಎಂದು ಕಿಟಕಿಯ ಮೇಲೆ ಬರೆಯಲಾಗಿದೆ, ಅದೊಂದು ಹಳೆ ಮಾದರಿಯ ಅಂಗಡಿ. ಸಾಧಾರಣವಾಗಿ ಕ್ಷೌರಿಕರ ಅಂಗಡಿಗಳಲ್ಲಿ ಇರದಂತಹ ವಸ್ತುಗಳಿಂದ ತುಂಬಿರುವಂಥದ್ದು .... ಉದಾಹರಣೆಗೆ, ಸ್ವತ; ಹ್ಯಾರಿ. ಅವನು ಯಾವತ್ತೂ ಕ್ಷೌರಿಕನ ಬಿಳಿಯ ನಡುವಂಗಿಯನ್ನು ಹಾಕಿಕೊಂಡವನಲ್ಲ ಮತ್ತು ತಲೆಗೆ ಎಂಥದ್ದಾದರೂ ಒಂದು ಹ್ಯಾಟು ಇಲ್ಲದೆ ಕೆಲಸ ಮಾಡಿದವನಲ್ಲ. ಅವನ ತಲೆ ಮೇಲೆ ಯಾವತ್ತೂ ಒಂದು ಸ್ಟೋವ್ ಪೈಪ್, ಅಥವಾ ಒಂದು ಡರ್ಬಿ, ಅಥವಾ ಒಂದು ವೆಸ್ಟ್ರನ್, ಅಥವಾ ಒಂದು ಹಾಮ್‌ಬರ್ಗ್, ಇಲ್ಲವೆ ಒಂದು ಸ್ಕಲ್ ಕ್ಯಾಪ್, ಒಂದು ಜೆರಾ

ಅಥವಾ ಒಂದು ಸ್ಟ್ರಾಹ್ಯಾಟ್ ಇದ್ದೇ ಇರುತ್ತೆ. ಇಂಥ ಅನೇಕ ರೀತಿಯ ಹ್ಯಾಟುಗಳನ್ನು ಧರಿಸುವುದು ಅವನ ವ್ಯಕ್ತಿತ್ವವನ್ನೋ ಅಥವಾ ಅವರ ವ್ಯಾಪ್ತಿಯನ್ನೋ ಸೂಚಿಸುತ್ತದೇನೋ ಎನ್ನುವಂತೆ.

ಗೋಡೆಯ ಮೇಲೆ ಹಾಗೂ ಷೆಲ್ಫ್‌ಗಳ ಮೇಲೆ ಅನೇಕ ಚಿಲ್ಲರೆ ಪಲ್ಲರೆ ಸಾಮಾನುಗಳವೆ. ಕೆಲವು ಸಮುದ್ರದಲೆಗಳು ಹೊರ ಚೆಲ್ಲಿದ್ದು,ಉದಾಹರಣೆಗೆ ಅಬಲಾನ್ ಮುಂತಾದ ನಾನಾ ಬಗೆಯ ಚಿಪ್ಪುಗಳು, ಹರಳು ಕಲ್ಲುಗಳು, ಕಸ-ಕಡ್ಡಿ, ಲೈಫ್ ಜ್ಯಾಕೆಟ್, ಹಗ್ಗ, ಜಲಸಸ್ಯಗಳು. ಅಂಗಡಿಯಲ್ಲೊಂದು ಹಳೆ ಮಾದರಿಯ ಕುರ್ಚಿ ಇದೆ.

ನಾಟಕ ಪ್ರಾರಂಭವಾದಾಗ, ಹ್ಯಾರಿ ಕುರ್ಚಿಯಲ್ಲಿ ಕುಳಿತಿದ್ದಾನೆ. ಸುಮಾರು ಒಂಬತ್ತು ಅಥವಾ ಹತ್ತು ವರ್ಷದ ಕ್ಲೇ ಲಾರಾಜೀ ಎಂಬ ಹುಡುಗ ಅವನಿಗೆ ಹೇರ್ ಕಟಿಂಗ್ ಮಾಡುತ್ತಿದ್ದಾನೆ. ಹ್ಯಾರಿಯು ಅಂಗಡಿಯಲ್ಲಿರುವ ಪುಸ್ತಕಗಳಲ್ಲೊಂದನ್ನು ಓದುತ್ತಿದ್ದಾನೆ.]

ಕ್ಲೇ: ವ್ಯಾನ್ ಡುಸೆನ್ ಅವರೆ, ನೀವು ಹೇಳಿದ್ದು ಮಾಡಿದೆ ನೋಡಿ. ಸರಿ ಇದೆ ಅಂದ್ಕೊಂಡಿದೀನಿ. ನಾನು ಕ್ಷೌರಿಕನಂತೂ ಅಲ್ಲವಲ್ಲ. [ಅವನು ಕೂದಲನ್ನು ಬಾಚಲು ಶುರು ಮಾಡುತ್ತಾನೆ.]

ಹ್ಯಾರಿ: ಒಟ್ಟಿನಲ್ಲಿ ನೀನು ಹೇರ್ ಕಟಿಂಗ್ ಮಾಡ್ದೆ ಅಲ್ವಾ?

ಕ್ಲೇ: ಅದನ್ನ ನೀವು ಏನಂತಿರೋ ಗೊತ್ತಿಲ್ಲ. ಕನ್ನಡಿಯಲ್ಲಿ ನೋಡ್ತೀರಾ? [ಒಂದು ಕೈಗನ್ನಡಿಯನ್ನು ಮುಂದೆ ಹಿಡಿಯುತ್ತಾನೆ.]

ಹ್ಯಾರಿ: ಬೇಡ, ಥ್ಯಾಂಕ್ಸ್. ಹೋದ್ಸಲದ್ದು ನನಗೆ ನೆನಪಿದೆ.

ಕ್ಲೇ: ನಾನಂತೂ ಕ್ಷೌರಿಕ ಆಗಲ್ಲ ಅಂತ ಕಾಣುತ್ತೆ.

ಹ್ಯಾರಿ: ಆಗದೇ ಇದ್ರೂ, ಅದರ ಬದಲಾಗಿ ಈ ಜಂಜಾಟದ ಜಗತ್ತಿನಲ್ಲಿ ಯಾರಿಗೂ ಕಾಣದಂಥ ಯಾವದೋ ಒಂದು ಮೂಲೆಯಲ್ಲಿರೋ ನೀನು ಬಳಲಿದ ಮಾನವ ಹೃದಯಕ್ಕೆ ಒಂದಿಷ್ಟು ಸಂತೋಷ ತರಬಲ್ಲೆ ಅನ್ನಿಸುತ್ತೆ.

ಕ್ಲೇ: ಯಾರು? ನಾನಾ ?

ಹ್ಯಾರಿ: ಯಾಕಾಗಬಾರದು ?

ಕ್ಲೇ: ಬಳಲಿದ ಮಾನವಹೃದಯಕ್ಕೆ ಸಂತೋಷಾನಾ ? ಅದು ಹ್ಯಾಗೆ ಸಾಧ್ಯ?

ಹ್ಯಾರಿ: ಒಂದು ಹಾಡಿಗೆ ಸ್ವರ ಹಾಕು, ಒಂದು ಚಿತ್ರ ಬರಿ, ಪುಸ್ತಕ ಬರಿ, ಅಥವಾ ಒಂದು ತತ್ವ ಕಂಡುಹಿಡಿ.

ಕ್ಲೇ: ಅಯ್ಯೋ, ನನ್ನಿಂದಾಗುತ್ತಾ ! ನೀವು ಯಾವತ್ತಾದ್ರೂ ಅಂಥದ್ದನ್ನು ಮಾಡಿದ್ರಾ ?

ಹ್ಯಾರಿ: ಮಾಡಿದ್ದೆ.

ಕ್ಲೇ: ಏನು ಮಾಡಿದ್ರಿ ?

ಹ್ಯಾರಿ: ಒಂದು ತತ್ವ ಕಂಡು ಹಿಡಿದಿದ್ದೆ.

**ಕ್ಲೇ:** ಯಾವುದು?
**ಹ್ಯಾರಿ:** ಬದುಕುವ ಮಾರ್ಗ.
**ಕ್ಲೇ:** ಯಾವ ಮಾರ್ಗ ಅದು ?
**ಹ್ಯಾರಿ:** 'ಸಾವಧಾನ' ಅನ್ನೋ ಮಾರ್ಗ.
**ಕ್ಲೇ:** ನೀವು ಹೇಳೋದು ಚೆನ್ನಾಗಿದೆ.
**ಹ್ಯಾರಿ:** ಎಲ್ಲಾ ತತ್ವಗಳೂ ಚೆನ್ನಾಗಿರ್ತವೆ. ಆದ್ರೆ ನನ್ನ ವಿಷಯದಲ್ಲಿ ತಾಪತ್ರಯ ಆದದ್ದೇನೆಂದರೆ ನಾನು ಸಾವಧಾನದಿಂದ ಇರಬೇಕು ಅನ್ನೋದನ್ನ ಮರೀತಿದ್ದೆ. ಆದ್ರೆ ಒಂದು ದಿನ ಬಂತು. ಯಾವಾಗ ಅಂದ್ರೆ ನಾನು ಹೆದ್ದಾರಿಯ ಪಕ್ಕದ ಈ ಕ್ಷೌರದ ಅಂಗಡಿಗೆ ಬಂದ ದಿನ. ಈ ಕ್ಷೌರದ ಅಂಗಡಿಯವನು ಅಂಗಡಿ ಮಾರಾಟಕ್ಕಿದೆ ಅಂದ. ನಾನು ನನ್ನ ಹತ್ರ ಇರೋದೇ ಎಂಬತ್ತು ಡಾಲರು ಅಂದೆ. ಅವನು ನನಗೆ ಅಂಗಡೀನ ಎಪ್ಪತ್ತೈದು ಡಾಲರಿಗೆ ಮಾರಿದ ಮತ್ತು ನಾನು ಹೇರ್ ಕಟಿಂಗ್ ಕೆಲ್ಸ ಶುರು ಮಾಡಿದೆ. ನಾನು ಅವತ್ತಿನಿಂದ ಇವತ್ತಿನವರೆಗೆ ಇಲ್ಲೇ ಇದೀನಿ. ಅದು ನಡೆದದ್ದು ಇಪ್ಪತ್ನಾಲ್ಕು ವರ್ಷದ ಹಿಂದೆ.
**ಕ್ಲೇ:** ಅಂದ್ರೆ, ನಾನು ಹುಟ್ಟೋದಕ್ಕಿಂತ ಮುಂಚೆ.
**ಹ್ಯಾರಿ:** ಹೌದು. ನೀನು ಹುಟ್ಟೋದಕ್ಕಿಂತ ಹದಿನೈದೋ ಹದಿನಾರೋ ವರ್ಷದ ಹಿಂದೆ.
**ಕ್ಲೇ:** ಆವಾಗ ನಿಮಗೆಷ್ಟು ವಯಸ್ಸು?
**ಹ್ಯಾರಿ:** ಯಾವುದಾದರೂ ಒಳ್ಳೆಯದನ್ನು ನೋಡಿದಾಗ ಅದನ್ನು ಗುರ್ತಿಸುವಷ್ಟು ದೊಡ್ಡವನಾಗಿದ್ದೆ.
**ಕ್ಲೇ:** ನೀವು ಏನು ನೋಡಿದ್ದು?
**ಹ್ಯಾರಿ:** ಓ.ಕೆ.ಪೈ- ದ- ಸೀ. ಮತ್ತೆ ಈ ಅಂಗಡಿ. ನಾನು ನೆಲೆಸಲಿಕ್ಕೆ ಸರಿಯಾದ ಸ್ಥಳ. ಇದೊಂದು ದ್ವಿಪದಿ. ಒಂದು ದೃಶ್ಯದ ಕೊನೇರಿ ಷೇಕ್ಸ್‌ಪಿಯರ್ ಅಂಥದನ್ನ ಹಾಕ್ತಿದ್ದ. ಹಾಗಾಗಿ ಇದು ಈ ಹೇರ್ ಕಟ್‌ನ ಮುಕ್ತಾಯ ಅಂತ. [ಅವನು ಕುರ್ಚಿಯಿಂದೆದ್ದು ಹ್ಯಾಟಿನ ಸ್ಟ್ಯಾಂಡ್ ಕಡೆ ನಡೆಯುತ್ತಾನೆ ಮತ್ತು ಒಂದು ಡರ್ಬಿ ಹ್ಯಾಟನ್ನು ಹಾಕಿಕೊಳ್ಳುತ್ತಾನೆ.]
**ಕ್ಲೇ:** ನನಗನ್ನಿಸುತ್ತೆ, ಮಿಸ್ಟರ್ ವ್ಯಾನ್ ಡುಸೆನ್, ನೀವು ಈ ಊರಲ್ಲಿ ಇಲ್ಲದೇ ಹೋಗಿದ್ದಿದ್ದರೆ ನಾನು ಒಂದು ಹೇರ್ ಕಟ್ಟೂ ಮಾಡಿಕೊಳ್ಳಲಿಕ್ಕೆ ಆಗ್ತಾ ಇರ್ಲಿಲ್ಲ ಅಂತ.
**ಹ್ಯಾರಿ:** ನಾನು ನಿನಗೆ ಹೇರ್ ಕಟ್‌ನ ಪುಕ್ಕಟೆ ಮಾಡ್ತೀನಿ ಮತ್ತು ನೀನು ನನಗೆ ಹೇರ್ ಕಟ್‌ನ ಪುಕ್ಕಟೆ ಮಾಡ್ತೀಯ. ಅಲ್ಲಿಗೆ ಸರಿಹೋಯ್ತು, ಅಲ್ಲವಾ ?
**ಕ್ಲೇ:** ಸರೀನೇ.ಆದರೆ ನೀವು ಕ್ಷೌರಿಕರು. ನಿಮಗೆ ಒಂದು ಕ್ಷೌರಕ್ಕೆ ಒಂದು ಡಾಲರ್ ಸಿಗುತ್ತೆ.
**ಹ್ಯಾರಿ:** ಒಂದೊಂದ್ಸಲ ಸಿಗುತ್ತೆ, ಒಂದೊಂದ್ಸಲ ಇಲ್ಲ.
**ಕ್ಲೇ:** ಅದು ಏನಾದ್ರೂ ಇರಲಿ. ನಿಮಗಂತೂ ನಾನು ತುಂಬ ಥ್ಯಾಂಕ್ಸ್ ಹೇಳಬೇಕು.

ನಾನೀಗ ಸಮುದ್ರತೀರಕ್ಕೆ ಹೋಗಿ ನೋಡ್ತೇನೆ, ಏನು ಸಿಗುತ್ತೋ? ಅಂತ.
**ಹ್ಯಾರಿ:** ನಾನು ನಿನ್ನ ಜೊತೆ ಬರ್ತಿದ್ದೆ, ಆದರೆ ಶನಿವಾರ ಸ್ವಲ್ಪ ವ್ಯಾಪಾರ ಆಗಬಹುದು, ಹಾಗಾಗಿ ಬರಲ್ಲ.
**ಕ್ಲೇ:** ಈ ಸಲ ನನಗೆ ನಿಜವಾಗ಼್ೂ ಒಳ್ಳೇದೇನಾದ್ರೂ ಸಿಗಬಹುದು ಅಂದುಕೊಂಡಿದ್ದೀನಿ.
**ಹ್ಯಾರಿ:** ಹೌದು, ಸಮುದ್ರದ ಅಲೆಗಳು ಒಳ್ಳೊಳ್ಳೆ ವಸ್ತುಗಳನ್ನು ತೀರಕ್ಕೆ ತಂದು ಹಾಕ್ತವಲ್ಲ!
**ಕ್ಲೇ:** ಖಂಡಿತ. ಆದ್ರೆ ಹಣ ಒಂದನ್ನ ಬಿಟ್ಟು.
**ಹ್ಯಾರಿ:** ನೀನು ಹಣ ತಗೊಂಡು ಏನು ಮಾಡ್ತೀಯ ?
**ಕ್ಲೇ:** ನನಗೆ ಬೇಕಾಗಿರೋದನ್ನ ತಗೊಳ್ತೀನಿ.
**ಹ್ಯಾರಿ:** ನಿನಗೆ ಏನು ಬೇಕಾಗಿದೆ ?
**ಕ್ಲೇ:** ನನಗೆ ನಮ್ಮ ಅಪ್ಪ ಮನೆಗೆ ಬರೋದು ಬೇಕಾಗಿದೆ. ಆಮೇಲೆ, ನಾನು ಅಮ್ಮನಿಗೆ ಏನಾದರೂ ಉಡುಗೊರೆ ಕೊಡಬೇಕು ಅಂತ ಇದೀನಿ...
**ಹ್ಯಾರಿ:** ಒಂದು ನಿಮಿಷ ತಾಳು, ಕ್ಲೇ. ನಾನು ಒಂದು ವಿಷಯ ಸರಿಯಾಗಿ ತಿಳ್ಕೋಬೇಕು. ನಿಮ್ಮ ತಂದೆ ಈಗ ಎಲ್ಲಿದಾರೆ?
**ಕ್ಲೇ:** ನನಗೆ ಗೊತ್ತಿಲ್ಲ. ನಾನು ಹೋದ್ಸಲ ಹೇರ್ ಕಟಿಂಗ್ ಮಾಡಿಸಿಕೊಂಡಿದ್ದೆನಲ್ಲ, ಅದರ ಮಾರನೇ ದಿನ ಅವರು ಹೊರಟು ಹೋದರು. ಸುಮಾರು ಒಂದು ತಿಂಗಳ ಹಿಂದೆ.
**ಹ್ಯಾರಿ:** ಹೊರಟು ಹೋದ್ರು ಅಂದ್ರೆ ಏನು ಅರ್ಥ.
**ಕ್ಲೇ:** ಏನಿಲ್ಲ, ಅವರು ಸಾಮಾನು ತಗೊಂಡ್ರು, ಹೊರಟು ಹೋದ್ರು ಅಷ್ಟೆ.
**ಹ್ಯಾರಿ:** ಅವರು ವಾಪಸ್ಸು ಯಾವಾಗ ಬರೋದು ಅಂತ ಏನಾದ್ರು ಹೇಳಿದ್ರಾ ?
**ಕ್ಲೇ:** ಇಲ್ಲ, ಅವರು ಹೇಳಿದ್ದು ಇಷ್ಟೆ. ಆದದ್ದಾಯ್ತು, ಸಾಕಿನ್ನ . ಅವರು ಅದನ್ನ ಅಡುಗೆ ಮನೆ ಗೋಡೆ ಮೇಲೂ ಬರೆದಿದ್ರು.
**ಹ್ಯಾರಿ:** ಇನ್ನು ಸಾಕು ಅಂತಾನಾ?
**ಕ್ಲೇ:** ಹೌದು. ನಾವೆಲ್ಲ ಏನು ತಿಳಕೊಂಡಿದ್ವಿ? ಅವರು ಒಂದೆರಡು ದಿನದಲ್ಲಿ ವಾಪಸ್ ಬರ್ತಾರೆ ಅಂತ. ಆದ್ರೆ ಈಗ ನಮಗೆ ಗೊತ್ತಾಗಿದೆ–ನಾವು ಅವರನ್ನ ಹುಡುಕಬೇಕು ಮತ್ತು ವಾಪಸ್ಸು ಕರಕೊಂಡು ಬರಬೇಕು ಅಂತ.
**ಹ್ಯಾರಿ:** ಅದನ್ನ ನೀವು ಹ್ಯಾಗೆ ಮಾಡಬಹುದು ಅಂದ್ಕೊಂಡಿದೀರ?
**ಕ್ಲೇ:** ಹ್ಯಾಗೆ ಅಂದ್ರೆ, ನಾವು "ದ ಓ. ಕೆ. ಬೈ– ದ– ಸೀ ಗಲ್" ಪೇಪರ್‌ನಲ್ಲಿ ಒಂದು ಜಾಹೀರಾತು ಹಾಕಿದ್ವಿ, ಅದೇ ಪ್ರತಿ ಶನಿವಾರ ಬರುತ್ತಲ್ಲ, ಆ ಪೇಪರ್ನಲ್ಲಿ.
**ಹ್ಯಾರಿ:** [ಪೇಪರನ್ನು ತೆಗೆದು ನೋಡುತ್ತಾ.] ಈ ಪೇಪರಾ ? ಆದ್ರೆ ನಿಮ್ಮ ತಂದೆ ಈ ಊರಲ್ಲಿ ಇಲ್ಲವಲ್ಲ. ಈ ಪೇಪರ್ನಲ್ಲಿರೋದನ್ನ ಅವರು ಹ್ಯಾಗೆ ನೋಡ್ತಾರೆ?

**ಕ್ಲೇ:** ನೋಡಬಹುದು. ಅದೇನೇ ಇರಲಿ, ಬೇರೆ ಏನು ಮಾಡಬೇಕು ಅಂತ ನಮಗೆ ಗೊತ್ತಿಲ್ಲ. ನಾವು ಬೇಸಿಗೆಯಲ್ಲಿ ದುಡಿದು ಸಂಪಾದಿಸಿದ ಹಣದಿಂದ ಜೀವನ ನಡೆಸ್ತಾ ಇದೀವಿ. ಆದ್ರೆ ಈಗ ಹೆಚ್ಚೇನೂ ಉಳಿದಿಲ್ಲ.

**ಹ್ಯಾರಿ:** ಬೇಸಿಗೆಯಲ್ಲಿ ದುಡಿದದ್ದು?

**ಕ್ಲೇ:** ಹೌದು. ಹೋದ್ಸಲದ್ದಲ್ಲ. ಅದಕ್ಕಿಂತ ಹಿಂದಲ್ದು. ನಾವಿಲ್ಲಿಗೆ ಬರೋಕಿಂತ ಸ್ವಲ್ಪ ಮುಂಚೆ. ನಾವು ಕರ್ನ್‌ಕೌಂಟಿಯಲ್ಲಿ ಹತ್ತಿಹೊಲದಲ್ಲಿ ಕೆಲ್ಸ ಮಾಡಿದ್ವಿ, ನಮ್ಮ ತಂದೆ, ನಮ್ಮ ತಾಯಿ ,ಮತ್ತು ನಾನು.

**ಹ್ಯಾರಿ:** [ಪೇಪರ್ ತೋರಿಸುತ್ತಾ] ಜಾಹೀರಾತಿನಲ್ಲಿ ನೀವು ಏನು ಬರ್ಸಿದೀರ?

**ಕ್ಲೇ:** [ಅದನ್ನು ನೋಡುತ್ತಾ] ಏನಂದ್ರೆ ...ಕ್ಲಾರ್ಕ್ ಲಾರಾಬೀ, ಮನೆಗೆ ಬನ್ನಿ. ನಿಮ್ಮ ಮೀನು ಹಿಡಿಯೋ ಗಾಳ, ದಾರ, ಕೋಲು ಎಲ್ಲಾ ಭದ್ರವಾಗಿದೆ. ಏನೂ ಆಗಿಲ್ಲ. ಮೀನು ಕೂಡ ಸಾಕಷ್ಟು ಸಿಗ್ತವೆ–ಕ್ಯಾಬೆಜಾಸ್, ಪರ್ಚ್, ಮತ್ತೆ ಬಾಸ್. ಆದದ್ದಾಯ್ತು, ಮರೆತುಬಿಡಿ ಅದನ್ನ. ನಾವು ನಿಮ್ಮನ್ನ ತುಂಬ ಜ್ಞಾಪಿಸಿಕೊಳ್ತೀವಿ. ಅಮ್ಮ, ಕ್ಲೇ, ರೊಕ್ಸಾನಾ, ರೂಫಸ್, ಕ್ಲಾರಾ.

**ಹ್ಯಾರಿ:** ಒಳ್ಳೆ ಜಾಹೀರಾತು.

**ಕ್ಲೇ:** ನಮ್ಮ ಅಪ್ಪ ಇದನ್ನ ಓದಿದರೆ, ಅವರು ವಾಪಸ್ಸು ಬರಬಹುದು ಅನ್ಸುತ್ತಾ ನಿಮಗೆ?

**ಹ್ಯಾರಿ:** ಏನೋ ಗೊತ್ತಿಲ್ಲ, ಕ್ಲೇ ಬರಬಹುದು.

ಕ್ಲೇ; ಹ್ಞೂಂ. ನಿಮ್ಮ ಹೇರ್ ಕಟಿಂಗಿಗಾಗಿ ತುಂಬ ಥ್ಯಾಂಕ್ಸ್, ಮಿಸ್ಟರ್ ವ್ಯಾನ್ ಡುಸೆನ್, [ಕ್ಲೇ ಹೊರ ಹೋಗುತ್ತಾನೆ. ಹ್ಯಾರಿ ಡರ್ಬಿ ಹ್ಯಾಟನ್ನು ತೆಗೆಯುತ್ತಾನೆ, ಮುಖಕ್ಕೆ ಶೇವಿಂಗ್ ಸೋಪು ಹಚ್ಚಿಕೊಂಡು ರೇಜರ್‌ನಿಂದ ಶೇವ್ ಮಾಡಿಕೊಳ್ಳಲು ಪ್ರಾರಂಭಿಸುತ್ತಾನೆ. ಈಜುಡುಗೆಯಲ್ಲಿರುವ ಸುಂದರ ಯುವತಿಯೊಬ್ಬಳು ಬಣ್ಣದ ಬಿಸಿಲು ಕೊಡೆಯನ್ನು ಮಡಚುತ್ತಾ ಅಂಗಡಿಯೊಳಗೆ ಬರುತ್ತಾಳೆ.ಉದ್ದನೆಯ ಹೊಂಬಣ್ಣದ ಕೂದಲಿನ ಹುಡುಗಿ.]

**ಹ್ಯಾರಿ:** ಮಿಸ್ ಅಮೆರಿಕಾ?

**ಹುಡುಗಿ:** ಅಲ್ಲ, ಮಿಸ್ ಮ್ಯಾಕ್ ಕಚಿಯಾನ್.

**ಹ್ಯಾರಿ:** ನಾನು ಹ್ಯಾರಿ ವ್ಯಾನ್ ಡುಸೆನ್.

**ಹುಡುಗಿ:** ತುಂಬ ಸಂತೋಷ.

**ಹ್ಯಾರಿ:** [ಬಾಗಿ] ನನಗೂ ಅಷ್ಟೆ.

**ಹುಡುಗಿ:** ನಾನಿಲ್ಲಿ ಹೊಸಬಳು.

**ಹ್ಯಾರಿ:** ನೀವು ಎಲ್ಲಿ ಹೋದರೂ ಹೊಸಬರೇ ಆಗಿರ್ತೀರ. ಹೊಚ್ಚ ಹೊಸದಾಗಿ ಅಂತ ಹೇಳಬಹುದು. ನೀವು ಇಲ್ಲಿಯವರಲ್ಲ ಅನ್ನೋದು ಗೊತ್ತಾಗುತ್ತೆ.

**ಹುಡುಗಿ:** ನಿಜ ಹೇಳಬೇಕೆಂದರೆ, ನಾನು ಇಲ್ಲಿ ವಾಸವಾಗಿದೀನಿ. ಆದರೆ ಹೋದ

ಭಾನುವಾರದಿಂದ. ಅಷ್ಟೆ. ನಾನು ಇಲ್ಲಿನ ಸ್ಕೂಲಿನ ಹೊಸ ಟೀಚರ್.

**ಹ್ಯಾರಿ:** ಹೌದಾ?

**ಹುಡುಗಿ:** ಹೌದು.

**ಹ್ಯಾರಿ:** ಹ್ಯಾಗನ್ನಿಸುತ್ತೆ ಕೆಲಸ ?

**ಹುಡುಗಿ:** ಅಯ್ಯೋ. ಈ ಸ್ಕೂಲು ನನಗೆ ಒಂದು ವಾರದಲ್ಲೇ ಸುಸ್ತು ಹೊಡಿಸಿಬಿಟ್ಟು ಮಾರಾಯರೆ. ನಿಜ ಹೇಳಬೇಕೂಂದ್ರೆ , ನಾನು ಈ ಕೆಲಸ ಬಿಟ್ಟು ನಮ್ಮೂರಿಗೆ – ಅಂದರೆ ಶ್ಯಾನ್‌ಫ್ರ್ಯಾನ್ಸಿಸ್ಕೊಗೆ–ಹೋಗಿಬಿಡೋಣ ಅಂದ್ಕೊಂಡಿದೀನಿ. ಆದರೂ. ಯಾಕೊ ಏನೋ ಇಲ್ಲಿರೋಣ ಅಂತಾನೂ ಅನ್ಸುತ್ತೆ. ನೀವೇನಂತೀರ?

**ಹ್ಯಾರಿ:** ಏನು? ನೀವು ನಿಜವಾಗ್ಲೂ ನನಗೆ ಕೇಳ್ತಾ ಇದ್ದೀರಾ ?

**ಹುಡುಗಿ:** ಹೌದು. ನಿಜವಾಗ್ಲೂ. ನೀವು ಇಲ್ಲಿ ಬಹಳ ದಿವಸದಿಂದ ಇದೀರಲ್ಲ. ನಿಮಗೆ ಈ ಊರಲ್ಲಿ ಎಲ್ಲರೂ ಗೊತ್ತು. ಹಾಗಾಗಿ ಕೇಳಿದೆ. ನೀವೇನಂತೀರಾ? ನಾನು ಹೋಗ್ಲಾ ಅಥವಾ ಇರ್ಲಾ ?

**ಹ್ಯಾರಿ:** ನೀವು ಏನು ಹುಡುಕ್ತಾ ಇದೀರ ಅನ್ನೋದರ ಮೇಲೆ ನಿಂತಿದೆ ಈ ಪ್ರಶ್ನೆಗೆ ಉತ್ತರ. ನಾನು ಇಲ್ಲಿ ನೆಲೆಸಿದೆ. ಯಾಕಂದ್ರೆ ನನಗೇನೂ ಬೇಕಿದ್ದಿಲ್ಲ ಅಂತ ತಿಳಕೊಂಡಿದ್ದೆ. ಆದರೆ ನಾನು ತಿಳಿದದ್ದು ತಪ್ಪಾಗಿತ್ತು. ಯಾಕಂದ್ರೆ ವಾಸ್ತವವಾಗಿ ನನಗೆ ಬೇಕಿದ್ದನ್ನ ನಾನು ಹುಡುಕ್ತಾ ಇದ್ದೆ, ಮತ್ತು ನಾನು ಏನು ಹುಡುಕ್ತಾ ಇದ್ದೆನೋ ಅದೇ ಸಿಗ್ತು.

**ಹುಡುಗಿ:** ಏನದು?

**ಹ್ಯಾರಿ:** ನಾನು ಆರಾಮವಾಗಿರೋ ಅವಕಾಶ. ಅದಕ್ಕೋಸ್ಕರಾನೇ ನಾನು ಇನ್ನೂ ಇಲ್ಲೇ ಇರೋದು. ನೀವೇನು ಹುಡುಕ್ತಾ ಇದ್ದೀರಾ, ಮಿಸ್ ಮ್ಯಾಕ್ ಕಚಿಯಾನ್?

**ಹುಡುಗಿ:** ನಾನು...

**ಹ್ಯಾರಿ:** ನಿಮಗೆ ಗಂಡು ಹುಡುಕೋದರ ಜೊತೆಗೆ ಬೇರೆ...

**ಹುಡುಗಿ:** ನಾನು ಗಂಡನ್ನೇನೂ ಹುಡುಕ್ತಾ ಇಲ್ಲ. ಗಂಡೇ ನನ್ನನ್ನ ಹುಡುಕ್ಲಿ ಅಂತ ನಾನಂದ್ಕೊಂಡಿರೋದು.

**ಹ್ಯಾರಿ:** ಅದು ಸರೀನೇ .

**ಹುಡುಗಿ:** ನಾನು ಪಾಠ ಮಾಡೋ ಅವಕಾಶಕ್ಕಾಗಿ ಕಾದಿದ್ದೇನೆ .

**ಹ್ಯಾರಿ:** ಅದು ನ್ಯಾಯಾನೇ .

**ಹುಡುಗಿ:** ಆದರೆ ಇದೆಂಥ ಊರು ಮಾರಾಯರೆ !...ಇಲ್ಲಿನ ಮಕ್ಕಳಿಗೆ ಯಾವುದರ ಬಗ್ಗೇನೂ ಚಿಂತೆ ಇಲ್ಲ. ಅವರಿಗೆ ಒಳ್ಳೆ ಗ್ರೇಡ್ ಬರ್ಲಿ, ಬಿಡ್ಲಿ, ಅವರು ಪಾಸಾಗ್ಲಿ ಅಥವಾ ಫೇಲ್ ಆಗ್ಲಿ, ಅಥವಾ ಬೇರೆ ಏನೇ ಇರ್ಲಿ, ಅದರ ಬಗ್ಗೆ ಅವರಿಗೆ ಚಿಂತೇನೇ ಇಲ್ಲ. ಅದೂ ಅಲ್ಲದೆ, ಅವರಲ್ಲಿ ಬಹುತೇಕ ಎಲ್ಲರೂ ತುಂಬ ತುಂಟರು. ಅವರಿಗೆ ಆಸಕ್ತಿ ಇರೋದು ಬರೀ ಆಟದಲ್ಲಿ ಮತ್ತು ಸಮುದ್ರದಲ್ಲಿ. ಅದಕ್ಕೇ ನಾನೀಗ ಸಮುದ್ರ

ತೀರದ ಕಡೆ ಹೊರಟಿರೋದು. ನನಗನ್ನಿಸ್ತು ಅವರನ್ನ ಒಂದು ಶನಿವಾರ ದಿನ ಚೆನ್ನಾಗಿ ಗಮನಿಸಿದರೆ ಅವರನ್ನ ನಾನು ಇನ್ನೂ ಹೆಚ್ಚಾಗಿ ಅರ್ಥ ಮಾಡಿಕೊಳ್ಳಬಹುದೇನೋ ಅಂತ.

**ಹ್ಯಾರಿ:** ಹೌದು, ಅದು ಒಳ್ಳೆ ಉಪಾಯಾನೇ.

**ಹುಡುಗಿ:** ನನಗನ್ನಿಸುತ್ತೆ, ಅವರ್‍ಯಾರಿಗೂ ಗೊತ್ತು– ಗುರಿ ಅನ್ನೋದೇ ಇಲ್ಲ ಅಂತ. ಬರೀ ತಮಾಷೆ ಮತ್ತು ಆಟ. ನಾನು ಅಂಥ ಮಕ್ಕಳಿಗೆ ಹೇಗೆ ಪಾಠ ಹೇಳಿ ಕೊಡೋದು? ನಾನು ಅವರಿಗೆ ಏನು ಕಲಿಸಬಹುದು?

**ಹ್ಯಾರಿ:** ಇಂಗ್ಲಿಷನ್ನ.

**ಹುಡುಗಿ:** ಅದೇನೋ ಸರಿ.

**ಹ್ಯಾರಿ:** [ಮುಖ ಒರೆಸಿಕೊಳ್ಳುತ್ತಾ] ಹಾಡೋದು,ಕುಣಿಯೋದು,ಅಡುಗೆ ಮಾಡೋದು...

**ಹುಡುಗಿ:** ಅಡುಗೆ ಮಾಡೋದು ? ನೀವು ಇದಕ್ಕಿಂತ ವಿವೇಕದ ಮಾತು ಹೇಳಬಹುದು ಅಂದ್ಕೊಂಡಿದ್ದೆ.

**ಹ್ಯಾರಿ:** ಹೌದಾ?ಥ್ಯಾಂಕ್ಸ್.

**ಹುಡುಗಿ:** ಏನೂ ಪರವಾಗಿಲ್ಲ.

**ಹ್ಯಾರಿ:** ಪ್ರಶ್ನೆ ಏನು ಅಂದ್ರೆ–ನೀವು ಇಲ್ಲಿ ಇರೋದೋ ಅಥವಾ ಇಲ್ಲಿಂದ ಹೊರಟು ಹೋಗೋದೋ ಅಂತ ತಾನೆ?

**ಹುಡುಗಿ:** ಹೌದು.

**ಹ್ಯಾರಿ:** ಉತ್ತರ ಏನಪ್ಪ ಅಂದ್ರೆ ಹೋಗೋದಾದ್ರೆ ಹೋಗಿ ಅಂತ.

**ಹುಡುಗಿ:** ಯಾಕೆ? ಅಲ್ಲ ನಾನು ಹೇಳೋದೇನೆಂದರೆ, ನಾನು ಇಲ್ಲಿರೋದು ಉತ್ತಮ ಅಂತ ನೀವು ತಿಳಿಸ್ತೀರೇನೋ ಅಂದ್ಕೊಂಡಿದ್ದೆ. ಆದರೆ ನೀವು ಈಗ ಇದ್ದಕ್ಕಿದ್ದ ಹಾಗೆ ನಾನು ವಾಪಸ್ ಹೋಗೋದು ಉತ್ತಮ ಅಂತೀರಾ. ಯಾಕೆ?

**ಹ್ಯಾರಿ:** [ಸ್ವಲ್ಪ ಹೊತ್ತು ಸುಮ್ಮನಿದ್ದು] ಯಾಕಂದ್ರೆ, ನೀವು ಇಂಥ ಊರಿಗೇ ಅಲ್ಲ ಬಿಡಿ. ನೀವು ತುಂಬಾನೇ ಸುಂದರವಾಗಿದೀರ.

**ಹುಡುಗಿ:** ಅಯ್ಯೋ, ಹಾಗೇನೂ ಅಲ್ಲಪ್ಪ. ನಿಜವಾಗ್ಲೂ!

**ಹ್ಯಾರಿ:** ನೀವು ತರುಣರು ಮತ್ತು ಬುದ್ಧಿವಂತರು. ತಾರುಣ್ಯ ಮತ್ತೆ ಬುದ್ಧಿಮತ್ತೆಗೆ ಬೇಕಿರೋದು ಸಂಭ್ರಮ.

**ಹುಡುಗಿ:** ಆದರೆ ಸಂಭ್ರಮದಲ್ಲಿ ಸುಮಾರಷ್ಟು ವಿಧಗಳಿವೆಯಲ್ಲ.

**ಹ್ಯಾರಿ:** ಇವೆ. ಆದರೆ ನಿಮಗೆ ತಕ್ಕದ್ದು ಅಂದ್ರೆ ಸಿಟಿ–ಮಾದರಿಯ ವಾತಾವರಣ. ಈ ಸಣ್ಣ ಊರಲ್ಲಿ ನಿಮಗೆ ತಕ್ಕ ಗಂಡೂ ಇಲ್ಲ.

**ಹುಡುಗಿ:** ನಾನು ಕೇವಲ ಗಂಡನ್ನ ಹುಡುಕ್ತಾ ಇದೀನಿ ಅನ್ನೋ ಹಾಗೆ ಮಾತಾಡ್ತೀರಲ್ಲ?

**ಹುಡುಗಿ:** ನಾನು ಕೇವಲ ಗಂಡನ್ನ ಹುಡುಕ್ತಾ ಇದೀನಿ ಅನ್ನೋ ಹಾಗೆ ಮಾತಾಡ್ತೀರಲ್ಲ?

**ಹ್ಯಾರಿ:** ಹೌದು. ನೀವು ನಿಮ್ಮ ಗಂಡನಿಗೂ ಕಲಿಸಬೇಕಲ್ಲ–ಅಪ್ಪ ಆಗೋದು ಹ್ಯಾಗೆ ಅನ್ನೋದನ್ನ. ಯಾಕಂದ್ರೆ ಆಗ ನಿಮ್ಮವೇ ಸ್ವಂತ ಮಕ್ಕಳಿರ್ತಾರಲ್ಲ ಕಲಿಸಲಿಕ್ಕೆ.

**ಹುಡುಗಿ:** [ಸ್ವಲ್ಪ ಸಿಟ್ಟಿನಿಂದಲೇ ಕುರ್ಚಿಯಲ್ಲಿ ಕೂರುತ್ತಾ ಮತ್ತು ಮೆತ್ತಗೆ ಮಾತಾಡುತ್ತಾ] ವ್ಯಾನ್ ಡುಸೆನ್ ಅವರೇ. ನಿಮಗೆ ಅಡ್ಡಿ ಇಲ್ಲ ಅನ್ನೋದಾದ್ರೆ ನನಗೆ ಪೂಡ್ಲ್ ಹೇರ್ ಕಟ್ ಮಾಡ್ತೀರಾ?

**ಹ್ಯಾರಿ:** ನೀವದನ್ನ ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ಮಾಡಿಸ್ಕೋಬೇಕಾಗುತ್ತೆ, ನನಗೆ ತಿಳಿಯೋ ಹಾಗೆ.

**ಹುಡುಗಿ:** ಯಾಕೆ? ನೀವು ಕ್ಷೌರಿಕರಲ್ಲವಾ?

**ಹ್ಯಾರಿ:** ಕ್ಷೌರಿಕನೇ.

**ಹುಡುಗಿ:** ಮತ್ತೆ ಇದು ನಿಮ್ಮ ಅಂಗಡಿ. ವ್ಯಾಪಾರಕ್ಕೆ ಅಂತ ತೆರೆದಿರೋದು. ನಾನು ಹೇರ್ ಕಟಿಂಗಿಗೆ ಅಂತ ಬಂದಿದೀನಿ. ನನ್ನ ಹತ್ರ ಹಣ ಇದೆ. ನನಗೆ ಪೂಡ್ಲ್ ಹೇರ್ ಕಟ್ ಆಗಬೇಕು.

**ಹ್ಯಾರಿ:** ನನಗೆ ಪೂಡ್ಲ್ ಹೇರ್ ಕಟ್ ಮಾಡೋದು ಗೊತ್ತಿಲ್ಲ. ಒಂದು ವೇಳೆ ಗೊತ್ತಿದ್ರೂ ಕೂಡ ನಾನು ಮಾಡಲಾರೆ.

**ಹುಡುಗಿ:** ಯಾಕೆ?

**ಹ್ಯಾರಿ:** ನಾನು ಹೆಂಗಸರಿಗೆ ಹೇರ್ ಕಟಿಂಗ್ ಮಾಡಲ್ಲ. ನನ್ನ ಅಂಗಡಿಗೆ ಬರೋ ಹೆಂಗಸರಾದ್ರೂ ಯಾರೂ ಅಂತೀರಾ? ತಮ್ಮ ಮಕ್ಕಳನ್ನ ಕರಕೊಂಡು ಬರೋವರು, ಅಷ್ಟೆ

**ಹುಡುಗಿ:** ಮಿಸ್ಟರ್ ವ್ಯಾನ್ ಡುಸೆನ್, ನನಗೆ ಪೂಡ್ಲ್ ಹೇರ್ ಕಟ್ ಬೇಕು .

**ಹ್ಯಾರಿ:** ಕ್ಷಮಿಸಿ. ಮಿಸ್ ಮ್ಯಾಕ್ ಕರ್ಚಿಯಾನ್. ನಾನು ಕನಸಿನಲ್ಲೂ ನಿಮಗೆ ಹೇರ್ ಕಟ್ ಮಾಡಲಾರೆ. [ಆ ಕಡೆ ರಸ್ತೆಯಲ್ಲಿ ಯಾವದೋ ಒಂದು ಟ್ರಕ್ ನಿಲ್ಲುವ ಶಬ್ದ ಕೇಳಿಸುತ್ತದೆ.]

**ಹುಡುಗಿ:** [ಮೆತ್ತಗೆ. ಸಮಾಧಾನದಿಂದ. ಆದರೆ ನಿರ್ಧಾರದ ಧ್ವನಿಯಲ್ಲಿ ] ಮಿಸ್ಟರ್ ವ್ಯಾನ್ ಡುಸೆನ್.ನಾನು ಇಲ್ಲೇ ಇರಲಿಕ್ಕೆ ನಿರ್ಧರಿಸಿದ್ದೇನೆ. ಮತ್ತೆ ಈಗ ಆಗಬೇಕಾಗಿರೋ ಮೊದಲನೇ ಕೆಲ್ಸ ಅಂದ್ರೆ ನನ್ನ ಮುಖಲಕ್ಷಣವನ್ನು ಬದಲಾಯಿಸುವುದು. ನಾನು ಇಲ್ಲಿನ ಪರಿಸರಕ್ಕೆ ಸರಿ ಇಲ್ಲ ಅನ್ನಿಸುತ್ತೆ .

**ಹ್ಯಾರಿ:** ಏನೋಪ್ಪ, ಗೊತ್ತಿಲ್ಲ. ನಾನು ಸ್ಕೂಲಿಗೆ ಹೋಗೋ ಸಣ್ಣ ಹುಡುಗನಾದ್ರೆ, ನೀವು ನೋಡಲಿಕ್ಕೆ ಸರಿಯಾಗೇ ಇದೀರಾ ಅಂತ ಹೇಳ್ತಿದ್ದೆನೇನೋ.

**ಹುಡುಗಿ:** ಸರಿಹೋಯ್ತು! ನೀವು ಆ ಮಕ್ಕಳಂತೇನೇ. ಹೇಳಿದ್ನಲ್ಲ, ಅವರು ನಾನು ಹೇಳೋ ಯಾವ ವಿಷಯವನ್ನೂ ಗಂಭೀರವಾಗಿ ತಗೊಳಲ್ಲ. ಈ ಕೆಲಸ ಇವಳ

ಕೈಲಾಗಲ್ಲ ಅಂತ ಕೈಚೆಲ್ಲಿ ವಾಪಸ್ಸು ಹೋಗೊ ಸುಂದರಾಂಗಿ ಅಷ್ಟೆ ಈ ಹುಡುಗಿ ಅಂತ ಅವರು ತಿಳಕೊಂಡಿದಾರೆ. ನೀವು ನನಗೆ ಪೂಡ್ಲ್ ಹೇರ್ ಕಟ್ ಮಾಡಿದರೇನಾನು ಸಾದಾ ಹುಡುಗಿ ಥರ ಕಾಣಬಹುದು.ನನ್ನ ಬಟ್ಟೆಗಳೂ ಇನ್ನು ಮೇಲೆ ಬೇರೆ ರೀತಿ ಇರಬೇಕಾಗುತ್ತೆ. ನಾನು ಇಲ್ಲಿ ಪಾಠ ಹೇಳಿ ಕೊಡೋದು ಅಂತ ನಿರ್ಧರಿಸಿದ್ದೇನೆ. ನೀವು ನನಗೆ ಸಹಾಯ ಮಾಡಬೇಕು.ಹಾಗಾಗಿ, ಮಿಸ್ಟರ್ ವ್ಯಾನ್ ಡುಸೆನ್, ನೀವೀಗ ನಿಮ್ಮ ಕತ್ತರಿ ತಗೊಳ್ಳಿ, ಹೇಳ್ತೀನಿ.

**ಹ್ಯಾರಿ:** ಕ್ಷಮಿಸಿ, ಮಿಸ್ ಮ್ಯಾಕ್ ಕಚಿಯಾನ್. ನಿಮ್ಮ ಮುಖಲಕ್ಷಣವನ್ನ ಬದಲಾಯಿಸೋ ಅಗತ್ಯವೇನೂ ಇಲ್ಲ.

[ಕ್ಲಾರ್ಕ್ ಲಾರಾಬೀಯ ಪ್ರವೇಶ]

**ಹ್ಯಾರಿ:** ಬಾ, ಕ್ಲಾರ್ಕ್. ಈಗ ನಿನ್ನ ಸರದಿ. [ಮಿಸ್ ಮ್ಯಾಕ್ ಕಚಿಯಾನಳು ಕುರ್ಚಿಯಿಂದೇಳಲು ಹ್ಯಾರಿ ಸಹಾಯ ಮಾಡುತ್ತಾನೆ. ಅವಳು ಅವನನ್ನ ದುರುಗುಟ್ಟಿ ನೋಡುತ್ತಾಳೆ.]

**ಹುಡುಗಿ:** [ಪಿಸುಮಾತಿನಲ್ಲಿ] ನಾನು ನಿಮ್ಮ ಈ ಒರಟು ವರ್ತನೆಯನ್ನು ಯಾವತ್ತೂ ಮರೆಯುವದಿಲ್ಲ, ಮಿಸ್ಟರ್ ವ್ಯಾನ್ ಡುಸೆನ್.

**ಹ್ಯಾರಿ:** ಓ, ಕೆ. ಬ್ಯೆದಸೀ ಯಲ್ಲಿ ಯಾವತ್ತೂ ಪಿಸು ಮಾತಾಡಬೇಡಿ. ಜನ ಅಪಾರ್ಥ ಮಾಡಿಕೊಳ್ತಾರೆ, [ಜೋರಾಗಿ] ಹೋಗಿ ಬನ್ನಿ, ಮಿಸ್. [ ಮಿಸ್ ಮ್ಯಾಕ್ ಕಚಿಯಾನ್ ತನ್ನ ಕೊಡೆಯನ್ನು ಸಿಟ್ಟಿನಿಂದ ತೆರೆಯುತ್ತಾ ಅಂಗಡಿಯಿಂದ ಹೊರ ನಡೆಯುತ್ತಾಳೆ. ಕ್ಲಾರ್ಕ್ ಲಾರಾಬೀಯೇನೂ ಅವಳನ್ನು ಸರಿಯಾಗಿ ಗಮನಿಸಿದಂತಿಲ್ಲ. ಅವನು ಷೆಲ್ಫುಗಳ ಮೇಲಿನ ಚಿಲ್ಲರೆ ಸಾಮಾನುಗಳನ್ನು ನೋಡುತ್ತಾ ನಿಲ್ಲುತ್ತಾನೆ.]

**ಹ್ಯಾರಿ:** ಅಂದ್ಹಾಗೆ, ಕ್ಲಾರ್ಕ್, ನಾನು ನಿನ್ನ ನೋಡ್ದೆ ಬಹಳ ದಿನ ಆಯ್ತು.

**ಕ್ಲಾರ್ಕ್:** ಏನಿಲ್ಲ, ನಾನು ಈ ಕಡೆಯಿಂದ ಹೊರಟಿದ್ದೆ ಅಷ್ಟೆ, ಹ್ಯಾರಿ. ಇಲ್ಲಿ ನನಗೆ ಕ್ಲೇ ಸಿಗಬಹುದು ಅಂದುಕೊಂಡು ಬಂದೆ.

**ಹ್ಯಾರಿ:** ಅವನು ಇಲ್ಲಿ ಇದ್ದ-ಸ್ವಲ್ಪ ಹೊತ್ತಿನ ಕೆಳಗೆ.

**ಕ್ಲಾರ್ಕ್:** ಹ್ಯಾಗಿದಾನೆ?

**ಹ್ಯಾರಿ:** ಚೆನ್ನಾಗಿದಾನೆ, ಕ್ಲಾರ್ಕ್.

ಕ್ಲಾರ್ಕ್: ನಾನೀಗ ಸ್ಯಾಲಿನಾಸ್‌ನಲ್ಲಿ ಕೆಲ್ಸ ಮಾಡ್ತಾ ಇದೀನಿ. ಈ ಕಡೆ ಬರಲಿಕ್ಕೆ ಒಂದು ಟ್ರಕ್ ಸಿಗ್ತು. ಈಗದು ರಸ್ತೆ ಪಕ್ಕದಲ್ಲಿರೋ ಪೆಟ್ರೋಲ್ ಬಂಕ್ ಹತ್ರ ನಿಂತಿದೆ.

**ಹ್ಯಾರಿ:** ನೀನು ಮನೆಗೆ ಹೋಗಿದ್ದೆ ತಾನೆ ?

**ಕ್ಲಾರ್ಕ್:** ಇಲ್ಲ, ಹೋಗಿಲ್ಲ.

**ಹ್ಯಾರಿ:** ಯಾಕೆ ?

**ಕ್ಲಾರ್ಕ್:** ನಾನು ಫೇಲ ಬಿಟ್ಟೆ, ಹ್ಯಾರಿ.

**ಹ್ಯಾರಿ:** ಹೇರ್ ಕಟಿಂಗ್ ಮಾಡಿಕೊಂಡು ಹೋಗ್ಲಿಕ್ಕೆ ನಿನಗೆ ಟೈಂ ಇದೆಯಾ?

**ಕ್ಲಾರ್ಕ್:** ಇಲ್ಲ. ಈಗ ಬ್ಯಾಡ, ಹ್ಯಾರಿ. ನಾನು ಆ ಟ್ರಕ್‌ನಲ್ಲೀಗ ಸ್ಯಾಲಿನಾಸ್‌ಗೆ ಹೋಗಬೇಕು.

**ಹ್ಯಾರಿ:** ಕ್ಲೇ ಸಮುದ್ರದ ತೀರದಲ್ಲೆಲ್ಲೊ ಇರಬೇಕು.

**ಕ್ಲಾರ್ಕ್:** [ಹತ್ತು ಡಾಲರಿನ ಮೂರು ನೋಟುಗಳನ್ನು ಹ್ಯಾರಿಗೆ ಕೊಡುತ್ತಾ] ಇದನ್ನ ಅವನಿಗೆ ಕೊಡು. ಮೂವತ್ತು ಡಾಲರ್. ಇದನ್ನ ನಿನಗೆ ನಾನು ಕೊಟ್ಟೆ ಅಂತ ಹೇಳ್ಬೇಡ.

**ಹ್ಯಾರಿ:** ಯಾಕೆ?

**ಕ್ಲಾರ್ಕ್:** ನಾನಿಲ್ಲಿಗೆ ಬಂದಿದ್ದೆ ಅಂತ ಅವನಿಗೆ ತಿಳಿಯೋದೇನೂ ಬೇಡ ಅಂತ. ಅವನು ಚೆನ್ನಾಗಿದಾನೆ ತಾನೇ?

**ಹ್ಯಾರಿ:** ಓ, ಚೆನ್ನಾಗಿದಾನೆ, ಕ್ಲಾರ್ಕ್. ಅವರೆಲ್ಲರೂ ಚೆನ್ನಾಗಿದಾರೆ.

**ಕ್ಲಾರ್ಕ್:** ಈ ದುಡ್ಡನ್ನ ಅವನ ಅಮ್ಮನಿಗೆ ಕೊಡಬೇಕೂಂತ ಹೇಳು.
[ಅವನು 'ಗಲ್' ಸುದ್ದಿಪತ್ರಿಕೆಯನ್ನೆತ್ತಿಕೊಳ್ಳುತ್ತಾನೆ.]

**ಹ್ಯಾರಿ:** ಖಂಡಿತ ಹೇಳ್ತೀನಿ, ಕ್ಲಾರ್ಕ್. ಆ ಪೇಪರ್ ಇವತ್ತು ಬೆಳಿಗ್ಗೆ ಬಂತು. ತಗೊಂಡು ಹೋಗು ಬೇಕಾದರೆ.

**ಕ್ಲಾರ್ಕ್:** ಥ್ಯಾಂಕ್ಸ್. [ಅವನು ಪೇಪರನ್ನು ಜೇಬಿನಲ್ಲಿಟ್ಟುಕೊಳ್ಳುತ್ತಾನೆ.] ಅಂದ್ಹಾಗೆ, ನಿಂದು ಹ್ಯಾಗೆ ನಡೆದಿದೆ, ಹ್ಯಾರಿ?

**ಹ್ಯಾರಿ:** ಪರವಾಗಿಲ್ಲ, ನಡೆದಿದೆ. ದಿನಕ್ಕೆ ಎರಡೋ ಮೂರೋ ಹೇರ್ ಕಟಿಂಗ್. ಓದಲಿಕ್ಕೆ ಬೇಕಾದಷ್ಟು ಸಮಯ. ಸ್ವಲ್ಪ ನಗು, ಸ್ವಲ್ಪ ಅನಿರೀಕ್ಷಿತ ಘಟನೆಗಳು. ಸಮುದ್ರ, ಮೀನು ಹಿಡಿಯೋದು.ಜೀವನ ಚೆನ್ನಾಗಿದೆ.

**ಕ್ಲಾರ್ಕ್:** ಕ್ಲೇ ಮೇಲೆ ಒಂದು ಕಣ್ಣಿಟ್ಟಿರು, ಏನು?-ಯಾಕೆ ಹೇಳ್ದೆ ಅಂದ್ರೆ-ಏನು ಮಾಡೋದು, ನಾನು ಹೋಗ್ಲೇ ಬೇಕಾಗಿತ್ತು .

**ಹ್ಯಾರಿ:** ಸರಿ.

**ಕ್ಲಾರ್ಕ್:** ಹೌದು. ಅಂದ್ಹಾಗೆ, ನಾನು ಉಳಿಸಲಿಕ್ಕೆ ಸಾಧ್ಯವಾಗಿರೋ ಮೊದಲನೇ ಹಣ ಅಂದ್ರೆ ಇದೇನೇ. ನಾನು ಇನ್ನೂ ಸ್ವಲ್ಪ ಗಳಿಸಿದಾಗ ಅದನ್ನ ಇಲ್ಲಿಗೆ ಕಳಿಸಬೇಕು ಅಂತಿದೀನಿ. ಅದನ್ನ ನೀವು ಕ್ಲೇಗೆ ಕೊಟ್ಟು ಮನೆಗೆ ತಗೊಂಡು ಹೋಗು ಅಂತ ಹೇಳಲಿಕ್ಕೆ ಬರುತ್ತೆ.

**ಹ್ಯಾರಿ:** ನೀನು ಏನು ಹೇಳ್ತೀಯೋ ಅದನ್ನ ಮಾಡ್ತೀನಿ, ಕ್ಲಾರ್ಕ್. [ಟ್ರಕ್ಕಿನ ಹಾರ್ನ್‌ನ ಶಬ್ದ ಕೇಳಿಸುತ್ತದೆ.]

**ಕ್ಲಾರ್ಕ್:** ಸರಿ... [ಅವನು ಬಾಗಿಲತ್ತ ನಡೆಯುತ್ತಾನೆ.] ತುಂಬ ಥ್ಯಾಂಕ್ಸ್, ಹ್ಯಾರಿ.

**ಹ್ಯಾರಿ:** ನಿನ್ನ ನೋಡಿ ಸಂತೋಷವಾಯ್ತು, ಕ್ಲಾರ್ಕ್.

[ಕ್ಲಾರ್ಕ್ ಲಾರಾಬೀ ಹೊರ ನಡೆಯುತ್ತಾನೆ. ಹ್ಯಾರಿ ಅವನನ್ನೇ ನೋಡುತ್ತಿದ್ದಾನೆ.

ಗೇರ್ ಬದಲಾಯಿಸುತ್ತಿರುವ ಟ್ರಕ್ಕಿನ ಶಬ್ದ. ಆನಂತರ ಅದು ಹೊರಡುವ ಶಬ್ದ. ಹ್ಯಾರಿ ಪುಸ್ತಕವೊಂದನ್ನು ಎತ್ತಿಕೊಳ್ಳುತ್ತಾನೆ, ಹ್ಯಾಟುಗಳನ್ನು ಬದಲಾಯಿಸುತ್ತಾನೆ, ಕುರ್ಚಿಯಲ್ಲಿ ಕೂರುತ್ತಾನೆ, ಮತ್ತು ಓದಲು ಶುರು ಮಾಡುತ್ತಾನೆ. ಸುಮಾರು ನಲವತ್ತು ವರ್ಷದ, ಒಳ್ಳೆಯ ಬಟ್ಟೆ ಧರಿಸಿದ, ಅವಸರದಲ್ಲಿರುವಂತೆ ತೋರುವ ವ್ಯಕ್ತಿಯೊಬ್ಬನ ಪ್ರವೇಶ.]

**ವ್ಯಕ್ತಿ:** ನನಗೆ ಹೇರ್ ಕಟಿಂಗ್ ಮಾಡ್ತೀರಾ ಸರಸರ ಅಂತ?

**ಹ್ಯಾರಿ:** [ಕುರ್ಚಿಯಿಂದೆದ್ದು] ಸರಸರ ಅಂದ್ರೆ ಯಾವ ಥರ?

**ವ್ಯಕ್ತಿ:** [ಕೂತುಕೊಳ್ಳುತ್ತಾ] ಅದೇನೇ ಇರಲಿ, ಒಟ್ಟಿನಲ್ಲಿ ಹೇರ್ ಕಟಿಂಗ್ ಆಗುತ್ತಾ?

**ಹ್ಯಾರಿ:** [ವ್ಯಕ್ತಿಗೆ ಏಪ್ರನ್ ಹಾಕುತ್ತಾ] ಆಗುತ್ತೆ. ಅಂದ್ಹಾಗೆ, ನಾನು ನಿಮ್ಮನ್ನ ಈ ಹಿಂದೆ ಯಾವತ್ತೂ ನೋಡಿಲ್ಲ ಅಂತ ಕಾಣುತ್ತೆ.

**ವ್ಯಕ್ತಿ:** ಇಲ್ಲ. ನಾನು ನನ್ನ ಕಾರಿನ ಆಯಿಲ್ ಚೇಂಜ್ ಮಾಡ್ಲಿಕ್ಕೆ ಬಿಟ್ಟು ಬಂದಿದೀನಿ. ಅಷ್ಟರೊಳಗೆ ಇಲ್ಲಿ ಹೇರ್ ಕಟಿಂಗ್ ಮಾಡಿಕೊಂಡು ಹೋಗಬಹುದು ಅಂತ ಬಂದೆ. ನಾನು ಹಾಲಿವುಡ್‌ಗೆ ಹೋಗೋದ್ರೊಳಗೆ, ಅಂದ್ರೆ ಬೇಗ, ಆಗುತ್ತಲ್ಲವಾ? ಇಲ್ಲಿಂದ ಹಾಲಿವುಡ್ ಎಷ್ಟು ಮೈಲೀನೋ?

**ಹ್ಯಾರಿ:** ಹೈವೇ ಮೂಲಕ ಇನ್ನೂರು ಮೈಲಿ. ಸೀದಾ ದಾರಿ. ದಾರಿ ತಪ್ಪೊಲ್ಲ.

**ವ್ಯಕ್ತಿ:** ಇದ್ಯಾವ ಊರು?

**ಹ್ಯಾರಿ:** ಓ. ಕೆ. ಬೈ-ದ ಸಿ .

**ವ್ಯಕ್ತಿ:** ಇಲ್ಲಿ ಜನ ಏನು ಮಾಡ್ತಾರೆ?

**ಹ್ಯಾರಿ:** ಏನು ಮಾಡ್ತಾರೆ ಅಂದ್ರಾ? ನಾನು ಹೇರ್ ಕಟಿಂಗ್ ಮಾಡ್ತೀನಿ. ವೊಜೆಕ್ ಅನ್ನೋ ನನ್ನ ಸ್ನೇಹಿತ ವಾಚು, ರೇಡಿಯೋ, ಅಲಾರಂ ಗಡಿಯಾರ ರಿಪೇರಿ ಮಾಡ್ತಾನೆ, ಮತ್ತೆ ಆಭರಣ ಮಾರ್ತಾನೆ.

**ವ್ಯಕ್ತಿ:** ಯಾರಿಗೆ ಮಾರ್ತಾನೆ?

**ಹ್ಯಾರಿ:** ಇಲ್ಲಿನ ಜನರಿಗೆ. ಅವು ಸಾಧಾರಣವಾಗಿ ಅಸಲಿ ಆಭರಣ ಅಲ್ಲ.

**ವ್ಯಕ್ತಿ:** ಇಲ್ಲಿ ಫ್ಯಾಕ್ಟರಿ ಉಂಟೋ? ಆಮೇಲೆ ಕೋಳಿಸಾಕಣೆ, ಮೀನುಗಾರಿಕೆ, ಇತ್ಯಾದಿ?

**ಹ್ಯಾರಿ:** ಹೈವೇ ಮೇಲೊಂದಿಷ್ಟು ಅಂಗಡಿಗಳು, ಆಚೆ ಗುಡ್ಡಗಳಲ್ಲಿ ಕೆಲವು ಮನೆಗಳು, ಒಂದು ಚರ್ಚು,ಮತ್ತೆ ಒಂದು ಸ್ಕೂಲು. ನೀವು ಸೇಲ್ಸ್‌ಮನ್ನಾ?

**ವ್ಯಕ್ತಿ:** ಅಲ್ಲ, ನಾನೊಬ್ಬ ಲೇಖಕ.

**ಹ್ಯಾರಿ:** ನೀವು ಏನು ಬರೀತೀರಾ?

**ವ್ಯಕ್ತಿ:** ಎಲ್ಲದರ ಬಗ್ಗೆ ಒಂದು ಚೂರು. ಹೇರ್ ಕಟಿಂಗ್‌ದೇನಾಯ್ತು?

**ಹ್ಯಾರಿ:** ನೀವು ಇವತ್ತು ರಾತ್ರಿ ಹಾಲಿವುಡ್‌ನಲ್ಲಿರಬೇಕಾ?

**ವ್ಯಕ್ತಿ:** ಇವತ್ತು ರಾತ್ರಿ ಎಲ್ಲೂ ಇರಬೇಕೂಂತೇನೂ ಅಲ್ಲ. ಆದರೆ ವಿಚಾರ ಹಾಗಿತ್ತು. ಯಾಕೆ?

**ಹ್ಯಾರಿ:** ಏನಿಲ್ಲ. ನಾನ್ಯಾವಾಗ್ಲೂ ಏನಂತೀನಂದ್ರೆ ಒಬ್ಬ ಲೇಖಕ ಇಂಥ ಜಾಗಕ್ಕೆ ಬಂದು, ಸ್ವಲ್ಪ ಹೊತ್ತು ಇದ್ದು ಇಲ್ಲಿನ ಎಲ್ಲವನ್ನೂ ಗಮನಿಸಿದರೆ ಒಂದು ಪುಸ್ತಕ ಅಥವಾ ಒಂದು ನಾಟಕಾನೇ ಬರೀಬಹುದು ಅಂತ.

**ವ್ಯಕ್ತಿ:** ಅಥವಾ ಅವನು ಕವಿಯಾಗಿದ್ರೆ ಒಂದು ಸಾನೆಟ್ಟು.

**ಹ್ಯಾರಿ:** ನಿಮಗೆ ಷೇಕ್ಸ್‌ಪಿಯರ್‌ನ ಸಾನೆಟ್ಟುಗಳು ಇಷ್ಟಾನಾ?

**ವ್ಯಕ್ತಿ:** ಅವು ಇಂಗ್ಲೀಷಿನಲ್ಲಿ ಶ್ರೇಷ್ಠ ಅನ್ನಬಹುದು.

**ಹ್ಯಾರಿ:** ಇಲ್ಲಿ ನನ್ನ ಅಂಗಡಿಗೆ ಲೇಖಕರು ಬರೋದು ಅಪರೂಪಾನೇ. ನಿಜ ಹೇಳಬೇಕೂಂದ್ರೆ ಈ ಇಪ್ಪತ್ತು ವರ್ಷದಲ್ಲಿ ಇಲ್ಲಿಗೆ ಬಂದಿರೋ ಸಾಹಿತಿಗಳು ಅಂದ್ರೆ ನೀವೊಬ್ರೇನೇ, ಫೆಂಟನ್ ಬಿಟ್ರೆ

**ವ್ಯಕ್ತಿ:** ಯಾರಾತ?

**ಹ್ಯಾರಿ:** ಫೆಂಟನ್ ಲಾಕ್‌ಹಾರ್ಟ್.

**ವ್ಯಕ್ತಿ:** ಏನು ಬರೀತಾನೋ?

**ಹ್ಯಾರಿ:** ಆತ ಒಂದು ಪತ್ರಿಕೆ ನಡೆಸ್ತಾನೆ. ಪೂರ್ತಿ ಅವನೇ ಬರೆಯೋದು.

**ವ್ಯಕ್ತಿ:** ಹೌದಾ? ಸರಿ... ಹೇರ್ ಕಟಿಂಗ್‌ದೇನಾಯ್ತು?

**ಹ್ಯಾರಿ:** ಮಾಡ್ತೀನಿ.

[ಹ್ಯಾರಿ ವ್ಯಕ್ತಿಯ ತಲೆಗೆ ಹಾಟ್ ಟವಲ್ ಹಾಕುತ್ತಾನೆ. ಮಿಸ್ ಮ್ಯಾಕ್ ಕಟಿಯಾನ್ ಬರುತ್ತಾಳೆ. ಅವಳ ಕೈಯಲ್ಲಿ ಸೀಟಿಲ್ಲದ ಹಾಗೂ ಒಂದು ಕಾಲಿಲ್ಲದ ಬೆತ್ತದ ಕುರ್ಚಿ ಇದೆ. ಅವಳ ಜೊತೆ ಕ್ಲೇ ಬಂದಿದ್ದಾನೆ. ಅವನ ಕೈಯಲ್ಲಿ ಏನೋ ಇದೆ. ಇವರ ಜೊತೆ ಗ್ರೀಲಿ ಎಂಬ ಚಿಕ್ಕ ಹುಡುಗನಿದ್ದಾನೆ. ಅವನ ಕೈಯಲ್ಲಿ ಸಮುದ್ರದ ನೀರಿನ ಒಂದು ಬಾಟಲಿ ಇದೆ. ಇವರ ಜೊತೆ ರೊಕ್ಸಾನಾ ಕೂಡ ಇದ್ದಾಳೆ. ಅವಳ ಕೈಯಲ್ಲಿ ನಾನಾ ನಮೂನೆಯ ಚಿಪ್ಪುಗಳಿವೆ.]

**ಕ್ಲೇ:** ಮಿಸ್ಟರ್ ವ್ಯಾನ್ ಡುಸೆನ್, ನನ್ನ ಹತ್ರ ಒಂದು ಮೃದ್ವಂಗಿ ಇದೆ. ನೋಡಿ, ಕಪ್ಪೆ ಚಿಪ್ಪು ಮೀನು ಅಂತಾರಲ್ಲ ಅದು. ಮುತ್ತಿರೋದು.

**ಗ್ರೀಲಿ:** ಅದರಲ್ಲಿ ಯಾವ ದೊಡ್ಡ ಮುತ್ತೂ ಇಲ್ಲ ಅಂತ ಮಿಸ್ ಮ್ಯಾಕ್ ಕಟಿಯಾನ್ ಹೇಳ್ತಾರೆ.

**ಹ್ಯಾರಿ:**[ಮಿಸ್ ಮ್ಯಾಕ್ ಕಟಿಯಾನ್‌ಳತ್ತ ನೋಡಿ] ಅಂದ್ರೆ ಅದರಲ್ಲಿ ಸಣ್ಣದೇನಾದ್ರೂ ಇರಬಹುದು ಅಂತ ಹೇಳ್ತಾರಾ?

**ಗ್ರೀಲಿ:** ಏನೋ ಗೊತ್ತಿಲ್ಲ. ನನಗೆ ಈ ಬಾಟಲಿಯಲ್ಲಿ ಸಮುದ್ರದ ನೀರು ಇದೆ. ಅನ್ನೋದು ಗೊತ್ತು.

**ಮಿಸ್ ಮ್ಯಾಕ್‌ಕಟಿಯಾನ್:** ಮಿಸ್ಟರ್ ವ್ಯಾನ್‌ಡುಸೆನ್, ಕ್ಲೇ ಲಾರಾಬೀ ಹೇಳ್ತಾನೆ– ಅವನಿಗೆ ಬೀಚ್ ಮೇಲೆ ಸಿಕ್ಕ ಈ ಮೃದ್ವಂಗಿಯಲ್ಲಿ ಖಂಡಿತ ಒಂದು ಮುತ್ತು ಇದೆ ಅಂತ.

**ಕ್ಲೇ:** ಅದು ನನಗೆ ಸಿಕ್ಕಿದ್ದು ಅಂತ ಅಲ್ಲ. ನಾನು ಅದನ್ನ ಹುಡುಕಲಿಕ್ಕೆ ಹೋಗಿದ್ದೆ. ನಿಮಗೆ ಬ್ಲ್ಯಾಕ್ ರಾಕ್ ಗೊತ್ತಲ್ಲ, ಮಿಸ್ಟರ್ ವ್ಯಾನ್ ಡುಸೆನ್? ಅದರ ಹತ್ರ ಹೋಗ್ಲಿಕ್ಕೆ ಯಾರಿಗಾದ್ರೂ ಕಷ್ಟಾನೇ. ಯಾಕಂದ್ರೆ ಅಲ್ಲಿ ಅಲೆಗಳಂತೂ ಭಯಂಕರವಾಗಿರ್ತವೆ. ಆದರೆ ಸ್ವಲ್ಪ ಹೊತ್ತಿನ ಮುಂಚೆ ಹಾಗಿರಲಿಲ್ಲ. ಹಾಗಾಗಿ ನಾನು ಆ ಕಡೆ ಹೋದೆ, ಆ ಮೇಲೆ ಹುಡುಕ್ತಾ ಹೋದಾಗ ಇದು ಸಿಕ್ಕಿತು.

**ಹ್ಯಾರಿ:** ನಾನು ಇಲ್ಲಿ ಇಪ್ಪತ್ನಾಲ್ಕು ವರ್ಷದಿಂದ ಇದ್ದೀನಿ, ಕ್ಲೇ. ಆದರೆ ನಾನು ಇದೇ ಮೊದಲನೇ ಸಲ ಕೇಳಿರೋದು ನಮ್ಮ ಬೀಚಿನಲ್ಲಿ ಮೃದ್ವಂಗಿ ಸಿಕ್ಕಿದೆ ಅನ್ನೋದು–ಬ್ಲ್ಯಾಕ್ ರಾಕ್‌ನಲ್ಲೇ ಇರಲಿ, ಬೇರೆ ಕಡೇನೇ ಇರಲಿ.

**ಕ್ಲೇ:** ಆದ್ರೆ, ಮಿಸ್ಟರ್ ವ್ಯಾನ್ ಡುಸೆನ್, ನನಗೆ ಸಿಕ್ಕಿದೆಯಲ್ಲ. ಅದು ಗಟ್ಟಿಯಾಗಿ ಮುಚ್ಚಿಕೊಂಡಿದೆ, ಜೀವಂತವಾಗಿದೆ, ಮತ್ತದರಲ್ಲಿ ಒಂದು ಮುತ್ತಿದೆ, ಮುನ್ನೂರು ಡಾಲರ್‌ನಷ್ಟು ಬೆಲೇದು.

**ಗ್ರೀಲಿ:** ದೊಡ್ಡ ಮುತ್ತು.

**ಮಿಸ್ ಮ್ಯಾಕ್‌ಕಚಿಯಾನ್:** ಇಲ್ನೋಡಿ ಮಕ್ಕಳೆ, ನಾನು ಹೇಳೋದು ಕೇಳಿ. ಸತ್ಯವನ್ನ ತಿಳಕೊಳ್ಳಲಿಕ್ಕೆ–ಅಂದ್ರೆ ನಮ್ಮನ್ನ ಬಂಧಿಸೋವಂಥದ್ದಲ್ಲ, ಬದಲಾಗಿ ಬಿಡುಗಡೆ ಮಾಡೋವಂಥ ಸತ್ಯವನ್ನ ತಿಳಕೊಳ್ಳಲಿಕ್ಕೆ–ತುಂಬ ಬೇಗ ಆಯ್ತು ಅಂತೇನೂ ಅಲ್ಲ. ನಿಜ ಏನಪ್ಪ ಅಂದ್ರೆ, ಕ್ಲೇ ನಿನಗೆ ಹಣ ಬೇಕು, ಯಾಕಂದ್ರೆ ನಿನಗೆ ಹಣ ಬೇಕಿದೆ. ಆಮೇಲೆ, ಇದೂನೂ ನಿಜಾನೇ–ಯಾವುದಂದ್ರೆ ನಿನಗೆ ಮೃದ್ವಂಗಿ ಸಿಕ್ಕಿದೆಅನ್ನೋದು. ಆಮೇಲೆ, ಇದೂನು ನಿಜಾನೆ, ಯಾವುದಂದ್ರೆ ಇದರಲ್ಲಿ ಮುತ್ತು ಇಲ್ಲ ಅನ್ನೋದು.

**ಗ್ರೀಲಿ:** ನಿಮಗೆ ಹ್ಯಾಗೆ ಗೊತ್ತು? ನೀವು ನೋಡಿದೀರಾ?

**ಮಿಸ್ ಮ್ಯಾಕ್ ಕಚಿಯಾನ್:** ಇಲ್ಲ. ಆದ್ರೆ ಕ್ಲೇನೂ ನೋಡಿಲ್ಲ. ಆಮೇಲೆ, ಒಂದು ಮಿಲಿಯನ್ ಪೈಕಿ ಒಂದು ಮೃದ್ವಂಗಿಯಲ್ಲಿ ಸಿಗ್ತು ಅಂತಾನೇ ಆದ್ರೂ, ಸತ್ಯ ಏನಪ್ಪ ಅಂದ್ರೆ ಇದು ಅಂಥ ಒಂದು–ಅಂದ್ರೆ ಒಂದು ಮಿಲಿಯನ್‌ನಲ್ಲಿನ ಒಂದು ಮೃದ್ವಂಗಿ ಅಂತಾನೂ ಅಲ್ಲ.

**ಕ್ಲೇ:** ಇದರಲ್ಲಿ ಒಂದು ದೊಡ್ಡ ಮುತ್ತಿದೆ.

**ಮಿಸ್ ಮ್ಯಾಕ್‌ಕಚಿಯಾನ್:** ಮಿಸ್ಟರ್ ವ್ಯಾನ್ ಡುಸೆನ್, ನಾವು ಇದನ್ನ ಒಡೆದು ತೋರಿಸೋಣ್ವಾ? ಕ್ಲೇ ಮತ್ತೆ ಅವನ ತಂಗಿ ರೊಕ್ಸಾನಾಗೆ, ಮತ್ತೆ ಅವರ ಸ್ನೇಹಿತ ಗ್ರೀಲಿಗೆ–ಇದರಲ್ಲಿ ಮುತ್ತಿಲ್ಲ ಅನ್ನೋದನ್ನ?

**ಹ್ಯಾರಿ:** ಒಂದು ನಿಮಿಷ ತಾಳಿ, ಮಿಸ್ ಮ್ಯಾಕ್ ಕಚಿಯಾನ್. ಈಗ ನಿಮ್ಮ ಹತ್ರ ಇರೋದು ಏನು?

**ಮಿಸ್ ಮ್ಯಾಕ್ ಕಚಿಯಾನ್:** ಕುರ್ಚಿ ಅಲ್ಲವಾ? ನಿಮಗೆ ಕಾಣೋಹಾಗೆ?

**ಹ್ಯಾರಿ:** ಅದಕ್ಕೆ ಎಷ್ಟು ಕಾಲಿವೆ?

**ಮಿಸ್ ಮ್ಯಾಕ್ ಕಚಿಯಾನ್:** ಮೂರೇ ತಾನೆ ಇರೋದು? ನನಗೆ ಮೂರರವರೆಗೆ ಎಣಿಸಲಿಕ್ಕೆ ಬರುತ್ತೆ ಅಂದ್ಕೊಂಡಿದೀನಿ.

**ಹ್ಯಾರಿ:** ಕೇವಲ ಮೂರು ಕಾಲಿನ ಕುರ್ಚಿಯಿಂದ ನಿಮಗೇನಾದ್ರೂ ಉಪಯೋಗ ಇದೆಯಾ?

**ಮಿಸ್ ಮ್ಯಾಕ್ ಕಚಿಯಾನ್:** ನಾನೂ ಈ ಊರಿನಲ್ಲಿನ ಎಲ್ಲರಂತೆ ಸಮುದ್ರದಿಂದ ಏನೇನೋ ಸಾಮಾನು ತರ್ತೀನಿ.

**ಹ್ಯಾರಿ:** ಆದ್ರೆ ಊರಲ್ಲಿನ ಎಲ್ರೂ ಅಲ್ಲ. ಮಕ್ಕಳು, ಜಡ್ಜ್ ಆ್ಯಪಲ್ ಗಾರ್ತ್, ಫೆಂಟನ್ ಲಾಕ್ ಹಾರ್ಟ್ ಮತ್ತು ನಾನು. ಅಷ್ಟೆ.

**ಮಿಸ್ ಮ್ಯಾಕ್‌ಕಚಿಯಾನ್:** ಒಟ್ಟಿನಲ್ಲಿ, ಮಕ್ಕಳು, ಜಡ್ಜ್ ಆ್ಯಪಲ್ ಗಾರ್ತ್, ಫೆಂಟನ್ ಲಾಕ್ ಹಾರ್ಟ್ ಮತ್ತು ನೀವು. ಜಡ್ಜ್ ಆ್ಯಪಲ್ ಗಾರ್ತ್? ಅವರು ಯಾರು?

**ಹ್ಯಾರಿ:** ಅವರು ಒಂದ್ಸಲ ಜಾತ್ರೇಲಿ ಹಂದಿಗಳ ಜಡ್ಜ್ ಆಗಿದ್ರು, ಅದಕ್ಕೇ ನಾವು ಅವರನ್ನ ಜಡ್ಜ್ ಅಂತೀವಿ.

**ಮಿಸ್ ಮ್ಯಾಕ್ ಕಚಿಯಾನ್:** ಹಂದಿ ಜಡ್ಜಾ? ಅವರು ಅದನ್ನೂ ಮಾಡಿದ್ರಾ?

**ಹ್ಯಾರಿ:** ಯಾರೂ ಸರಿಯಾಗಿ ನೋಡಿಲ್ಲ. ಆದರೆ ಹಾಗೆ ಮಾಡಿದ್ದಾಗಿ ಅವರೇ ಹೇಳಿದ್ದರಂತೆ.

**ಮಿಸ್ ಮ್ಯಾಕ್‌ಕಚಿಯಾನ್:** ಅಂದ್ರೆ ಅವರ ಹೇಳಿದ ಮಾತಿನ ಮೇಲೆ ಅವರನ್ನ ಜನ ಜಡ್ಜ್ ಆಪಲ್ ಗಾರ್ತ್ ಅಂತ ಕರೀಲಿಕ್ಕೆ ಶುರುಮಾಡಿದ್ರು ಅನ್ನಿ.

**ಹ್ಯಾರಿ:** ಹೌದು.

**ಮಿಸ್ ಮ್ಯಾಕ್‌ಕಚಿಯಾನ್:** ಅವರ ಮಾತಿನ ಆಧಾರದ ಮೇಲೆ ಅದ ಪ್ರಕಾರ ಈಗ ಕ್ಲೇಸ ಮೃದ್ವಂಗಿಯಲ್ಲಿ ಒಂದು ದೊಡ್ಡ ಮುತ್ತಿದೆ ಅಂತ ಹೇಳಬಹುದು ಅಂತ ತಾನೆ? ಯಾಕಂದ್ರೆ ಅವನು ಹಾಗೆ ಹೇಳ್ತಾನೆ ಅಂತ!

**ಹ್ಯಾರಿ:** ನಾನು ಹಾಗೇನೂ ಹೇಳ್ಲಿಲ್ಲ.

**ಮಿಸ್ ಮ್ಯಾಕ್ ಕಚಿಯಾನ್:** ನಾವೇನು ಮಧ್ಯಯುಗದಲ್ಲಿ ಇದ್ದೇವಾ, ಮಿಸ್ಟರ್ ವ್ಯಾನ್ ಡುಸೆನ್?

**ಗ್ರೀಲಿ:** ಇಲ್ಲ. ಇದು 1953, ಮಿಸ್ ಮ್ಯಾಕ್ ಕಚಿಯಾನ್.

**ಮಿಸ್ ಮ್ಯಾಕ್‌ಕಚಿಯಾನ್:** ಹೌದು, ಗ್ರೀಲಿ, ಮತ್ತು ನಾನು ಹೇಳೋದು ಸಿದ್ಧಪಡಿಸಲಿಕ್ಕಾಗಿ ಈಗ ನೀನಷ್ಟು ಹೇಳಬಹುದು ಅಂದ್ರೆ ನಿನ್ನ ಬಾಟಲಿಯಲ್ಲಿರೋದು ನೀರು ಅಂತ, ಬೇರೆ ಏನೂ ಅಲ್ಲ.

**ಗ್ರೀಲಿ:** ಸಮುದ್ರದ ನೀರು.

**ಮಿಸ್ ಮ್ಯಾಕ್‌ಕಚಿಯಾನ್:** ಹೌದು. ಬೇರೆ ಏನೂ ಅಲ್ಲ.

**ಗ್ರೀಲಿ:** ಸರಿ. ಆದ್ರೆ ನೀರಲ್ಲಿ ಏನೇನೋ ಸಣ್ಣ ಸಣ್ಣ ವಸ್ತುಗಳಿರ್ತವೆ. ನಿಮಗದು ಮೊದಲು ಕಾಣ್ಸಲ್ಲ, ಆದ್ರೆ ಅವು ಆಮೇಲೆ ಕಾಣಿಸ್ತವೆ. ಸಮುದ್ರದ ನೀರಿನ ತುಂಬ ಏನೇನೋ ಇರುತ್ತೆ.

**ಮಿಸ್ ಮ್ಯಾಕ್‌ಕಚಿಯಾನ್:** ಉಪ್ಪು, ಬಹುಶ:

**ಗ್ರೀಲಿ:** ಅಲ್ಲ. ಜೀವಂತವಾಗಿರುವಂಥದ್ದು. ನೀವು ಸರಿಯಾಗಿ ನೋಡಿದರೆ ಅಂಥ ಕೆಲವನ್ನ ಕಾಣಬಹುದು.

**ಮಿಸ್ ಮ್ಯಾಕ್‌ಕಚಿಯಾನ್:** ಅವನ್ನ ನೀನು ಕಾಣ್ತಾ ಇದೀಯ ಅಂತ ಕಲ್ಪಿಸಿಕೊಳ್ತೀಯೇನೋ ಮಿಸ್ಟರ್ ವ್ಯಾನ್ ಡುಸೆನ್, ನೀವು ನನಗೆ ಸಹಾಯ ಮಾಡೋವರಿದೀರೋ ಅಥವಾ ಇಲ್ಲವೋ?

**ಹ್ಯಾರಿ:** ಏನು ಸಹಾಯ? ಹೇಳಿ.

**ಮಿಸ್ ಮ್ಯಾಕ್‌ಕಚಿಯಾನ್:** ಮೃದ್ವಂಗಿ ಚಿಪ್ಪನ್ನ ತೆಗೆದು ತೋರಿಸಬೇಕು. ಆಗ ಕ್ಲೇಗೆ ಗೊತ್ತಾಗುತ್ತೆ, ಅದರಲ್ಲಿ ಮುತ್ತು ಇಲ್ಲ ಅಂತ. ಆಗ ಅವನು ಸತ್ಯವನ್ನು ಎದುರಿಸಬಲ್ಲ. ನಮ್ಮಲ್ಲಿ ಪ್ರತಿಯೊಬ್ಬರೂ ಮಾಡಬೇಕಾಗಿರೋ ಹಾಗೆ.

**ಕ್ಲೇ:** [ಚಿಪ್ಪು ಮೀನನ್ನು ಹ್ಯಾರಿಗೆ ಕೊಡುತ್ತಾ] ಅದರಲ್ಲೊಂದು ದೊಡ್ಡ ಮುತ್ತು ಇದೆ, ಮಿಸ್ಟರ್ ವ್ಯಾನ್‌ಡುಸೆನ್.

**ಹ್ಯಾರಿ:** [ಚಿಪ್ಪನ್ನು ಪರೀಕ್ಷಿಸುತ್ತಾ] ಕ್ಲೇ... ರೊಕ್ಸಾನಾ... ಗ್ರೀಲಿ... ನೀವು ಸ್ವಲ್ಪ ವೊಜೆಕ್‌ನ ಮನೆಗೆ ಹೋಗಿ ಬಂದರೆ ಹ್ಯಾಗೆ ಅಂತ ಯೋಚನೆ ಮಾಡ್ತಿದ್ದೆ. ಪುರುಸೊತ್ತು ಸಿಕ್ಕ ತಕ್ಷಣವೇ ಇಲ್ಲಿಗೆ ಬರಲಿಕ್ಕೆ ಹೇಳಿ ಆತನಿಗೆ. ಇದನ್ನ ಅವನು ತೆರೆದು ನೋಡಿದರೆ ಉತ್ತಮ ಅಂತ ನನಗನ್ನಿಸೋದು. ನಾನು ಮುತ್ತನ್ನ ಒಡೆದುಹಾಕಿಬಿಡ್ತೀನೊ ಏನೊ ಎಂಬ ಭಯ ನನಗೆ.

**ಕ್ಲೇ, ಗ್ರೀಲಿ–ಮತ್ತು ರೊಕ್ಸಾನಾ:** ಆಯ್ತು, ಹೋಗ್ತಿವಿ, ಮಿಸ್ಟರ್ ವ್ಯಾನ್‌ಡುಸೆನ್. [ಅವರು ಹೊರ ನಡೆಯುತ್ತಾರೆ.]

**ಮಿಸ್ ಮ್ಯಾಕ್‌ಕಚಿಯಾನ್:** ಯಾವ ಮುತ್ತು? ಅರ್ರೀ, ನೀವು ಈ ಹುಡುಗರ ತಲೇಲಿ ಏನು ತುಂಬಬೇಕು ಅಂತಿದೀರ? ಅವರ ಮೇಲಿನ ನಿಮ್ಮ ಪ್ರಭಾವದ ವಿರುದ್ಧವಾಗಿ ನಾನು ಅವರಿಗೆ ಸತ್ಯದ ನಿಯಮಗಳನ್ನು ಹೇಗೆ ತಾನೆ ಕಲಿಸಲಿಕ್ಕೆ ಸಾಧ್ಯ?

**ಹ್ಯಾರಿ:** ಮಿಸ್ ಮ್ಯಾಕ್‌ಕಚಿಯಾನ್, ಓ. ಕೆ. ಬೈ ದ ಸೀ ಊರಿನ ಜನ ಬಡವರು. ಅವರಲ್ಲಿ ಬಹಳ ಜನ ಹೇರ್ ಕಟಿಂಗ್ ಮಾಡಿಕೊಂಡಿದ್ದಕ್ಕೆ ದುಡ್ಡು ಕೊಡೋ ಸ್ಥಿತಿಯಲ್ಲಿ ಇಲ್ಲ. ಈ ಊರಿನ ಬಗ್ಗೆ ಏನು ಮಾಡಲಿಕ್ಕೂ ಬರಲ್ಲ. ಆದರೆ ಇಲ್ಲಿ ಸಮುದ್ರ ಇದೆ. ಹಾಗೇನೇ ಬೆಟ್ಟ–ಗುಡ್ಡಗಳೂ ಇವೇ. ಎಲ್ಲೊ ಕೆಲವರಿಗೆ ಉತ್ತರ ಅಥವಾ ದಕ್ಷಿಣ ರಾಜ್ಯಗಳಲ್ಲಿ ಒಂದೆರಡು ತಿಂಗಳ ಮಟ್ಟಿಗೆ ಕೆಲಸ ಸಿಗುತ್ತೆ. ಅದರ ನಂತರ ಅವರಿಗೆ ಮನೆಯ ನೆನಪು ಕಾಡಿ ಅವರು ವಾಪಸ್ಸು ಬಂದಾಗ ಅರ್ಧಜೀವ ಆಗಿರುತ್ತೆ. ಆ ವರ್ಷದ ಉಳಿದ ತಿಂಗಳುಗಳಲ್ಲಿ ಅವರು ಹೆಚ್ಚು ಕಡಿಮೆ ಏನೂ ಇಲ್ಲದಂತೆ ಬದುಕಿರ್ತಾರೆ. ಕೆಲವರಿಗೆ ಪೆನ್ಷನ್ ಸಿಗುತ್ತೆ. ಪ್ರತಿ ಮನೆಯವರಿಗೂ ಒಂದಿಷ್ಟು ತೋಟ ಇರುತ್ತೆ. ಸ್ವಲ್ಪ ಕೋಳಿಗಳಿರ್ತವೆ. ಮತ್ತವರು ತರಕಾರಿ, ಮೊಟ್ಟೆ ಮಾರಿ ಒಂದಿಷ್ಟು ಹಣ ಸಂಪಾದಿಸ್ತಾರೆ. ಸುಮಾರು ಒಂದು ಸಾವಿರ ಜನ ಸಂಖ್ಯೆ ಇರುವ ಈ ಊರಲ್ಲಿ ಒಬ್ಬ ಶ್ರೀಮಂತನೂ ಇಲ್ಲ. ಅಷ್ಟಾಕೆ, ಸ್ವಲ್ಪ ಮಟ್ಟಿಗೆ ಅನುಕೂಲಸ್ಥ

ಅನ್ನೋ ಮನುಷ್ಯನೂ ಇಲ್ಲ. ಆದ್ರೂ ಕೂಡ ನಾನು ಕಂಡಿರೋ ಅತ್ಯಂತ ಶ್ರೀಮಂತರೆಂದರೆ ಇವರೇ. ನೀವು ತಿಳಿದಿರೊ ಹಾಗೆ ಕ್ಲೇಗೆ ಹಣ ಏನೂ ಬೇಕಿಲ್ಲ. ಅವರಿಗೆ ಬೇಕಾಗಿರೋದು ಅವನ ಅಪ್ಪ ವಾಪಸ್ಸು ಮನೆಗೆ ಬರೋದು. ಮತ್ತವನು ವಾಪಸ್ ಬರ್ಲಿಕ್ಕೆ ಹಣ ಸಹಾಯ ಮಾಡುತ್ತೆ ಅಂತ ಅವನು ತಿಳಕೊಂಡಿರೋದು. ವಿಷಯ ಏನೂ ಅಂದ್ರೆ, ನೀವು ಹೊರಡೋ ಹೊತ್ತಿಗೆ ಒಬ್ಬ ವ್ಯಕ್ತಿ ಒಳಗೆ ಬಂದ್ನಲ್ಲ, ಅವನೇ ಕ್ಲೇನ ಅಪ್ಪ. ನನ್ನ ಕೈಲಿ ಮೂವತ್ತು ಡಾಲರ್ ಇಟ್ಟು ಅದನ್ನ ಕ್ಲೇಗೆ ಕೊಡ್ಲಿಕ್ಕೆ ಹೇಳಿದ–ಮನೆಗೆ ತಗೊಂಡು ಹೋಗ್ಲಿಕ್ಕೆ ಅಂತ. ಕ್ಲೇನ ಅಪ್ಪ ಮತ್ತು ಅಮ್ಮ ಒಬ್ಬರಿಗೊಬ್ಬರು ಸರಿ ಇಲ್ಲ. ಕ್ಲಾರ್ಕ್ ಲಾರಾಬೀ ಒಳ್ಳೆ ಮನುಷ್ಯ. ಅವನು ಕುಡುಕನೇನೂ ಅಲ್ಲ. ಆದ್ರೆ ಅವನು ನಾಲ್ಕು ಮಕ್ಕಳನ್ನು ಸಾಕಬೇಕಾಗಿರೋದ್ರಿಂದ ಅವನಿಗೆ ಮುಖ ತೋರಿಸಲಿಕ್ಕೆ ನಾಚಿಕೆ ಆಗಿ ಕುಡೀಲಿಕ್ಕೆ ಶುರುಮಾಡ್ತಾನೆ. ತನ್ನ ಮಕ್ಕಳು ಒಳ್ಳೆಯ ಮತ್ತು ತಮ್ಮದೇ ಆದಂಥ ಸ್ವಂತ ಮನೆಯಲ್ಲಿ ವಾಸವಾಗಿರಬೇಕು, ಒಳ್ಳೆ ಬಟ್ಟೆ ಹಾಕ್ಕೋಬೇಕು, ಚೆನ್ನಾಗಿ ಬೆಳೀಬೇಕು ಅನ್ನೋ ಸಹಜ ಆಸೆ ಅವನಿಗೆ. ಅವನ ಹೆಂಡತಿಗೂ ಅದೇ ಆಸೆ. ಆದರೆ ಅವರ ಹತ್ರ ಹಣ ಇಲ್ಲವಲ್ಲ. ಅದಕ್ಕೋಸ್ಕರ ಅವರು ಜಗಳ ಆಡ್ತಾರೆ. ಹೋದ ತಿಂಗಳಂತೂ ತುಂಬ ಸಲ ಜಗಳ ಆಯ್ತು. ಹಾಗಾಗಿ ಕ್ಲಾರ್ಕ್ ಮನೆ ಬಿಟ್ಟು ಹೊರಟುಹೋದ. ಈಗ ಅವನು ಸ್ಯಾಲಿನಾಸ್‌ನಲ್ಲಿ ಕೆಲಸ ಮಾಡ್ತಿದಾನೆ. ಅವನು ಹೀಗೇ ಮನೆಯಿಂದ ದೂರ ಇರಲೂಬಹುದು, ವಾಪಸ್ ಬಂದರೂ ಬರಬಹುದು, ಹೇಳಾಕಾಗಲ್ಲ. ಅದು ಯಾತರ ಮೇಲೆ ನಿಂತಿದೆ ಅಂದ್ರೆ ...ಏನೋ, ಹೇಳೋದು ಕಷ್ಟ...ಬಹುಶ: ಈ ಮೃದ್ವಂಗಿ ಮೇಲೆ. ಬಹುಶ; ಕ್ಲೇ ಮೇಲೆ. [ಸ್ವಲ್ಪ ಹೊತ್ತು ಮೌನ. ಅವನು ಚಿಪ್ಪನ್ನು ನೋಡುತ್ತಾನೆ. ಮಿಸ್ ಮ್ಯಾಕ್‌ಕಚಿಯಾನ್ ಕೂಡ ಅದನ್ನು ನೋಡುತ್ತಾಳೆ.] ಈ ಚಿಪ್ಪಿನಲ್ಲಿ ಮುತ್ತಿದೆ ಅಂತ ಕ್ಲೇ ಯಾಕೆ ನಂಬ್ತಾನೆ ಅಂದ್ರೆ ನೀವು ಮತ್ತು ನಾನು ಯಾವುದನ್ನು ನಂಬ್ತೀವೋ–ನಾವು ಬದುಕಲಿಕ್ಕಾಗಿ, ಅದು ಯಾವ ನಂಬಿಕೇನೇ ಆಗಿರಲಿ, ಅದೇ ಕಾರಣಕ್ಕಾಗಿ.

**ಮಿಸ್ ಮ್ಯಾಕ್‌ಕಚಿಯಾನ್**: ನಿಮ್ಮ ಈ ವಿಚಿತ್ರ ಯೋಜನೆಗಳನ್ನ ಕಾರ್ಯಗತ ಮಾಡ್ಲಿಕ್ಕೆ ಅಂತ ಕ್ಲೇನ ವಿಷಯದಲ್ಲಿ ಒಂದು ಕಪಟ ನಾಟಕ ಮಾಡ್ಬೇಕು ಅಂತಾನಾ ನೀವು ಸೂಚಿಸ್ತಾ ಇರೋದು?

**ಹ್ಯಾರಿ**: ಏನೊ, ಇರಲೂ ಬಹುದು. ವೋಜೆಕ್‌ನ ಹತ್ರ ಕೆಲವು ಒಳ್ಳೆ ದೊಡ್ಡ ದೊಡ್ಡ ಮುತ್ತುಗಳಿವೆ. ಅವು ಅಸಲಿ ಅಲ್ಲ ಅನ್ನೋದು ನನಗೆ ಗೊತ್ತು.

**ಮಿಸ್ ಮ್ಯಾಕ್‌ಕಚಿಯಾನ್**: ಈ ಚಿಪ್ಪನ್ನ ಒಡೆದು ನೋಡಿದಾಗ ಅದರಲ್ಲಿ ಅವನಿಗೆ ಒಂದು ಮುತ್ತು ಕಂಡು ಬಂತು ಅಂತ ನಟಿಸಲಿಕ್ಕಾಗಿ ಅಂತಾನಾ ನಿಮ್ಮ ಉದ್ದೇಶ?

**ಹ್ಯಾರಿ**: ನನ್ನ ಉದ್ದೇಶ ಏನು ಅಂದ್ರೆ ಕ್ಲೇಗೆ ಮುನ್ನೂರು ಡಾಲರ್ ಸಿಗೋ ಹಾಗೆ ಮಾಡೋದು.

**ಮಿಸ್ ಮ್ಯಾಕ್‌ಕಚಿಯಾನ್:** ನಿಮ್ಮ ಹತ್ರ ಮುನ್ನೂರು ಡಾಲರ್ ಇದೆಯಾ?
**ಹ್ಯಾರಿ:** ಇದೆ ಅಂತ ಅಲ್ಲ.
**ಮಿಸ್ ಮ್ಯಾಕ್‌ಕಚಿಯಾನ್:** ಹಣದ ಅವಶ್ಯಕತೆ ಇರೋ ಬೇರೆ ಮಕ್ಕಳ ಬಗ್ಗೆ ಏನು ಮಾಡ್ತೀರಾ? ಅವರಿಗಾಗಿ ಅಂತಾನೂ ಮೃದ್ವಂಗಿಗಳಲ್ಲಿ ಮುತ್ತುಗಳನ್ನ ಹಾಕ್ತೀರಾ ನೀವು? ಇಲ್ಲಿ ಓ.ಕೆ.ಬೈದಸೀಂಯಲ್ಲಿ ಅದಾಗಲ್ಲ. ಎಲ್ಲೇ ಆಗಲಿ, ಆಗಲ್ಲ. ಬಡವರಿರೋವಂಥ, ಗಂಡ-ಹೆಂಡತಿ ಜಗಳ ಆಡೋವಂಥ ಮತ್ತೆ ಸಂಸಾರ- ಒಡೆಯುವಂಥ ಊರೆಂದರೆ ಈ ಜಗತ್ತಿನಲ್ಲಿ ಇದೊಂದೇ ಅಲ್ಲ, ಇರೋದು.
**ಹ್ಯಾರಿ:** ಅದು ಸರೀನೇ. ಆದ್ರೆ ನಾನು ಇರೋ ಊರು ಅಂದ್ರೆ ಇದೊಂದೇ....
**ಮಿಸ್ ಮ್ಯಾಕ್‌ಕಚಿಯಾನ್:** ನಾನು ಸೋತೆ. ನಿಮ್ಮ ಜೊತೆ ವಾದ ಮಾಡಾಕಾಗಲ್ಲ. ನಾನು ಏನು ಮಾಡಬೇಕೂಂತ ನೀವು ಹೇಳೋದು?
**ಹ್ಯಾರಿ:** ಅಲ್ಲ, ಮಕ್ಕಳ ಬಗ್ಗೆ-ಅಂದ್ರೆ ಕಷ್ಟದಲ್ಲಿರೋ ಮಕ್ಕಳ ಬಗ್ಗೆ-ನೀವು ಏನು ಮಾಡಲಿಕ್ಕಾಗಲ್ಲ ಅಂತ ಹೃದಯ ಮುಟ್ಟಿಕೊಂಡು ಹೇಳಿ ನೋಡೋಣ. ಕ್ಲೇನ ಸತ್ಯ ಸುಲಭವಾಗಿ ಅರ್ಥವಾಗಬಹುದು-ಅವನ ಅಪ್ಪ ಮನೆಗೆ ಬಂದ ಕೂಡಲೇ. [ಆರ್ಥರ್ ಆ್ಯಪಲ್ ಗಾರ್ತ್‌ನ ಪ್ರವೇಶ]
**ಹ್ಯಾರಿ:** ಜಡ್ಜ್ ಆ್ಯಪಲ್‌ಗಾರ್ತ್ ಅವರೇ, ನಿಮಗೆ ಇವರ ಪರಿಚಯ ಮಾಡಿಕೊಡ್ತೀನಿ. ಇವರು ಮಿಸ್ ಮ್ಯಾಕ್‌ಕಚಿಯಾನ್ ಅಂತ.
**ಜಡ್ಜ್:** [ಹ್ಯಾಟನ್ನು ತೆಗೆದು, ಬಾಗಿ ನಮಸ್ಕರಿಸಿ] ನಿಮ್ಮ ಪರಿಚಯ ಆದದ್ದು ತುಂಬ ಸಂತೋಷ , ಮಿಸ್.
**ಮಿಸ್‌ಮ್ಯಾಕ್‌ಕಚಿಯಾನ್:** ನನಗೂ ಅಷ್ಟೆ, ಜಡ್ಜ್ ಅವರೆ.
**ಹ್ಯಾರಿ:** ಮಿಸ್ ಮ್ಯಾಕ್‌ಕಚಿಯಾನ್ ಇಲ್ಲಿನ ಹೊಸ ಸ್ಕೂಲ್ ಟೀಚರ್.
**ಜಡ್ಜ್:** ನೀವು ಇಲ್ಲಿಗೆ ಬಂದಿರೋದು ನಮಗೆ ತುಂಬ ಹೆಮ್ಮೆಯ ಸಂಗತಿ, ಮಕ್ಕಳಿಗೆ, ತಂದೆ-ತಾಯಿಗಳಿಗೆ, ಮತ್ತೆ ನಮಗೆಲ್ಲರಿಗೂ.
**ಮಿಸ್ ಮ್ಯಾಕ್‌ಕಚಿಯಾನ್:** ನೀವು ನನಗೆ ತುಂಬ ಗೌರವ ಕೊಟ್ಟ ಹಾಗಾಯಿತು. [ಹ್ಯಾರಿಗೆ, ಪಿಸುದನಿಯಲ್ಲಿ] ನಾನು ಬಟ್ಟೆ ಬದಲಾಯಿಸಿ ಬರ್ತೀನಿ.
**ಹ್ಯಾರಿ:** [ಪಿಸುದನಿಯಲ್ಲಿ] ಪಿಸು ಮಾತಾಡಬೇಡಿ ಅಂತ ನಾನು ನಿಮಗೆ ಹೇಳಿದ್ದೆ.
**ಮಿಸ್ ಮ್ಯಾಕ್‌ಕಚಿಯಾನ್:** [ಪಿಸುದನಿಯಲ್ಲಿ] ನೀವು ನನಗೆ ಪೂಡ್ಲ್ ಹೇರ್ ಕಟ್ ಮಾಡ್ತೀರಿ ತಾನೆ?
**ಹ್ಯಾರಿ:** [ಪಿಸುದನಿಯಲ್ಲಿ] ನಿಮಗೇನು ತಲೆ ಕೆಟ್ಟಿದೆಯಾ?
**ಮಿಸ್ ಮ್ಯಾಕ್‌ಕಚಿಯಾನ್:** [ಗಟ್ಟಿಯಾಗಿ]; ಬರ್ತೀನಿ, ನಮಸ್ಕಾರ, ಜಡ್ಜ್ ಅವರೇ.
**ಜಡ್ಜ್:** [ಬಾಗಿ ವಂದಿಸುತ್ತಾ] ನಮಸ್ಕಾರ, ಮಿಸ್, [ಅವನು ಬಾಗಿರುವಾಗ ಅವಳ ಮೊಣಕಾಲು, ಮೀನ ಖಂಡ, ಕಾಲಿನ ಹರಡು, ಮತ್ತು ಕುಣಿಕೆ ಹಾಕಿದ ಚಪ್ಪಲಿಗಳನ್ನು ಚೆನ್ನಾಗಿ ನೋಡುತ್ತಾನೆ. ಮಿಸ್ ಮ್ಯಾಕ್‌ಕಚಿಯಾನ್ ಹೊರ ನಡೆಯುತ್ತಾಳೆ. ಜಡ್ಜ್

ಕ್ರಿಪಲ್ ಗಾರ್ತನು ಬಾಗಿಲಲ್ಲಿ ನಿಂತು ಹ್ಯಾರಿಯತ್ತ ನೋಡುತ್ತಾನೆ.]

**ಲಡ್ಜ್:** ಇವಳು ಒಂದು ತಿಂಗಳೂ ಇಲ್ಲಿ ಇರಾಕಾಗಲ್ಲ.

**ಹ್ಯಾರಿ:** ಯಾಕೆ?

**ಜಡ್ಜ್:** ಯಾಕಂದ್ರೆ, ಇವಳು ತುಂಬಾನೇ ಸುಂದರವಾಗಿರೋ ಹುಡುಗಿ. ನಮ್ಮ ಸ್ಕೂಲಿಗೆ ಬೇಕಿರೋದು ಜಬರ್ದಸ್ತಾಗಿರೋ ಹೆಣ್ಣು. ನಾವು ಸ್ಕೂಲಿಗೆ ಹೋಗ್ತಿದ್ದಾಗ ಇದ್ದರಲ್ಲ ಅಂಥವರು. ಇಂಥ ಸುಂದರ ಜಲ ಕನ್ಯೆಯಲ್ಲ. ಅದಿರಲಿ, ಹ್ಯಾರಿ, ಏನು ಸಮಾಚಾರ?

**ಹ್ಯಾರಿ:** ಅದೇ, ಈ ಟೀಚರ್ ಅನ್ನಬಹುದು.

**ಜಡ್ಜ್:** ನಿನಗೆ ಗೊತ್ತಿಲ್ಲ, ಹ್ಯಾರಿ, ಈಗ ಬೀಚ್ ಮೊದಲಿನಂತಿಲ್ಲ. ನಿಜವಾಗ್ಲೂ. ಮಕ್ಕಳು ಏನೇ ಹೇಳ್ಲಿ, ನನ್ನ ಅಭ್ಯಂತರವಿಲ್ಲ. ಆದರೆ ಒಟ್ಟಿನಲ್ಲಿ ನಾನು ಹೇಳೋದೇನಂದ್ರೆ ಈಗ ಸಮುದ್ರ ಏನು ಹೊರ ಚೆಲ್ತಾ ಇದೆಯೋ ಅದಂತೂ ಮೊದಲಿನ ಗುಣಮಟ್ಟದ್ದೇನೂ ಅಲ್ಲ [ಅವನು ಬಾಗಿಲತ್ತ ನಡೆಯುತ್ತಾನೆ.]

**ಹ್ಯಾರಿ:** ಅದೇನೋ ನನಗೆ ಗೊತ್ತಿಲ್ಲ. ಕ್ಲೇ ಲಾರಾಬೀಗೆ ಇವತ್ತು ಬೆಳಗ್ಗೆ ಒಂದು ಮೃದ್ವಂಗಿ ಸಿಕ್ಕಿದೆ.

**ಜಡ್ಜ್:** ಹೌದಾ? ಆದ್ರೂ, ಒಂದು ಮೃದ್ವಂಗಿಯಿಂದ ಮೀನಿನ ಕೊಳ ಆಗಲ್ಲಪ್ಪ. ನಾನು ಮನೆಗೆ ವಾಪಸ್ ಹೋಗೋ ಮುನ್ನ ಮತ್ತೆ ಇಲ್ಲಿಗೆ ಬಂದು ನೋಡ್ತೀನಿ. ಅದು ಎಂಥದ್ದು ಅಂತ.

**ಹ್ಯಾರಿ:** ಆಯ್ತು, ಜಡ್ಜ್ [ಜಡ್ಜ್ ಹೋಗುತ್ತಾನೆ. ಹ್ಯಾರಿ ಮರಳಿ ವಾಸ್ತವ ಲೋಕಕ್ಕೆ ಬರುತ್ತಾನೆ. ಈಗ ವ್ಯಾವಹಾರಿಕವಾಗಿ] ಹೇರ್ ಕಟಿಂಗ್ ಆಗ್ಲಿ ಈಗ! [ಲೇಖಕನ ಮೈ ಮೇಲೆ ಸುತ್ತಿದ್ದ ಟವಲನ್ನು ತೆಗೆಯುತ್ತಾನೆ.]

**ಲೇಖಕ:** ಆರಾಮವಾಗಿ ಮಾಡು. ಏನೂ ಅವಸರ ಇಲ್ಲ.

**ಹ್ಯಾರಿ:** [ಕತ್ತರಿಗಳನ್ನು ಮತ್ತು ಬಾಚಣಿಕೆಗಳನ್ನು ಪರೀಕ್ಷಿಸುತ್ತಾ] ಎಲ್ಲಿ, ಈಗ ನೋಡ್ತೋಣ. [ಲೇಖಕನು ಕತ್ತು ತಿರುಗಿಸಿ ನೋಡುತ್ತಾನೆ. ಒಬ್ಬ ಗ್ಯಾರೇಜ್ ಹುಡುಗ ಬಾಗಿಲ ಬಳಿ ಬರುತ್ತಾನೆ.]

**ಹುಡುಗ:** [ಲೇಖಕನಿಗೆ]: ನಿಮ್ಮ ಕಾರು ರೆಡಿಯಾಗಿದೆ ಅಂತ ಹೇಳ್ಲಕ್ಕೆ ಬಂದೆ.

**ಲೇಖಕ:** ಒಳ್ಳೇದು. [ಹುಡುಗ ಹೋಗುತ್ತಾನೆ.] ಇಲ್ಲಿ ನೋಡಿ, ನಾನು ಏನು ಕೇಳಿದೆ ಅಂದ್ರೆ, ಒಂದು ಹೇರ್ ಕಟಿಂಗಿಗೆ ಎಷ್ಟು?

**ಹ್ಯಾರಿ:** ಸಾಧಾರಣವಾಗಿ ಎಲ್ಲಾ ಕಡೆ ಒಂದು ಡಾಲರ್ ತಗೊಳ್ತಾರೆ. ಸ್ವಲ್ಪ ಜಾಸ್ತೀನೇ ಆಯ್ತು. ಹಾಗಾಗಿ ನಾನು ಸಾಮಾನ್ಯವಾಗಿ ಅರ್ಧ ಅಥವಾ ಕಾಲು ಡಾಲರು ತಗೋಳ್ತೀನಿ.

**ಲೇಖಕ:** [ ಕುರ್ಚಿಯಿಂದ ಏಳುತ್ತಾ] ತಾಳಿ... ನನಗೆ ನಿಜವಾಗ್ಲೂ ಹೇರ್ ಕಟಿಂಗೇನೂ ಬೇಕಾಗಿಲ್ಲ. ಆದ್ರೂ, ಇದು ತಗೊಳ್ಳಿ– ಒಂದು ಡಾಲರ್ [ಅವನು ಹ್ಯಾರಿಯ ಕೈಯಲ್ಲಿ

ಒಂದು ಡಾಲರ್ ಇಟ್ಟು ತಾನೇ ಸ್ವತಃ ಏಪ್ರನ್ನನ್ನು ತೆಗೆಯುತ್ತಾನೆ.]

**ಹ್ಯಾರಿ:** ಇರ್ರಿ, ಒಂದು ನಿಮಿಷದಲ್ಲಿ ಮಾಡ್ತೀನಿ.

**ಲೇಖಕ:** ನನಗೆ ಗೊತ್ತು.

**ಹ್ಯಾರಿ:** ಬರೀ ಒಂದು ಹಾಟ್ ಟವಲ್‌ಗೆ ನೀವು ಒಂದು ಡಾಲರ್ ಕೊಡಬೇಕಾಗಿಲ್ಲ. ಥ್ಯಾಂಕ್ಸ್.

**ಲೇಖಕ:** ಆಯ್ತು. [ಅವನು ಬಾಗಿಲೆಡೆ ನಡೆಯುತ್ತಾನೆ.]

**ಹ್ಯಾರಿ:** ಈಗೇನೂ ಯೋಚನೆ ಮಾಡಬೇಡಿ.

**ಲೇಖಕ:** ಥ್ಯಾಂಕ್ಸ್. [ಅವನು ಸ್ವಲ್ಪ ಹೊತ್ತು ನಿಂತು, ಏನೋ ಯೋಚಿಸಿ, ಹಿಂದಿರುಗುತ್ತಾನೆ.] ನಾನೊಂದ್ಸಲ ಆ ಮೃದ್ವಂಗಿ ಚಿಪ್ಪನ್ನ ನೋಡಲಿಕ್ಕೆ ಅಡ್ಡಿ ಇಲ್ಲ ತಾನೆ?

**ಹ್ಯಾರಿ:** ಖಂಡಿತ ಇಲ್ಲ. [ಲೇಖಕನು ಮೃದ್ವಂಗಿಯನ್ನು ಇಟ್ಟಿರುವ ಷೆಲ್ಫಿನೆಡೆ ನಡೆದು, ಅದನ್ನೆತ್ತಿಕೊಂಡು, ಏನೋ ಗಹನವಾಗಿ ವಿಚಾರ ಮಾಡುತ್ತಿರುವಂತೆ ನೋಡುತ್ತಾನೆ. ಯಾವ ಅಭಿಪ್ರಾಯವನ್ನೂ ತಿಳಿಸದೆ ಅದನ್ನು ವಾಪಸ್ಸು ಇಡುತ್ತಾನೆ. ಆದರೆ ಅಂಗಡಿಯಿಂದ ಹೊರನಡೆಯುವ ಬದಲು ಅಲ್ಲಿನ ಬೇರೆ ವಸ್ತುಗಳನ್ನು ನೋಡುತ್ತಾ ನಿಲ್ಲುತ್ತಾನೆ. ಆನಂತರ ಮೂಲೆಯಲ್ಲಿರುವ ಒಂದು ಬೆತ್ತದ ಕುರ್ಚಿಯಲ್ಲಿ ಕುಳಿತು ಸಿಗರೇಟು ಹಚ್ಚುತ್ತಾನೆ.]

**ಲೇಖಕ:** ನಿಮಗೊಂದು ವಿಷಯ ಗೊತ್ತಾ? ನ್ಯೂಯಾರ್ಕ್‌ನಲ್ಲಿ ಈಗ ಜನರ ಹತ್ರ ಒಂದು ಹೊಸ ಉಪಕರಣ ಇದೆ–ರೇಜರ್ ಅಂಥದ್ದು. ಅದರಿಂದ ಯಾರೂ ಬೇಕಾದರೂ ಯಾರಿಗೆ ಬೇಕಾದರೂ ಹೇರ್ ಕಟಿಂಗ್ ಮಾಡಬಹುದು.

**ಹ್ಯಾರಿ:** ಹೌದಾ?

**ಲೇಖಕ:** ಹೌದು. ಹೋದ ಭಾನುವಾರದ 'ಟೈಮ್ಸ್' ನಲ್ಲಿ ಅದರ್ದೊಂದು ಅಡ್ವರ್ಟೈಸ್‌ಮೆಂಟ್ ಬಂದಿತ್ತು, ಫುಲ್ ಪೇಜಿಂದು.

**ಹ್ಯಾರಿ:** ನೀವು ಹೋದ ಭಾನುವಾರ ನ್ಯೂಯಾರ್ಕ್‌ನಲ್ಲಿದ್ರಾ?

**ಲೇಖಕ:** ಹೌದು.

**ಹ್ಯಾರಿ:** ನೀವು ಕಾರಿನಲ್ಲಿ ತುಂಬ ಸುತ್ತಾಡ್ತಾ ಇದೀರಲ್ವಾ?

**ಲೇಖಕ:** ನನಗೆ ಡ್ರೈವಿಂಗಂದ್ರೆ ಇಷ್ಟ. ಆಮೇಲೆ, ನನಗೆ ಒಂದು ವಿಷಯ ಗೊತ್ತಿಲ್ಲ–ಏನಂದ್ರೆ–ಈ ಹೊಸ ಉಪಕರಣ ಸರಿಹೋಗುತ್ತಾ ಅಂತ, ಅದಕ್ಕೆ ಟೂ–ನೈನ್ಟಿಫೈವ್ ಹೇಳ್ತಾರೆ. ದೊಡ್ಡ ಕುಟುಂಬ ಆದ್ರೆ ಪರವಾಗಿಲ್ಲ. ಯಾಕಂದ್ರೆ ಮಕ್ಕಳಿಗೆ ತಂದೇನೇ ಹೇರ್ ಕಟಿಂಗ್ ಮಾಡಬಹುದು, ಆಗ ಸ್ವಲ್ಪ ಉಳಿತಾಯ ಆಗುತ್ತೆ .

**ಹ್ಯಾರಿ:** ಒಳ್ಳೆ ಐಡಿಯಾ.

**ಲೇಖಕ:** ಪ್ರಶ್ನೆ ಇರೋದು ಅದು ಎಷ್ಟರ ಮಟ್ಟಿಗೆ ಕೆಲ್ಸ ಮಾಡುತ್ತೆ ಅನ್ನೋದ್ರ ಬಗ್ಗೆ. ತಂದೆ ಮಾಡಿದ ಹೇರ್ ಕಟಿಂಗಿನಿಂದ ಮಗನಿಗೆ ಒಂದು ಥರ ನಾಚಿಕೆಯಾಯ್ತು

ಅಂದ್ರೆ ಏನು ಪ್ರಯೋಜನ?

**ಹ್ಯಾರಿ:** ನೋಡಿ ಯಾರಿಂದ್ರೆ ಒಬ್ಬ ಹುಡುಗನಿಗೆ ಇಷ್ಟವಾಗೋದು ಕ್ಷೌರಿಕರು ಮಾಡೋ ಹೇರ್ ಕಟಿಂಗೇನೆ.

**ಲೇಖಕ:** ನಾನೂ ಒಂದು ಕೊಳ್ಳೋಣ ಅಂತ ಮಾಡಿದ್ದೆ. ಆದ್ರೆ ಸರಿಯಾಗಿ ಗೊತ್ತಾಗ್ತಾಇಲ್ಲ ಕೊಳ್ಳೋದುವೋ ಬ್ಯಾಡವೋ ಅಂತ.

**ಹ್ಯಾರಿ:** ನಿಮ್ಮದು ದೊಡ್ಡ ಕುಟುಂಬವಾ?

**ಲೇಖಕ:** ಇಲ್ಲ. ನನಗಂತಾನೇ ಕೊಳ್ಳೋಣ ಅಂತ ಇದ್ದೆ. ಆದ್ರೂ ಯಾಕೋ ನಿರ್ಧಾರವಾಗಲಿಲ್ಲ. ಆಗೊಮ್ಮೆ ಈಗೊಮ್ಮೆಯಾದರೂ ಕ್ಷೌರದ ಅಂಗಡಿಗೆ ಹೋಗೋದೇ ಸರಿ ಅನ್ನಿಸುತ್ತೆ. ಕ್ಷೌರಿಕರಿಗೆ ನಾವು ವ್ಯಾಪಾರಾನೂ ತಪ್ಪಿಸಬಾರದಲ್ಲವಾ?

**ಹ್ಯಾರಿ:** ಒಂದು ಒಳ್ಳೆ ಲೇಖಕನ ಥರ ಇದೆ ನಿಮ್ಮ ಮಾತು .

**ಲೇಖಕ:** [ಅಲಕ್ಷ್ಯದಿಂದ ಮೇಲೇಳುತ್ತಾ ] ಹೌದಾ? ಸರಿ. ನಿಮ್ಮ ಜೊತೆ ಮಾತಾಡಿದ್ದು ಸಂತೋಷ.

[ಒಂದು ಸಣ್ಣ ಚರ್ಮದ ಚೀಲವನ್ನು ಕೈಯಲ್ಲಿ ಹಿಡಿದಿರುವ ವೊಜೆಕ್ ಒಳ ಬರುತ್ತಾನೆ. ಅವನ ಹಿಂದೆ ಕ್ಲೇ, ರೋಕ್ಸಾನಾ ಮತ್ತು ಗ್ರೀಲಿ ಕೂಡ ಬರುತ್ತಾರೆ.]

**ವೊಜೆಕ್:** ಏನು ವಿಷಯ, ಹ್ಯಾರಿ?

**ಹ್ಯಾರಿ:** ನನ್ನ ಹತ್ರ ಒಂದು ಮೃದ್ವಂಗಿ ಇದೆ. ಅದನ್ನ ನೀನು ಓಪನ್ ಮಾಡಬೇಕು.

**ರೋಕ್ಸಾನಾ:** ಇವರಿಗೂ ನಂಬಿಕೆ ಇಲ್ಲ. ಅದರಲ್ಲಿ ಒಂದು ಮುತ್ತಿದೆ ಅಂತ.

**ವೊಜೆಕ್:** ಹೌದು! ಇದೆಂಥ ಹುಚ್ಚು ಅಂತೀನಿ!

**ಕ್ಲೇ:** ಅದರಲ್ಲಿ ಒಂದು ದೊಡ್ಡ ಮುತ್ತಿದೆ.

**ವೊಜೆಕ್:** ಸರಿ. ನನಗೆ ಕೊಡಿ ಅದನ್ನ. ನಾನದನ್ನ ಓಪನ್ ಮಾಡ್ತೀನಿ. ಎಕ್ಸ್‌ಪರ್ಟ್ ವಾಚ್ ರಿಪೇರರ್ ಈಗ ಒಂದು ಚಿಪ್ಪನ್ನ ಓಪನ್ ಮಾಡಬೇಕು!

**ಹ್ಯಾರಿ:** ಒಂದು ದೊಡ್ಡ ಮುತ್ತಿನ ಬೆಲೆ ಎಷ್ಟಿರಬಹುದು, ಲೂಯಿ?

**ವೊಜೆಕ್:** ನೂರು ಡಾಲರಂತೂ ಬರುತ್ತೆ. ಇನ್ನೂರೂ ಆಗಬಹುದು.

**ಹ್ಯಾರಿ:** ತುಂಬ ದೊಡ್ಡದಕ್ಕೆ?

**ವೊಜೆಕ್:** ಮುನ್ನೂರು ಆಗಬಹುದು .

**ಲೇಖಕ:** ನಾನು ಆ ಮೃದ್ವಂಗೀನ ನೋಡಿದೀನಿ. ಮತ್ತೆ ನಾನದನ್ನ ಕೊಳ್ಬೇಕು ಅಂತೀನಿ. [ಕ್ಲೇಗೆ] ನಿನಗೆಷ್ಟು ಕೊಡೋಣ?

**ಕ್ಲೇ:** ಏನೋ. ಗೊತ್ತಿಲ್ಲ.

**ಲೇಖಕ:** ಮುನ್ನೂರು ಡಾಲರ್?

**ಕ್ಲೇ:** ನೀವೇನಂತೀರ, ಮಿಸ್ಟರ್ ಹ್ಯಾಗಾರ್ಡನ್?

**ಹ್ಯಾರಿ:** [ಲೇಖಕನತ್ತ ನೋಡುತ್ತಾನೆ. ಲೇಖಕ ಸರಿ ಎಂಬಂತೆ ತಲೆಯಾಡಿಸುತ್ತಾನೆ.]

ಓ, ಸರಿ ಇದೆ. [ಲೇಖಕನು ಕ್ಲೇಗೆ ಹಣವನ್ನು ಕೊಡುತ್ತಾನೆ.]

**ಕ್ಲೇ:** [ಹಣವನ್ನು ನೋಡುತ್ತಾ, ನಂತರ ಲೇಖಕನನ್ನು ನೋಡುತ್ತಾ] ಆದ್ರೆ ಅದರಲ್ಲಿ ಮುತ್ತು ಇಲ್ಲ ಅಂದ್ರೆ?

**ಲೇಖಕ:** ಇರುತ್ತೆ.

**ವೊಜೆಕ್:** ನೀವದನ್ನ ಮೊದ್ಲು ಓಪನ್ ಮಾಡಿ ನೋಡಲ್ವಾ?

**ಲೇಖಕ:** ಇಲ್ಲ. ನನಗೆ ಅದು ಪೂರ್ತಿನೇ ಬೇಕು. ಮುತ್ತು ದೊಡ್ಡದಾಗ್ತಾ ಹೋಗ್ತಿರಬಹುದು.

**ಕ್ಲೇ:** ಮಿಸ್ಟರ್ ವ್ಯಾನ್‌ಡುಸೆನ್, ಇವರೂ ಇದರಲ್ಲಿ ಮುತ್ತಿದೆ ಅಂತ ಹೇಳ್ತಾರಲ್ಲ.

**ಹ್ಯಾರಿ:** ಇದೆ ಅಂತ ನಾನೂ ತಿಳಿದಿದೀನಿ, ಕ್ಲೇ. ಹಾಗಾಗಿ, ನೀನು ಸುಮ್ಮನೆ ಮನೆಗೆ ಹೋಗಿ ಹಣಾನ ನಿಮ್ಮ ತಾಯಿಗೆ ಯಾಕೆ ಕೊಡಬಾರದು?

**ಕ್ಲೇ:** ಸರಿ... ನನಗೆ ಗೊತ್ತಿತ್ತು–ಇವತ್ತು ಏನಾದ್ರೂ ಒಳ್ಳೇದು ಸಿಗುತ್ತೆ ಅಂತ!

[ಮಕ್ಕಳು ಹೋಗುತ್ತಾರೆ. ವೊಜೆಕ್ ಆಶ್ಚರ್ಯಚಕಿತನಾಗಿ ನಿಂತಿದ್ದಾನೆ;]

**ವೊಜೆಕ್:** ಮುನ್ನೂರು ಡಾಲರು! ಅದರಲ್ಲಿ ಮುತ್ತಿದೆ ಅಂತ ನಿಮಗೆ ಹ್ಯಾಗೆ ಗೊತ್ತು?

**ಲೇಖಕ:** ನನ್ನ ಮಟ್ಟಿಗೆ ಹೇಳೋದಾದ್ರೆ, ಅದೇ ಒಂದು ಮುತ್ತಾಗಿದೆ.

**ವೊಜೆಕ್:** [ಸ್ವಲ್ಪ ಗೊಂದಲಗೊಂಡು] ಸರಿ, ನಾನಿನ್ನು ವಾಪಸ್ಸು ಅಂಗಡಿಗೆ ಹೋಗಬೇಕು, ಹ್ಯಾರಿ.

**ಹ್ಯಾರಿ:** ನೀನು ಬಂದಿದ್ದಕ್ಕೆ ಥ್ಯಾಂಕ್ಸ್.

[ವೊಜೆಕ್ ಹೋಗುತ್ತಾನೆ. ಲೇಖಕನು ಮೃದ್ವಂಗಿ ಚಿಪ್ಪನ್ನು ಒಂದು ಮೊಟ್ಟೆಯೆಂಬಂತೆ ತನ್ನೆದುರು ಹಿಡಿದು ನೋಡುತ್ತಾ, ಅದನ್ನು ತಿರುಗಿಸುತ್ತಾ ಸೂಕ್ಷ್ಮವಾಗಿ ಪರೀಕ್ಷಿಸುತ್ತಾನೆ. ಅವನ ಹಾಗೆ ಮಾಡುತ್ತಿರುವಾಗ ಕ್ಲಾರ್ಕ್ ಲಾರಾಬೀ ಅಂಗಡಿಯೊಳ ಬರುತ್ತಾನೆ. ಅವನು ಕೈಯಲ್ಲಿ ಈ ಹಿಂದೆ ಹ್ಯಾರಿ ಕೊಟ್ಟಿದ್ದ ಸುದ್ದಿ ಪತ್ರಿಕೆ ಇದೆ.]

**ಕ್ಲಾರ್ಕ್:** ನಾನು ಇದರಲ್ಲಿನ ಜಾಹೀರಾತನ್ನು ಹೈವೇಯಲ್ಲಿ ಹತ್ತು ಮೈಲಿ ದೂರ ಹೋಗಿದ್ದಾಗ ನೋಡಿದೆ. [ಅವನು ಹ್ಯಾರಿಗೆ ಪೇಪರನ್ನು ಕೊಟ್ಟು ಕುರ್ಚಿಯಲ್ಲಿ ಕೂರುತ್ತಾನೆ]. ನಾನು ಕೊನೆಗೂ ಈಗ ಮನೆಗೆ ಹೋಗುವವನಿದ್ದೇನೆ. ಒಂದೆರಡು ದಿನ ಇರ್ತೀನಿ, ನಾನು ಮತ್ತೆ ಸ್ಯಾಲಿನಾಸ್‌ಗೆ ಕೆಲ್ಸದ ಮೇಲೆ ಹೋಗ್ಬೇಕು. ಎರಡು ಮೂರು ತಿಂಗಳು ಕೆಲ್ಸ ಮಾಡಿ ದುಡ್ಡು ತಂದಾಗ ಇಲ್ಲಿ ಮತ್ತೆ ಸಾಕಷ್ಟು ದಿನ ಇರಬಹುದು. ಕ್ಲೇ ಬಂದಿದ್ದನಾ?

**ಹ್ಯಾರಿ:** ಇಲ್ಲ. ಇಲ್ಲಿ ನನ್ನ ಹತ್ರ ನೀನು ಕೊಟ್ಟ ದುಡ್ಡಿದೆ.

**ಕ್ಲಾರ್ಕ್:** ಸರಿ, ನಾನೇ ತಗೊಂಡು ಹೋಗ್ತೀನಿ. ಆದ್ರೆ ಮೊದ್ಲು ಇಲ್ಲಿನ ಕೆಲಸ ಆಗಲಿ ಶೇವ್, ಹೇರ್ ಕಟ್, ಶಾಂಪೂ, ಮಸಾಜ್–ಎಲ್ಲ.

**ಹ್ಯಾರಿ:** [ಕ್ಲಾರ್ಕಿಗೆ ಏಪ್ರನ್ ಹಾಕುತ್ತಾ] ಓ, ಆಗಬಹುದು, ಕ್ಲಾರ್ಕ್. [ಅವನು ಕುರ್ಚಿಯನ್ನು ಹಿಂದಕ್ಕೆ ಬಾಗಿಸಿ, ಕ್ಲಾರ್ಕ್‌ನ ಮುಖಕ್ಕೆ ನೊರೆ ಬರುವಂತೆ ಸೋಪು

ಹುಚ್ಚುತ್ತಾನೆ. ಮಿಸ್ ಮ್ಯಾಕ್‌ಕಟಿಯಾನ್ ಬರುತ್ತಾಳೆ. ಈಗ ಅವಳು ಒಳ್ಳೆಯ ಉಡುಪು ಧರಿಸಿದ್ದಾಳೆ, ಹೆಚ್ಚು ಕಡಿಮೆ ಬೇರೇನೇ ವ್ಯಕ್ತಿ ಎನ್ನುವ ಹಾಗೆ.]

**ಮಿಸ್ ಮ್ಯಾಕ್ ಕಟಿಯಾನ್:** ಹ್ಯಾಗಿದೆ?

**ಹ್ಯಾರಿ:** ಚೆನ್ನಾಗಿ ಕಾಣ್ತೀರ. ಮಿಸ್ ಮ್ಯಾಕ್‌ಕಟಿಯಾನ್.

**ಮಿಸ್ ಮ್ಯಾಕ್‌ಕಟಿಯಾನ್:** ಅದಲ್ಲ ನಾನು ಕೇಳಿದ್ದು. ಈಗ ಮೃದ್ವಂಗಿಯ ವಿಷಯ ಏನು ಅಂದೆ.

**ಹ್ಯಾರಿ:** ಓ, ಅದಾ? ಅದರಲ್ಲಿ ಮುತ್ತು ಇತ್ತು.

**ಮಿಸ್ ಮ್ಯಾಕ್‌ಕಟಿಯಾನ್:** ನಾನು ನಂಬಲ್ಲ.

**ಹ್ಯಾರಿ:** ದೊಡ್ಡ ಮುತ್ತು.

**ಮಿಸ್ ಮ್ಯಾಕ್‌ಕಟಿಯಾನ್:** ನಾನು ಬರೋತನಕ ನೀವು ಕಾದಿದ್ದು, ಆಮೇಲೆ ಅದನ್ನ ಓಪನ್ ಮಾಡಿದ್ದಿದ್ದರೆ ಚೆನ್ನಾಗಿತ್ತಲ್ವಾ?

**ಹ್ಯಾರಿ:** ಹಾಗಲ್ಲ. ನಾವು ಕಾಯಲಿಕ್ಕಾಗಲಿಲ್ಲ.

**ಮಿಸ್ ಮ್ಯಾಕ್ ಕಟಿಯಾನ್:** ಏನೊ. ನಾನಂತೂ ನಂಬಲ್ಲ. ಅದೇನೇ ಇರಲಿ. ಈಗ ನಾನು ಹೇರ್ ಕಟಿಂಗಿಗೆ ಬಂದಿದೀನಿ. ನಾನು ಕೂತು ನನ್ನ ಸರದಿಗಾಗಿ ಕಾಯ್ತೀನಿ.

**ಹ್ಯಾರಿ:** ಲಾರಾಜೀಯವರಿಗೆ ಮೊದಲು ಮಾಡಬೇಕಾಗಿದೆ. ನೀವು ಸ್ವಲ್ಪ ಜಾಸ್ತಿ ಹೊತ್ತೇ ಕಾಯಬೇಕಾಗುತ್ತೆ.

**ಮಿಸ್ ಮ್ಯಾಕ್‌ಕಟಿಯಾನ್:** ಲಾರಾಜೀ? ಕ್ಲೇನ ತಂದೆ? ರೊಕ್ಸಾನಾಳ ತಂದೆ? [ಕ್ಲಾರ್ಕ್ ಕುರ್ಚಿಯಲ್ಲಿ ಮುಂದೆ ಬಾಗುತ್ತಾನೆ.]

**ಹ್ಯಾರಿ:** ಕ್ಲಾರ್ಕ್, ಇವರು ನಮ್ಮ ಹೊಸ ಸ್ಕೂಲ್ ಟೀಚರ್. ಮಿಸ್ ಮ್ಯಾಕ್‌ಕಟಿಯಾನ್ ಅಂತ.

**ಕ್ಲಾರ್ಕ್:** ನಮಸ್ಕಾರ.

**ಮಿಸ್ ಮ್ಯಾಕ್ ಕಟಿಯಾನ್:** ನಮಸ್ಕಾರ. ಮಿಸ್ಟರ್ ಲಾರಾಜೀ. [ಅವಳು ಏನು ಮಾಡಬೇಕು ಎಂದು ತೋಚದೆ] ಸರಿ. ನಾನು ಇನ್ನೊಂದ್ಸಲ ಯಾವಾಗಾದರೂ ಬರ್ತೀನಿ. ಮಿಸ್ಟರ್ ವ್ಯಾನ್ ಡುಸೆನ್. [ಅವಳು ಹೋಗುತ್ತಾಳೆ. ಕ್ಲಾರ್ಕ್ ಪುನ: ತನ್ನ ಸೀಟಿಗೆ ಒರಗುತ್ತಾನೆ. ಜಡ್ಜ್ ಆ್ಯಪಲ್ ಗಾರ್ತ್ ಅಂಗಡಿಯ ಬಾಗಿಲ ಬಳಿ ಬಂದು ನಿಲ್ಲುತ್ತಾನೆ.]

**ಜಡ್ಜ್:** ಬೀಚ್‌ನಲ್ಲಿ ಏನೂ ಇಲ್ಲ. ಹ್ಯಾರಿ. ಮನೆಗೆ ತಗೊಂಡು ಹೋಗ್ಲಿಕ್ಕೆ ಯೋಗ್ಯವಾಗಿರೋವಂಥ ಯಾವ ವಸ್ತೂನೂ ಅಲ್ಲಿಲ್ಲ. [ಜಡ್ಜ್ ಮುಂದೆ ಹೋಗುತ್ತಾನೆ. ಲೇಖಕ ಹ್ಯಾರಿಯತ್ತ ನೋಡುತ್ತಾನೆ.]

**ಹ್ಯಾರಿ:** ನೋಡಿದ್ರಾ ನಾನು ಹೇಳಿದ್ದು ?

**ಲೇಖಕ:** ನೋಡಿದೆ.... ಸರಿ. ನಾನು ಬರ್ತೀನಿ. [ಅವನು ಮೃದ್ವಂಗಿಯನ್ನು ತನ್ನ ಕೋಟಿನ ಜೇಬಿನಲ್ಲಿಟ್ಟುಕೊಳ್ಳುತ್ತಾನೆ.]

**ಹ್ಯಾರಿ:** ನೀವು ಮತ್ತೆ ಹಾಲಿವುಡ್‌ಗೆ ಹೋಗೋವಾಗ ಇಲ್ಲಿಗೆ ಬಂದು ಹೋಗಿ.
**ಲೇಖಕ:** ನೋಡೋಣ. [ಅವನು ಹೋಗುತ್ತಾನೆ.]
ಕ್ಲಾರ್ಕ್ [ಸ್ವಲ್ಪ ಹೊತ್ತಿನ ನಂತರ] ಏನು ಗೊತ್ತಾ, ಹ್ಯಾರಿ? ನನ್ನ ಮಗ ಇದಾನಲ್ಲ, ಕ್ಲೇ, ಅಂಥ ಹುಡುಗನ್ನ ಬಿಟ್ಟು ಹೋಗಲಿಕ್ಕೆ ಆಗಲ್ಲ ನೋಡು ..
**ಹ್ಯಾರಿ:** ನಿಜ ಕ್ಲಾರ್ಕ್.
**ಕ್ಲಾರ್ಕ್:** ನಾನು ಅವನಿಗೆ ನಾಳೆ ಬೆಳಿಗ್ಗೆ ಮೀನು ಹಿಡೀಲಿಕ್ಕೆ ಕರಕೊಂಡು ಹೋಗ್ತೀನಿ. ನೀನೇನಂತೀಯಾ?
**ಹ್ಯಾರಿ:** ಖಂಡಿತ. ಕ್ಲಾರ್ಕ್. ಮತ್ತೆ ಮೊದಲಿನಂತೆ ಇರಿ. [ಸ್ವಲ್ಪ ಹೊತ್ತು ಮೌನ]
**ಕ್ಲಾರ್ಕ್:** ಆಮೇಲೆ, ಈ ಮೃದ್ವಂಗಿ ಮತ್ತು ಮುತ್ತು ಇದೆಲ್ಲ ಏನು?
**ಹ್ಯಾರಿ:** ಅಯ್ಯೋ, ಸುಮ್ಮನೆ ತಮಾಷೆ ಆ ಹೊಸ ಸ್ಕೂಲ್ ಟೀಚರ್ ಜೊತೆಗೆ. ಏನು ಗೊತ್ತಾ? ಅವಳು ಇಲ್ಲಿಗೆ ಬಂದು ಪೂಡ್ಲ್ ಹೇರ್ ಕಟ್ ಮಾಡ್ತೀರಾ ಅಂತ ಕೇಳ್ತಾಳೆ. ಪೂಡ್ಲ್ ಹೇರ್ ಕಟ್! ಅದು ಹೋಗಲಿ, ಪೂಡ್ಲ್ ನಾಯಿಮರಿ ಹೇಗಿರುತ್ತೆ ಅನ್ನೋದೇ ಮರೆತು ಹೋಗಿದೆ ನನಗೆ.

* * *

## ಪುಸ್ತಕ ಪ್ರೀತಿ

## ತುಳು ಕಾದಂಬರಿ–ಕಬರ್ಗತ್ತಲೆ

**ಮುರಳೀಧರ ಉಪಾಧ್ಯ ಹಿರಿಯಡ್ಕ**

ತುಳುವಿನ ಮೊದಲ ಕಾದಂಬರಿ ಸ್ವಾತಂತ್ರ್ಯಹೋರಾಟಗಾರ ಪೊಳಲಿ ಶಿವಪ್ಪ ಹೆಗ್ಡೆಯವರ 'ಮಿತ್ರ ನಾರಾಯಣ ಕತೆ'. (1935) ವೆಲ್ಲೂರಿನ ಜೈಲಿನಲ್ಲಿ ಸೃಷ್ಟಿಯಾಯಿತು. ತುಳು ಕಾದಂಬರಿಯ ಬೆಳೆ ಸಮೃದ್ಧವಾಗಿಲ್ಲ. 'ಮಿತ್ರ ನಾರಾಯಣ ಕತೆ'. ಮಹಾಲಿಂಗ ಅವರ 'ನಾಣಜ್ಜೆರ್ ಸುದೆ ತಿರ್ಗಾಯೆರ್'. ಎಂ ಜಾನಕಿ ಅವರು 'ಕುಮರುದ ಕೇದಗೆ', ಡಿ. ಕೆ. ಚೌಟ್ ('ಆನಂದ ಕೃಷ್ಣ') ಅವರ ಮಿತ್ತಬೈಲ್ ಯಮುನಕ್ಕೆ'– ಇಂಥ ಬೆರಳೆಣಿಕೆಯ ಪ್ರಥಮ ದರ್ಜೆಯ ತುಳು ಕಾದಂಬರಿಗಳು ಪ್ರಕಟವಾಗಿವೆ.

ಉಡುಪಿ ತುಳುಕೂಟದ ಎಸ್. ಯು. ಪಣಿಯಾಡಿ ಸ್ಮಾರಕ ತುಳು ಕಾದಂಬರಿ ಸ್ಪರ್ಧೆಯಲ್ಲಿ ಈ ವರ್ಷ 2007ರಲ್ಲಿ ಪ್ರಥಮ ಬಹುಮಾನ ಪಡೆದಿರುವ ಕಾದಂಬರಿ ಕಬರ್ಗತ್ತಲೆ! ಇದು. ಒಂದು ಶಾಲೆಯಲ್ಲಿ ಕನ್ನಡ ಅಧ್ಯಾಪಿಕೆಯಾಗಿರುವ ಕಾತ್ಯಾಯಿನಿ ಕುಂಜಿಬೆಟ್ಟು ಅವರ ಚೊಚ್ಚಲ ಕೃತಿ. 'ಧರ್ಮ–ಅಧರ್ಮ, ನಂಬಿಕೆ – ಅಪನಂಬಿಕೆ, ಆಚಾರ–ವಿಚಾರ, ಒಳ್ಳೆಯದು– ಕೆಟ್ಟದ್ದು, ಪೂರ್ವ–ಪಶ್ಚಿಮ ಸಂಸ್ಕೃತಿಗಳ ನಡುವೆ ಓಲಾಡುತ್ತಿರುವ ಮನುಷ್ಯನ ಮನಸ್ಸು ಮತ್ತು ಮನುಷ್ಯ ಅನುಭವದಿಂದ ಕಲಿಯುವ ಜೀವನ ಪಾಠ. ಇವನ್ನೆಲ್ಲ ಕತೆ, ಉಪಕತೆಗಳ ಮೂಲಕ ಚಿತ್ರಿಸಲು ನನ್ನಿಂದ ಸಾಧ್ಯವಾದಷ್ಟು ಪ್ರಯತ್ನ ಮಾಡಿದ್ದೇನೆ ಎನ್ನುವ ಕಾತ್ಯಾಯಿನಿ ಅವರು ತನ್ನ ಮೊದಲ ಕಾದಂಬರಿಯಲ್ಲಿ ಪಡೆದಿರುವ ಯಶಸ್ಸು ಪ್ರಶಂಸಾರ್ಹವಾಗಿದೆ.

ಇಪ್ಪತ್ತನೆಯ ಶತಮಾನದ ತುಳುನಾಡಿನ ಒಂದು ಕುಟುಂಬದ ಮೂರು ತಲೆಮಾರಿನ ದಾಂಪತ್ಯ–ದಾಂಪತ್ಯೇತರ ಸಂಬಂಧಗಳನ್ನು ಚಿತ್ರಿಸುವ ಈ ಕಾದಂಬರಿಯ ಕ್ರಿಯಾಕೇಂದ್ರಗಳು ಉಡುಪಿ, ಮುಂಬಯಿ ಹಾಗೂ ನ್ಯೂಯಾರ್ಕ್. ಹದಿನಾಲ್ಕನೆಯ ವಯಸ್ಸಿನಲ್ಲಿ ಮದುವೆಯಾದ ಗೌರ, ತನ್ನ ಗಂಡ ಹರಿರಾಮನಿಂದ ಅನುಭವಿಸುವ ದಾಂಪತ್ಯ ಹಿಂಸೆಯಿಂದ ಈ ಕಾದಂಬರಿ ಆರಂಭವಾಗುತ್ತದೆ. ಸರಸುವಿನ ಜೊತೆಗಿನ ಅಂತರ್ಜಾತೀಯ, ದಾಂಪತ್ಯೇತರ ಸಂಬಂಧ ಹರಿರಾಮನ ಲೈಂಗಿಕ

ಚಟುವಟಿಕೆಗಳಿಗೆ ಪ್ರೇರಣೆಯಾಗಿದೆ. ಹರಿರಾಯನ ಮಗ ಬಾಬು ಯಕ್ಷಗಾನ ಕಲಾವಿದನಾದರೂ ಅವನ ಲೈಂಗಿಕ ಜೀವನ ಕಲಾತ್ಮಕವಾಗಿಲ್ಲ. ಪ್ರೀತಿಯ ಸ್ಪರ್ಶವಿಲ್ಲದ ಅವನ ಕಾಮುಕತೆಯಿಂದಾಗಿ ಅವನ ಹಾಗೂ ರಾಧಾಳ ದಾಂಪತ್ಯ ವಿಷಮ ದಾಂಪತ್ಯವಾಗುತ್ತದೆ. ಬಾಬುವಿನ ಮಗ ಚಿನ್ನಿ ಮಣಿಪಾಲದಲ್ಲಿ ಇಂಜಿನಿಯರಿಂಗ್ ಹಾಗೂ ಮುಂಬೈಯಲ್ಲಿ ಸಂಗೀತ ಕಲಿಯುತ್ತಾನೆ, ತನ್ನ ಅಮೇರಿಕನ್ ಗೆಳತಿ ಕ್ಯಾತ್ರಿನ್ ಜೊತೆಯಲ್ಲಿ–ನ್ಯೂಯಾರ್ಕಿಗೆ ಹೋದ ಚಿನ್ನಿ, ತಾನು ಕ್ಯಾತ್ರಿನ್‌ಳ ಲೈಂಗಿಕ ಮೃಗಯಾವಿನೋದದ ಪ್ರಾಣಿ ಎಂದು ಗೊತ್ತಾದಾಗ , ಅವಳಿಂದ ತಪ್ಪಿಸಿಕೊಂಡು ಊರಿಗೆ ಹಿಂದಿರುಗುತ್ತಾನೆ.

ಗೌರ ಹಾಗೂ ಅವಳ ಸೊಸೆ ರಾಧಾ ಅನುಭವಿಸುವ ದಾಂಪತ್ಯದೊಳಗಿನ ಲೈಂಗಿಕ ಹಿಂಸೆ ಶಿವರಾಮ ಕಾರಂತರ 'ಧರ್ಮರಾಯನ ಸಂಸಾರ' ದಂತೆ ಭಯಾನಕವಾಗಿದೆ. ಈ ಕಾದಂಬರಿಯಲ್ಲಿರುವ ಒಂದು ಜನಪದ ಉಪಕತೆಯಲ್ಲಿ ಮೂಗಿಗೆ ಬೆರಳೇರಿಸಿರುವ ದೇವಿ, ಸೊಸೆಯೊಬ್ಬಳ ಬೈಗಳಿಗೆ ಹೆದರುತ್ತಾಳೆ. ಆದರೆ ಗೌರ–ರಾಧಾರ ಬದುಕಿನಲ್ಲಿ ಸುಖವಾಗಲೀ, ಪವಾಡವಾಗಲೀ ಇಲ್ಲ. ಅವರು ಪುರುಷಪ್ರಧಾನ ದಾಂಪತ್ಯದಲ್ಲಿ ಅಸಹಾಯಕರಾಗಿದ್ದಾರೆ. 'ಹೂ ಎಂದು ಮುಡಿಯುವಂತಿಲ್ಲ, ಹೊಲಸು ಎಂದು ಎಸೆಯುವಂತಿಲ್ಲ' ಎಂದು ತುಳುಗಾದೆ ವಿವರಿಸುವಂಥ ಅಸಹಾಯಕತೆ ಇಲ್ಲಿದೆ.

ಈ ಕಾದಂಬರಿಯ ಗಂಡು–ಹೆಣ್ಣುಗಳ ಸಂಬಂಧದ ಚಿತ್ರಣ ಸಂಕೀರ್ಣವಾಗಿದೆ. ಹಿಮಾಂಶು ಚಟರ್ಜಿಯ ಗೆಳತಿ ಮಮತಾ, ತಾಯಿಯ ಒತ್ತಾಯಕ್ಕೆ ಮಣಿದು ದಾಂಪತ್ಯದ ಬದಲು ಸ್ವಚ್ಛಂದ ಲೈಂಗಿಕ ಜೀವನವನ್ನು ಆಯ್ಕೆ ಮಾಡುತ್ತಾಳೆ. ಅಮೇರಿಕದ ಕ್ಯಾತ್ರಿನ್ ಪ್ರೀತಿಯ ಮುಖವಾಡ ಬಳಸಿ ಚಿನ್ನಿಯನ್ನು ಶೋಷಿಸುತ್ತಾಳೆ. ಕಾದಂಬರಿಕಾರ್ತಿ ಕಾತ್ಯಾಯಿನಿಯವರ ಸ್ತ್ರೀವಾದ ಹೆಣ್ಣಿನಿಂದಾಗುವ ಗಂಡಿನ ಶೋಷಣೆಯನ್ನು ಅಲಕ್ಷಿಸುವುದಿಲ್ಲ. ಈ ಕಾದಂಬರಿಯ ದಾಂಪತ್ಯ, ದಾಂಪತ್ಯೇತರ ಸಂಬಂಧಗಳು ಕಾಮತೃಪ್ತಿಯ ಮಟ್ಟದಲ್ಲೆ ಉಳಿಯುತ್ತವೆ, ಪ್ರೀತಿಯ ಹಂತಕ್ಕೆ ಬೆಳೆಯುವದಿಲ್ಲ. ಇಲ್ಲಿನ ದಾಂಪತ್ಯ ಒಡನಾಟಗಳು ಶ್ರುತಿ ಇಲ್ಲದ ಸಂಗೀತದಂತಿವೆ.

ಜಾನಪದ ಕತೆಗಳು ಹಾಗೂ ಗಾದೆಗಳ ಬಳಕೆಯಲ್ಲಿ ಲೇಖಕಿಯ ಸೂಕ್ಷ್ಮ ಕುಸುರಿ ಕೆಲಸ ಕಾಣಿಸುತ್ತದೆ. ಈ ಕಾದಂಬರಿಯಲ್ಲಿರುವುದು ಶಿವಳ್ಳಿ ತುಳು ಮಾತನಾಡುವ ಪಾತ್ರಗಳ ಬದುಕಿನ ಚಿತ್ರಣ . ಆದರೆ ಲೇಖಕಿ, ತುಳುವರೆಲ್ಲರಿಗೂ ಅರ್ಥವಾಗುವ ಜನಪ್ರಿಯವಾಗಿರುವ 'ಸಾಮಾನ್ಯ ತುಳು'ವನ್ನು ಈ ಕಾದಂಬರಿಯಲ್ಲಿ ಬಳಸಿದ್ದಾರೆ. 'ಕಬರ್ಗತ್ತಲೆ' ಶಬ್ದಕ್ಕೆ ತುಳುವಿನಲ್ಲಿ 'ಸೀಳುಕತ್ತಲೆ' 'ಗಾಢಾಂಧಕಾರ' ಇತ್ಯಾದಿ ಅರ್ಥಗಳಿವೆ. ಈ ಕಾದಂಬರಿಯ ಗೌರ– ರಾಧಾರಂಥ ಹೆಂಗಸರ ಪಾಲಿಗೆ ಪ್ರೀತಿ, ಆತ್ಮಿಯತೆಗಳಿಲ್ಲದ ದಾಂಪತ್ಯವೇ 'ಕಬರ್ಗತ್ತಲೆ' ಯಾಗಿದೆ. ಈ ಕತ್ತಲೆಯ ಭಯ ಮತ್ತು ಹಿಂಸೆಯಿಂದ ಅವರಿಗೆ ಬಿಡುಗಡೆ ಇಲ್ಲ.

ಚಿನ್ನಿಯ ಅಕ್ಕ ಮಲ್ಲಿಕಾಳ ಬಾಲ್ಯವನ್ನು ಉತ್ಸಾಹದಿಂದ ಚಿತ್ರಿಸಿರುವ ಲೇಖಕಿ ಮುಂದೆ ಅವಳನ್ನು ಅಲಕ್ಷಿಸಿದ್ದಾರೆ. ಸರಸುವಿನ ಸಂಸಾರದ ಕತೆ ಸಮಾನಾಂತರ ರೇಖೆಯಾಗಿ ಬೆಳೆಯದೆ ಅಂಚಿನಲ್ಲೇ ಉಳಿಯುತ್ತದೆ. ಆದರೆ ಯಾವ ಕಾರಣಕ್ಕೂ ಯಾವ ಪಾತ್ರವನ್ನೂ ಅನಾದರದಿಂದ ನೋಡದ ತುಂಬು ಜೀವನಪ್ರೀತಿಯಲ್ಲಿ ಲೇಖಕಿಯ ಪ್ರಬುದ್ಧತೆ ಕಾಣಿಸುತ್ತದೆ.

ಕಾತ್ಯಾಯಿನಿ ಕುಂಜಿಬೆಟ್ಟು ಅವರ 'ಕಬರ್ಗತ್ತಲೆ' ತುಳು ಕಾದಂಬರಿಯ ಸಾತತ್ಯ, ಭವಿಷ್ಯದ ಕುರಿತು ಭರವಸೆ ಮೂಡಿರುವ ಅಸಾಧಾರಣ ಕಾದಂಬರಿ.

* * *

